ಶ್ರೀ ಮುರಗೋಡ

# ಮಹಾಂತಸ್ವಾಮಿಗಳ ಚರಿತ್ರೆ



ಪಿ. ಸಿ. ಶಾಬಾದಿಮಠ ಬುಕ್-ಡಿಪೋ,

[illegible] ೨೬] — ಗದಗ. —

॥ ಶ್ರೀ ಗುರು ಸಿದ್ಧಲಿಂಗೇಶ್ವರ ಪ್ರಸನ್ನ ॥

ಮುರುಗೋಡ

# ಶ್ರೀ ಮಹಾಂತ ಶಿವಯೋಗಿಗಳ ಚರಿತ್ರೆ

(ಪವಾಡಗಳು ಮತ್ತು ನೂರೆಂಟು ನಾಮಾವಳಿಗಳು ಸಹಿತ)



ಸಂಗ್ರಹಕಾರರು :

ವೀರಪ್ಪ ಸಿದ್ದಪ್ಪ ಸಾಗರ.



ಪ್ರಕಾಶಕರು :

ಮೆ॥ ಪಿ. ಸಿ. ಶಾಬಾದಿಮಠ

ಬುಕ್ ಡಿಪೊ, ಗದಗ.

1976

# ಮುನ್ನುಡಿ

ಪ್ರಿಯ ಓದುಗರ ಸಮ್ಮುಖದಲ್ಲಿ ಈ ಮುನ್ನುಡಿಯಲ್ಲಿ ಶ್ರೀ ಅಜ್ಜನವರ ಬಗ್ಗೆ ಬರೆದು ತಿಳಿಸುವದು ಅಷ್ಟೊಂದು ಸರಿಕಾಣದ ಪ್ರಯುಕ್ತ ನನ್ನ ಅಲ್ಪ ಪರಿಚಯವನ್ನು ಮಾತ್ರ ಮುನ್ನುಡಿಯಲ್ಲಿ ಮೂಡಿಸುವ ಪ್ರಯತ್ನ ಮಾಡುತ್ತಿದ್ದೇನೆ.

ನಾನು ೧೯೬೯ ರಲ್ಲಿ ಶ್ರೀ ಶಿವಯೋಗಿಗಳ ಸನ್ನಿಧಿಗೆ ಹೋಗಿ ೧೦೮ ನಾಮಾವಳಿಯ ಕಿರು ಹೊತ್ತಿಗೆಯ ಕೈ ಬರಹವನ್ನು ತೋರಿಸಿದಾಗ ಶ್ರೀಗಳು ಮೆಚ್ಚಿ, ಆಶೀರ್ವದಿಸಿ ನನ್ನ ಮನದಾಸೆಯಂತೆ ಈ ಗದ್ಯ ಚರಿತ್ರೆ ಬರೆಯುವ ಆಶೆಯನ್ನು ಅರಿಕೆ ಮಾಡಿಕೊಂಡಾಗ, ಬರಿಯಪ್ಪಾ ಆದರೆ ಇದ್ದ ವಿಷಯವನ್ನು ಇದ್ದಂತೆ ಬರೆ ಎಂದು ಪ್ರೋತ್ಸಾಹದ ಉದ್ಗಾರದೊಡನೆ ಆಶೀರ್ವದಿಸಿದರು. ಅವರ ಅಮರಾಶೀರ್ವಾದದ ಪ್ರತಿಫಲವೆನಿಸಿ ಚರಿತ್ರೆ ಬರೆಯುವ ಈ ನನ್ನ ಸಾಹಸ ಸಫಲವಾಗಿದೆ ಎಂದು ಹೇಳದಿರಲಾರೆ. ಮತ್ತು ಬರೆದು ಮುಗಿಸಿದೊಡನೆ ಮುಗಿಯಲಿಲ್ಲ ಎನ್ನುವಂತೆ ಅಚ್ಚು ಹಾಕಿಸುವ ಹೊಣೆಗಾರರಾದ ಮೆ|| ಪಿ. ಸಿ. ಶಾಬಾದಿಮಠ ಬುಕ್ಕ–ಸೇಲರ್ ಗದಗ ಇವರ ಉಪಕಾರ ಸ್ಮರಿಸುವದು ನನ್ನ ಕರ್ತವ್ಯ, ಕೊನೆಯದಾಗಿ ಸ್ವಾಮಿ ಶಿವಯೋಗಿಗಳ ಕರುಣೆ ನನ್ನ ನಿಮ್ಮೆಲ್ಲರಿಗೆ ರಕ್ಷಾಕವಚವಾಗಿರಲಿ ಎಂದು ಹಾರೈಸುವ,

ಸ್ವಾಮಿ ಶ್ರೀ ದುರುದುಂಡಿ ಮಹಾಂತಜ್ಜನವರ ಭಕ್ತ

ವೀರಪ್ಪ ಸಾಗರ

# ಪರಿವಿಡಿ

# ಪೀಠಿಕೆ

ಮುರುಗೋಡ ಮಠವನ್ನು ಅವಲೋಕಿಸಿದಾಗ ಆನಂದ ಆಶ್ಚರ್ಯಗಳು ಏಕಕಾಲಕ್ಕೆ ಉದ್ಭವಿಸುವವು. ಮುರುಗೋಡ ಭಕ್ತಬಾಂಧವರ ಭಕ್ತಿಯ ಹಿರಿ ಗುರುತನ್ನು ಹೊತ್ತು ವಿರಾಜಮಾನವಾಗಿ ಕಂಗೊಳಿಸುವ ಮಠದ ವರ್ಣನೆಯನ್ನು ಆದೆಷ್ಟು ತೆರನಾಗಿ ಮಾಡಿದರೂ ಕಡಿಮೆ. ವರ್ಣನೆ ಮಾಡುವದಕ್ಕಿಂತಲೂ ಖುದ್ ಮುದ್ದಾಮು ನೋಡಿ ಆನಂದಿಸುವಂತಹದು ಮುರುಗೋಡ ಮಹಾಂತ ಶಿವಯೋಗಿಗಳ ಪುಣ್ಯತಾನವಾದ ಮಠ.

ಸುತ್ತುಮುತ್ತಲಿನ ಅಷ್ಟೇ ಏಕೆ ಇಡೀ ಭಾರತದ ಮೂಲೆ ಮೂಲೆಗಳಿಂದ ಅಪ್ಪನವರ ದರ್ಶನಾಶೀರ್ವಾದಗಳ ಅಪೇಕ್ಷೆಯಲ್ಲಿ ಬರುವ ಭಕ್ತ ತಿಂಥಿಣಿಯ ಹಿರಿ ಹಾರೈಕೆಗೆ ಪಡಿನೆರಳಾಗಿ ನಿಂತ ಪೆ.ೀಲ್ ಹೊದಿಕೆಯುಳ್ಳ ಸಾಕಷ್ಟು ವಿಶಾಲ ಛಾವಣಿಯನ್ನು ನಿರ್ಮಿಸಿದ ಮಠ ಉತ್ಕೃಷ್ಟವಾದ ಅತ್ಯುನ್ನತ ಮಟ್ಟದಲ್ಲಿ ರೂಪಗೊಂಡು ಕೈಲಾಸಕ್ಕೆ ಸಾಟಿಯಾಗಬಲ್ಲದೇನೋ ಅನ್ನುವಂತೆ ಕಾಣುತ್ತದೆ.

ಎರಡಂತಸ್ತಿನ ವಿಶಾಲ ಉನ್ನತ ಮಠದಲ್ಲಿ ಷಟಸ್ಥಲದ ಸೂಚನೆಯನ್ನು ಹೊತ್ತು ಭಕ್ತ ಬಳಗದ ಮನೋಮಂದಿರದಲ್ಲಿ ವೀರಶೈವ ಮತದ ತತ್ವ ಜಾಗ್ರತೆಯನ್ನುಂಟು ಮಾಡುವಂತೆ ಮತ್ತು ಆ ತತ್ವವನ್ನು ನಿರೂಪಿಸುವಂತೆ ಆರು ಪ್ರಭಾವಳಿಗಳ ಕಮಾನು ನಿರ್ಮಿಸಿ ಪ್ರತಿಯೊಂದು ಕಮಾನುಗಳ ಮೇಲೆ ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ, ವಿಭೂತಿ, ರುದ್ರಾಕ್ಷಿ, ಮಂತ್ರ ಹೀಗೆ ಬಂದ ಭಕ್ತರ ಹೃದ್ಭೂಮಿಯಲ್ಲಿ ಅಚ್ಚಳಿಯದೇ ನಿಚ್ಚಳವಾಗಿ ಮೂಡಿ ನಿಲ್ಲುವಂತೆ ಮಾಡಿದ್ದಾರೆ ಎನ್ನುವದು ಭಕ್ತ ಭಾವಕ್ಕೊಂದು ಹೆಮ್ಮೆಯ ವಿಷಯವೇ ಸರಿ. ಇಲ್ಲಿಯ ಶಾಂತ ವಾತಾವರಣದಲ್ಲಿ ಅಪ್ಪನವರ ದರ್ಶನದ ಅಪೇಕ್ಷೆಯಲ್ಲಿ ಎಲ್ಲವನ್ನು ಮರೆತ ಭಕ್ತ ನಿಜವಾಗಿ

ಪುಣ್ಯಶಾಲಿ. ಆ ತಾನದ ಮಹಿಮೆಯೇ ಅಂತಹದು. ಹಸಿದ ಹೊಟ್ಟೆ ತುಂಬಿದಂತಾಗಿ ಶಿವಾನುಭವ ಸಂತೃಪ್ತಿಯುಂಟಾಗಿ ನಿಶ್ಚಿಂತನಾಗಬಹುದು, ನಿರ್ಮಲನಾಗಬಹುದು, ನಿಜಬಾಳಿನ ತಿರುಳನ್ನು ತಿಳಿಯಬಹುದು. ಆತ್ಮೋನ್ನತಿಯ ಮಾರ್ಗವನ್ನು ಕಂಡುಕೊಳ್ಳಬಹುದು.

ಅಲ್ಲದೇ ಮಠದ ಮಧ್ಯದಲ್ಲಿ ಅಪ್ಪನವರ ಪ್ರತಿರೂಪವೇನೋ ಅನ್ನುವ ತೆರದಿ ದೇದೀಪ್ಯಮಾನವಾದ ಕರ್ತೃಗದ್ದುಗೆಯ ಮೂರ್ತಿಯನ್ನು ಕಂಡು ಭಕ್ತಿಯ ಭಾವೋದ್ರೇಕವಾಗಿ ಸಾಷ್ಟಾಂಗ ಹಾಕಿ, ಮಣಿದು ಕರಮುಗಿದು ಇಂದು ನನ್ನ ಜನ್ಮ ಸಾರ್ಥಕವಾಯಿತು, ಪಾವನವಾಯಿತು ಎಂದು ಎಂಥ ಪಾಮರ ವ್ಯಕ್ತಿಯಾದ ಭಕ್ತನೂ ಸಂತಸದ ಉಸುರಿಳಿಯದಿರನು.

ಗದ್ದುಗೆಯ ಬಳಿಯಲ್ಲಿ ಸತತವಾಗಿ ಉರಿಯುತ್ತಿರುವ ನಂದಾದೀಪ, ಕ್ರಮಬದ್ಧವಾಗಿ ನಡೆಯುವ ಆ ದೀಪೋತ್ಸವ, ಮಠದಲ್ಲಿ ಕಾಲಿಟ್ಟ ಭಕ್ತನನ್ನು ಬೆರಗುಗೊಳಿಸಿ ಮೌನ, ಮೂಕ ಶಿಲೆಯಾಗಿ ನಿಲ್ಲುವಂತೆ ಮಾಡುವದು. ಈ ಉನ್ನತವಾದ ಮಠದ ಮೇಲ್ ಅಂತಸ್ತಿನಲ್ಲಿ ಹಲವಾರು ಕೋಣೆಗಳನ್ನು ನಿರ್ಮಿಸಿ, ಬರುಹೋಗುವ ಪುರಾಣ ಪ್ರವಚನಕಾರರಿಗೂ, ಗಾಯಕ ಬಳಗದವರಿಗೂ, ಅತಿಥಿಗಳಾಗಿ ಬರುವ ಹಲವಾರು ಗ್ರಾಮ ಪ್ರಮುಖ ಮಹಾಶಯರಿಗೆ ಇಳಿದುಕೊಳ್ಳುವ ವ್ಯವಸ್ಥೆಯಿದೆ. ಅತಿಥಿಗಳಿಗಾಗಿ ಪೂಜಾಮಂದಿರ ಬೇರೆ, ಹಲವಾರು ಸಾಹಿತ್ಯ ಸರಂಜಾಮುಗಳ ಸಂಗ್ರಹಕ್ಕೆ, ದಾಸೋಹಕ್ಕೆ ಬರುವ ದವಸಧಾನ್ಯ ಇನ್ನಿತರ ಪದಾರ್ಥಗಳನ್ನು ಸಂಗ್ರಹಿಸುವ ಕೋಲಿ ಬೇರೆ, ದಾಸೋಹ ಧರ್ಮ ಕಾರ್ಯದಲ್ಲಿ ದುಡಿದು ದಣಿಯುವ ಸೇವಕ ಬಳಗದವರ ವಿಶ್ರಾಂತಿಯ ಸ್ಥಾನವು ಬೇರೆ. ಎಡಗಡೆಯ ಹೆಬ್ಬಾಗಿಲದ ಪಕ್ಕದಲ್ಲಿ ಭಾವಿ ಉಂಟು. ಎದುರುಗಡೆಯಲ್ಲಿ ಶ್ರೀ ಮಹಾಂತ ಸ್ವಾಮಿಗಳ ಲಿಂಗಪೂಜಾ ಮಂದಿರ, ಲಿಂಗಪೂಜೆಯನ್ನು, ಸಹಸ್ರ ಗಣ ಪಾರಾಯಣವನ್ನು ಬಿಡದೇ ನಿರಂತರ ನೇಮನಿಷ್ಠೆಯಲ್ಲಿ ಸಾಂಗಗೊಳಿಸಿದ ಅಪ್ಪನವರು ಆನಂದದಿಂದ ಬಂದು ಕುಳಿತುಕೊಂಡು ಸಹಸ್ರಾರು ಭಕ್ತರಿಗೆ ದರ್ಶನಾಶೀರ್ವಾದ ನೀಡುವ ವಿಶ್ರಾಂತಿ ಮಂದಿರವು, ವಿಶಾಲವಲ್ಲದಿದ್ದರೂ ಬಲು ಅಚ್ಚುಕಟ್ಟಾಗಿದೆ.

ಇನ್ನು ಜಗಮೆಚ್ಚಿದ ಶರಣ ಪುಣ್ಯಪುರುಷ, ಪವಾಡಪುರುಷ ಶ್ರೀ ಶರಣ ಬಸವೇಶ್ವರರ ದಾಸೋಹ ಧರ್ಮವನ್ನ ನೆನಪಿಗೆ ತಂದುಕೊಡುವಂತೆ ನಿತ್ಯ ಇಪ್ಪತ್ತನಾಲ್ಕು ಘಂಟೆ ಸತತವಾಗಿ ಸಾಗಿರುವ ದಾಸೋಹವನ್ನು ವೀಕ್ಷಿಸಿ, ಆ ಪುಣ್ಯ ಪ್ರಸಾದವನ್ನುಂಡರೆ ಜನ್ಮ ಸಾಫಲ್ಯವಾಗುವದರಲ್ಲಿ ಸಂದೇಹವಿಲ್ಲ. ಅಪ್ಪನವರ ದೃಷ್ಟಿಯಲ್ಲಿ ಬಡವ, ಬಲ್ಲಿದ, ಮೇಲು, ಕೀಳು, ಜಾತಿ, ಮತ ಪಂಥಗಳ ಭೇದ ಭಾವವಂತೂ ಕೇಳಬಾರದು. ಸಕಲರನ್ನೂ ಒಂದೇ ತೆರನಾಗಿ ಕಂಡು ಅವರ ಕಷ್ಟ ಕೋಟಲೆಗಳನ್ನು ಕೇಳಿ ಪರಿಹರಿಸುವ ಪುಣ್ಯಜೀವಿಗಳು. ಪರಮಾತ್ಮನ ಪ್ರತಿಛಾಯೆಯಂತಿರುವ ಅಪ್ಪನವರ ಆತ್ಮೀಯ ಭಾವನೆಗೆ ಬೆರಗಾಗಿ ಉಳಿದ ಮಠಾಧಿಪತಿಗಳಾದ ಗುರು ಚರ ಬಳಗದ ಸ್ವಾಮಿಗಳು ಸಹಕಾರ ಭಾವನೆಯಿಂದ ನಡೆದುಕೊಳ್ಳುವದನ್ನು ನೋಡಿದರೆ ಸರ್ವರು ಸಮಾನರು, ಶಿವನ ದೃಷ್ಟಿಯಲ್ಲಿ ಮೇಲು ಕೀಳು ಎಂಬ ಭಾವನೆಗೆ ಅವಕಾಶವಿಲ್ಲ ಎನ್ನುವದನ್ನು ತೋರಿಸಿಕೊಟ್ಟಂತೆ ವರ್ತಿಸುವ ಶ್ರೀ ಮಹಾಂತ ಸ್ವಾಮಿಗಳ ಅಗಮ್ಯ ಲೀಲಾಮಯ ಜೀವನದ ಉತ್ಕೃಷ್ಟ ಇಚ್ಛೆಯನ್ನು ಅರಿತುಕೊಂಡಂತಾಗುವದು.

ಯಾರೇ ಬರಲಿ, ಎಂಥವರೇ ಇರಲಿ ಸದಾ ಸಂತಸದ ಸ್ವಾಗತ ದೊರೆಯಲೇಬೇಕು. ಸೇವಕರಾಗಿ ಕಾರ್ಯ ಮಾಡುವವರಲ್ಲಿಯೂ ಸಹಕಾರ ಭಾವನೆಗೆ ಕೊರತೆಯಿಲ್ಲ. ಮುರುಗೋಡ ಮಹಾ ಭಕ್ತವೃಂದವು ಮಹಾಂತ ಸ್ವಾಮಿಗಳನ್ನು ಪಡೆದುಕೊಂಡು ಜನ್ಮ ಸಾಫಲ್ಯಗೊಳಿಸಿಕೊಂಡಿರುವ ಪುಣ್ಯಾತ್ಮರು. ಅವರ ಭಕ್ತಿ ಶ್ರದ್ಧೆಗಳನ್ನು ಅರಿತ ಶಿವನು ತನ್ನ ಸಾತ್ವಿಕ ಕಳೆಯಿಂದೊಪ್ಪುವ ಅಪ್ಪನವರನ್ನು ಕರುಣಿಸಿ ಮುರುಗೋಡವನ್ನು ಪುಣ್ಯದ ಪಾವನ ಚರಿತ್ರೆಯಲ್ಲಿ ರೂಪಗೊಳ್ಳುವಂತೆ ಮಾಡಿರುವನು. ಶಿವನ ಲೀಲೆಗಳನ್ನು ಅರಿತು ಅರಗಿಸಿ ಅನುಸರಿಸಿ ನಡೆದುಕೊಳ್ಳುವದು ಅಸಾಮಾನ್ಯ ಕಾರ್ಯವಾದರೂ ಶ್ರೀ ಮಹಾಂತ ಸ್ವಾಮಿಗಳ ಪುಣ್ಯ ಪ್ರಭಾವದಲ್ಲಿ ಮುರುಗೋಡ ಭಕ್ತ ಬಳಗ ಪಡೆದುಕೊಂಡಿರುವದು

ಇಷ್ಟೊಂದು ಘನತೆ ಗೌರವ ಆಕರ್ಷಣೆಗಳು ಅಪ್ಪನವರಲ್ಲಿದ್ದವು. ಭಕ್ತರ ಉದ್ಧಾರ ಹೇಗೆ ರೂಪಗೊಂಡಿದೆ ಎಂದು ತರ್ಕಿಸುವ ತಾರ್ಕಿಕರ ಬುದ್ಧಿಗೆ

ನಿಲುಕದಂತೆ ಶಿವಯೋಗಿ ಅಪ್ಪನವರು ಸ್ವಭಾವತಃ ಇಲ್ಲದ ಉಸಾಬರಿಯನ್ನೇ ಅರಿಯದವರು. ಅರಿತೋ ಅರಿಯದಲೋ ತಪ್ಪು ಮಾಡುವದು ಮಾನವನ ಸಹಜ ಸ್ವಭಾವ, ಸೃಷ್ಟಿಯು ನೇಮವೆಂದು ಸಕಲರನ್ನು ಸಮಾನ ದೃಷ್ಟಿಯಿಂದ ಕಾಣುವದೊಂದೆ ಅವರ ಹುಟ್ಟುಗುಣ. ಬಡವ ಬಲ್ಲಿದ, ಮೇಲು ಕೀಳು ಜಾತಿ ಮತ ಪಂಥಗಳ ಮತ್ಸರವನ್ನು ಅರಿಯದೇ ಸಕಲರೊಡನೆ ನಗುನಗುತ್ತ ವರ್ತಿಸುವ ಅಪ್ಪನವರ ಇರುವಿಕೆಯು ಹಿರಿಗುರುತೇ ಈ ಉನ್ನತ ಗೌರವಗಳಿಗೆ ಕಾರಣವಾಗಿ ಮುರುಗೋಡ ಮಹಾಜನತೆಯ ಪುಣ್ಯಜ್ಯೋತಿ ಶ್ರೀ ಗುರುಮೂರ್ತಿ ಮಹಾಂತ ಸ್ವಾಮಿಗಳ ರೂಪದಲ್ಲಿ ರಾರಾಜಿಸುತ್ತಿರುವದು. ಒಂದು ವೇಳೆ ಆಸೆ ಆಕಾಂಕ್ಷೆಗಳಿಗೆ ಮೋಹಗೊಂಡು ಮಾಯಾ ಮಂತ್ರಗಳಿಗೆ ಮಾರು ಹೋಗಿದ್ದರೆ, ತಮಗಿದ್ದ ಅಧಿಕಾರ ಪೀಠ, ಉನ್ನತ ಸ್ಥಾನಮಾನಗಳ ನೆಲೆ ಎನಿಸಿದ ಅರಭಾವಿ ಪೀಠವನ್ನು ಮರಿದೇವರೆನಿಸಿದ ಶಿವಾನಂದ ಸ್ವಾಮಿಗಳ ವಶಕ್ಕೆ ಒಪ್ಪಿಸಿ, ಹಳ್ಳದಕಾಡಿನಲ್ಲಿ ವೈಕೊರೆಯುವ ಛಳಿಯಲ್ಲಿ ಗದ್ದುಗೆಯ ಬಳಿಯಲ್ಲಿ ಉಳಿಯುತ್ತಿರಲಿಲ್ಲ. ಅಪ್ಪನವರ ಅಂತರಾತ್ಮದ ಹೆಬ್ಬಯಕೆಯೆಂದರೆ ಸ್ವಾಮಿತ್ವದ ನಿಜಜೀವನದ ಗುರಿ ತಿಳಿದು, ಲಿಂಗಪೂಜೆಯೊಂದೇ ತಮ್ಮ ಬಾಳಿನ ಮೂಲ ಗುರಿ ಎಂದರಿತು ಲಿಂಗ ಸಂಗದ ಮಹಿಮೆಗಾಗಿ ಲಿಂಗ ಪೂಜಾ ಲೋಲರಾಗಿ ಅನುಷ್ಠಾನ, ತಪೋನಿಷ್ಠೆಗಳಲ್ಲಿ ತಪೋಧನರೆನಿಸಿ, ಶಿವಸಾಕ್ಷಾತ್ಕಾರದ ಸಲುವಾಗಿ ಶ್ರಮಿಸುವದಾಗಿತ್ತು. ಈಗ ಮುರಗೋಡದಲ್ಲಿ ಬಂದುಳಿಯಬೇಕಾದರೂ ಮುರುಗೋಡ ಭಕ್ತ ಬಳಗದವರ ಹಾಗೂ ಹಲವಾರು ನೆರೆಯ ಗ್ರಾಮದ ಭಕ್ತ ಜನತೆಯ ಅತೀ ವತ್ತಾಯದಾಸೆಗೆ ಅನಿವಾರ್ಯವೆಂದು ಭಕ್ತಿ ಪಾಶಕ್ಕೊಳಗಾಗಿ ಬಂದರು.

ಇಷ್ಟೇ ಅಲ್ಲ ಅಪ್ಪನವರ ಸಮಗ್ರ ಜೀವನದ ಇತಿಹಾಸವನ್ನು ತಿಳಿಯ ಬಯಸಿದ ಅಲ್ಪಮತಿ ಬರಹಗಾರನಾದ ನಾನು ಹಿರಿಯರಿಂದ ಕೇಳಿ ಕೆಲವರಿಂದ ತಿಳಿದುಕೊಂಡು ಇನ್ನೂ ಅನೇಕ ಗ್ರಂಥಗಳ ಋಣ ಪಡೆದು ಶ್ರೀ ಅಪ್ಪ ಮಹಾಂತಪ್ಪಗಳ ಪುಣ್ಯ ಚರಿತ್ರೆಯನ್ನು ಬರೆಯಲು ಸಾಹಸ ಮಾಡಿದೆ, ನನ್ನೀ ಸಾಹಸ ಯಶಸ್ವಿಯಾಗಿ ಭಕ್ತ ಬಾಂಧವರ ಬಾಳಿಗೊಂದು ಮುಂಬೆಳ ಕಾದರೆ ನನ್ನೀ ಕಾರ್ಯ ಸಾರ್ಥಕವಾದಂತೆ ಎಂದು ನಂಬಿರುವೆನು.

ಆತ್ಮದ ಅರಿವು ಪರಮಾತ್ಮನನ್ನೂ ಪರಮಾತ್ಮನ ಸ್ವರೂಪವನ್ನೂ ಗುರುತಿಸುವ ಸಾಹಸವೆಂದು ಜ್ಞಾನಿಗಳು ಹೇಳುತ್ತಾರೆ. ಶಿವನು ತನ್ನ ಸಾತ್ವಿಕ ಕಳೆಯನ್ನು ಮಹಾಂತೇಶ ರೂಪದಿಂದ ಭೂಮಿಯ ಅಜ್ಞಾನವನ್ನು ಹೊಡೆದೋಡಿಸುವ ಮಹತ್ಕಾರ್ಯಕ್ಕೆ ಕಳುಹಿಸಿದನು. ಭಕ್ತ ಜನತೆಯ ಅಜ್ಞಾನದ ಅಂಧಃಕಾರವನ್ನು ತೊಡೆದುಹಾಕಿ ಜ್ಞಾನ ಜ್ಯೋತಿಯ ಪ್ರಕಾಶದಂತೆ ಉಜ್ವಲ ಬೆಳಕು ಬೀರುವ ಮಹಾಂತ ಜ್ಯೋತಿಯಿಂದ ಭಕ್ತರ ಉದ್ಧಾರವಾಗಲೆಂದು ಮಹಿಮಾ ನಿಧಿ ಶ್ರೀಗುರು ಮಹಾಂತ ಶಿವಯೋಗಿಗಳ ಕೃಪಾಶೀರ್ವಾದ ಬಯಸಿ ಮುನ್ನಡೆಯುವೆನು.

ವೀರಪ್ಪ ಸಾಗರ.

|| ಶ್ರೀ ಮಹಾಂತೇಶ ಪ್ರಸನ್ನ ||

# ೧ ನೇ ಅಧ್ಯಾಯ

## ಶಿವಯೋಗಿ ಶ್ರೀ ಮಹಾಂತ ಸ್ವಾಮಿಗಳ ಮಾತಾ-ಪಿತೃಗಳು.

ಬೆಳಗಾಂವ ಜಿಲ್ಹೆಯಲ್ಲಿ ರಾಮದುರ್ಗ ತಾಲೂಕ ಪೈಕಿ ಮೂವತ್ತು ಮೂರು ಹಳ್ಳಿಗಳಲ್ಲಿ ಒಂದಾದ ಚಿಕ್ಕ ಗ್ರಾಮ ಈ ಸಾಲಹಳ್ಳಿ ಗ್ರಾಮ.

ಕುಗ್ರಾಮವೆಂದು ಕರೆಯಿಸಿಕೊಳ್ಳುವ ಈ ಸಾಲಹಳ್ಳಿ ಗ್ರಾಮದ ಹಿರಿಯ ಮಠದ ಅಧಿಕಾರಿಗಳ ಮನೆತನದಲ್ಲಿ ಹುಟ್ಟಿದವರು ಶ್ರೀ ಮಹಾಂತ ಸ್ವಾಮಿಗಳು.

ಸಾಲಹಳ್ಳಿ ಗ್ರಾಮವು ಹಳ್ಳಿಗರ ಗ್ರಾಮ್ಯ ಭಾಷೆಯಲ್ಲಿ ಸಾಲಳ್ಳಿ ಎಂದು ಕರೆಯುವ ವಾಡಿಕೆಯುಂಟು. ಸಾಲಹಳ್ಳಿಯ ಮೂಲ ಸ್ಥಿತಿಗತಿಗಳನ್ನು ವಿಚಾರಿಸಿದಾಗ ಒಕ್ಕಲುತನದ ಹೆಮ್ಮೆಯ ಬೀಡು, ಕಾಡುಮೇಡುಗಳ ಗೂಡು, ಹಳ್ಳ ಕೊಳ್ಳ ಬೀಳು ಭೂಮಿಯಿಂದ ಕೂಡಿದೆ. ಒಕ್ಕಲು ಮಕ್ಕಳು ತಮ್ಮ ವ್ಯವಸಾಯ ಧರ್ಮದಂತೆ ಉತ್ತು ಬಿತ್ತಿ ಬೆಳೆವ ಜೋಳ, ಕಡಲೆ, ಗೋದಿ, ಹತ್ತಿ, ನವಣೆ ಮುಂಗಾರಿ ಜೋಳದೊಡನೆ ಪೈಪೋಟಿಯಲ್ಲಿ ಬೆಳೆಯುವ ಬೆಳೆ ಶೇಂಗಾ ಒಂದು. ಮಳೆಗಾಲ ಬಹುತರ ಕಡಿಮೆಯಲ್ಲದಿದ್ದರೂ ಹೆಚ್ಚೇನೂ ಅಲ್ಲದ ಈ ಗಡಿನಾಡ ಗರಸು, ಹುರಿಗಲ್ಲು ಹುಟ್ಟೆ ಉಸುಕಿನ ರಾಶಿಯನ್ನು ಹೊತ್ತು ಮಾನವ ಜೀವಿತಕ್ಕೆ ಮೂಲ ಆಧಾರವೆನಿಸುವ ಇನ್ನಿತರ ಆಹಾರ ಒದಗಿಸುವ ಪುಣ್ಯಭೂಮಿ. ಒಕ್ಕಲಿಗನ ಶ್ರಮಕ್ಕೆ ಪ್ರತಿಫಲವೆಂದು ಎನಿತೆಲ್ಲ ಬೆಳೆಗಳಿಂದ ಸಂತಸಪೂರ್ಣ ಸಮೃದ್ಧ ಬದುಕಿನ ಪುಣ್ಯ ಭೂಮಿಯಾಗಿತ್ತು. ಒಕ್ಕಲುತನವೇ ಮೂಲ ಉದ್ಯೋಗವಾಗಿ ರೈತ ಜೀವನದ ಪುಣ್ಯದ ಬದುಕು ಎಡಬಿಡದೇ ಸಾಗುವಂತೆ ಸಾಗಿ ಸಾಲಹಳ್ಳಿಯ ಸಮೃದ್ಧ ಬದುಕಿನ ಹಿನ್ನೆಲೆಯಾಗಿ ಪುಣ್ಯ, ಧರ್ಮ, ನೀತಿ ನೇಮಗಳ ನೆಲೆಯು ಎನಿಸಿ ಸುತ್ತಲಿನ ಸಕಲ ಹಳ್ಳಿಗಳಲ್ಲಿ ಆದರ್ಶ ಗ್ರಾಮವೆಂದು ಹೆಸರು ಪಡೆದುಕೊಂಡಿತ್ತು. ಅಪ್ಪ ಮಹಾಂತಸ್ವಾಮಿಗಳನ್ನು ಹೆತ್ತ ಈ ಪುಣ್ಯಮಯ ತಾಣದಲ್ಲಿ ಅವರ ಉಜ್ವಲ ಕೀರ್ತಿಯ ಶ್ರೀ ಪ್ರಕಾಶ

ವನ್ನು ಪಡೆದುಕೊಂಡಿಲ್ಲವೆಂದು ಹಲವಾರು ಭಕ್ತರು ವ್ಯಸನದ ಉಸಿರು ಸುರಿಸುತ್ತಿದ್ದರು.

ಜನ್ಮ ಭೂಮಿಯ ಋಣ ತೀರಿದರೆ, ಶಿವನ ಅನುಗ್ರಹ ತಪ್ಪಿದರೆ ಕೈಗೆ ಬಂದದ್ದು ಬಾಯಿಗೆ ಬರಲಿಲ್ಲವೆನ್ನುವಂತಾಗಿದೆ ಸಾಲಳ್ಳಿ ಗ್ರಾಮ ನಿವಾಸಿಗಳ ಸ್ಥಿತಿ. ಅಪ್ಪ ಮಹಾಂತ ಸ್ವಾಮಿಗಳು ಮಠದ ಅಧಿಕಾರಿಯಾಗಿ ವರುಷಾರು ತಿಂಗಳ ಕಾಲ ಮಾತ್ರ ಉಳಿದು ಮುಂದೆ ತಮ್ಮ ಜೀವಿತದ ಮಹೋನ್ನತ ಗುರಿಮುಟ್ಟಲು ಆರಥಾವಿಯಿಂದ ಮುರುಗೋಡಕ್ಕೆ ಬಂದು ಭಕ್ತರ ಭಕ್ತಿ ರಜ್ಜುವಿನಲ್ಲಿ ಬಂಧಿತರಾಗಿ ನೆಲೆಸಿ ಬಾಳಿದರು. ಯಾವುದಕ್ಕೂ ಶಿವನ ಅನುಗ್ರಹಬೇಕು ಎಂದು ಅಪ್ಪನವರು ಭಕ್ತರನ್ನು ಪದೇ ಪದೇ ಎಚ್ಚರಿಸುತ್ತಿದ್ದ ಸತ್ಯನುಡಿ ಅವರ ಆ ಘಟನೆಯಿಂದಲೇ ಸತ್ಯವೆನಿಸುವದು. ಪರಿಕರ ಇರಿ ದಾಟದಲ್ಲಿ ಸರ್ವವನ್ನೂ ತ್ಯಜಿಸಿ ಆತ್ಮಾನಂದ ಲಿಂಗನಿಷ್ಠೆಯಲ್ಲಿ ಶಿವಸಾಕ್ಷಾತ್ಕಾ ರದ ಶ್ರೀ ಪ್ರಕಾಶದತ್ತ ಸಾಗಿದರು. ಅಂಥವರನ್ನು ಕಳೆದುಕೊಂಡ ಸಾಲಹಳ್ಳಿ ಗ್ರಾಮ ನಿಜಕ್ಕೂ ದುರ್ದೈವಿಯಾಗಿದ್ದಿತು. ಇಂತಿರ್ಪ ಸಾಲಹಳ್ಳಿಯ ಹಿರಿಯ ಮಠದೊಡೆಯರಾದ ವೀರಸಂಗಯ್ಯ ಸ್ವಾಮಿಗಳು ಆಚಾರ ಶೀಲ ಸಂಪನ್ನರು, ಕ್ರಿಯಾಚರಣೆಯುಳ್ಳವರು, ವೀರಶೈವಾಚಾರ ಸಂಪತ್ತುಳ್ಳವರು ಧರ್ಮನಿಷ್ಠರು, ದಾಸೋಹ ಧರ್ಮವನ್ನು ಅರಿತವರು ಹಾಗು ಆಗಿನ ಕಾಲಮಾನಕ್ಕೆ ತಕ್ಕಂತೆ ಆಚಾರ, ವಿಚಾರ, ವಿದ್ಯಾ, ಬುದ್ಧಿಗಳನ್ನು ಅರಿತು ಅರಗಿಸಿಕೊಂಡವರು ಆಗಿದ್ದರು.

ಅಲ್ಲದೇ ತಮಗಿದ್ದ ಹಿರಿಯ ಮಠದ ಅಧಿಕಾರದಲ್ಲಿ ನಿತ್ಯವೂ ಅಯ್ಯನವರ ಕಾಯಕವೆನಿಸಿದ ಭಿಕ್ಷೆಗೆ ಊರಲ್ಲಿ ಹತ್ತೆಂಟು ಭಕ್ತರ ಮನೆ ಗಳನ್ನು ಸುತ್ತಿ ಬಂದ ಹಿಟ್ಟನ್ನು ಉದರ ಪೋಷಣೆಗೆ ಉಪಯೋಗಿಸುತ್ತಿದ್ದರು. ಗ್ರಾಮದಲ್ಲಿ ಯಾರಾದರೂ ನಿರಾಶ್ರಿತರು, ಅನಾಥರು, ಅಂಧರು, ಕಿವುಡ ಕುಂಟರು ಅಗಮಿಸಿ ದೇಹಿ ಎಂದು ಬೇಡಿದರೆ, ಅಪ್ಪ ವೀರಸಂಗಯ್ಯನವರು ಅವರನ್ನು ಆದರದಿಂದ ಕಂಡು ಅತಿಥಿಗಳಂತೆ ಉಪಚರಿಸಿ ಉದರ ಪೋಷಣೆಗೆ ಸಹಾಯವಾಗುತ್ತಿದ್ದರು. ಇವರ ಈ ಧರ್ಮ ಕಾರ್ಯತತ್ಪರತೆಯು ನಿರಂತರ ನಡೆದೇ ಇರುವದನ್ನು ಕಂಡ ಹಲವಾರು ಭಕ್ತ ಜನರಲ್ಲಿಯೂ ದಾಸೋಹಂಭಾವ ಮೂಡಿ ಬರುತ್ತಿತ್ತು.

ಅಪ್ಪ ವೀರಸಂಗಯ್ಯ ಸ್ವಾಮಿಗಳು ಅರಿಸಿ ಬಂದವರಿಗೆ ಆಶ್ರಯ ನೀಡಿ ಕಜ್ಜಾಯಕೊಟ್ಟು ಸಹಕರಿಸುತ್ತಿದ್ದರು. ಹರರ ಕಷ್ಟ ಪರಂಪರೆಯನ್ನು ಅರಿತು ನಡೆಯುವ ಪರಹಿತೈಷಿಗಳಾಗಿದ್ದರು.

ಇನ್ನು ವಸತಿ ಸೌಕರ್ಯವೆಂದು ಹೊರಗಿನ ಊರುಗಳಿಂದ ಬಂದವರಿಗೆ ಮಠದ ಭಾವಣಿಯಲ್ಲಿ ವ್ಯವಸ್ಥೆ ಮಾಡಿ ಹಿತ ಬಾಂಧವರಂತೆ ಕಾಣುತ್ತಿದ್ದರು. ಅಕಸ್ಮಾತ್ ಬಂದವರು ಕಷ್ಟದಲ್ಲಿ ಸಿಲುಕಿದ್ದರೆ, ಅಂಥವರಿಗೆ ತಮ್ಮ ಕೈಲಾದ ಮಟ್ಟಿಗೆ ಸಹಾಯಮಾಡಿ ಸಹಕಾರ ತೋರಿಸುತ್ತಿದ್ದರು. ಅಂತೂ ಪೂಜ್ಯ ಅಪ್ಪಾಜಿಯವರ ಸಮ್ಮುಖದಲ್ಲಿ ಅನಾಥರಿಗೆ ಆಶ್ರಯ ದೊರೆತು ಅವರ ವ್ಯಸನದ ಉಸಿರನ್ನು ಬಹುಮಟ್ಟಿಗೆ ನಿವಾರಿಸುವ ತಂದೆಯ ಸಮಾನರಾಗಿ ಬಾಳಿದ್ದರು. ಸಮಾಧಾನವೇ ಸ್ವಾಮಿಗಳ ಉಸಿರಾಗಿತ್ತು.

ಇನ್ನು ಆಗಿನ ಕಾಲದ ಪದ್ಧತಿಗನುಸಾರವಾಗಿ ವೀರಸಂಗಯ್ಯನವರಿಗೆ ಮಠದ ಭಾವಣಿಯಲ್ಲಿ ಗ್ರಾಮದ ಒಕ್ಕಲಿಗರ ಮಕ್ಕಳಿಗೆ ಪಾಠ ಹೇಳುವದು ಒಂದು ನಿತ್ಯ ಕಾಯಕವಿತ್ತು. ಈಗಿನವರಂತೆ ಪೆನ್ನು ಪೆನ್ಸಿಲು, ಪಾಟಿ, ಪುಸ್ತಕಗಳ ಗೊಂದಲವಂತೂ ಕೇಳಬಾರದು. ಕರಿಯ ಹಲಿಗೆಯನ್ನು ಸಿದ್ಧಪಡಿಸಿ ವಿಭೂತಿಯಿಂದ ಬರೆಯುವದು ನಿತ್ಯ ರೂಢಿಯಾಗಿತ್ತು. ಅಲ್ಲದೇ ಕಲ್ಲು ಬಂಡೆಗಳ ಮೇಲೆ ಉಸುಕು ಸುರುವಿ ಕೈಕಟ್ಟಿಗೆಯ ತುಂಡುಗಳನ್ನು ಮಾಡಿ ಗಲಗಿನಂತೆ ಬರೆಸುವ ಪರಿಪಾಠವು ಸಾಗುತ್ತಿತ್ತು. ಹಿಟ್ಟಿಗೆ ಹೋಗಿ ಬರುವದು, ಹಿರಿಯ ಮಠದ ವ್ಯವಸ್ಥೆ, ಮಕ್ಕಳಿಗೆ ಪಾಠ ಹೇಳುವದು, ಊರಲ್ಲಿ ಆಂತರಿಕ ಜಗಳಗಳನ್ನು ಬಗೆಹರಿಸುವ ಹಿರಿಯರೆನಿಸುವದು ಮೇಲೆ ಮನೆತನದ ಪ್ರಾಪಂಚಿಕ ಭಾರ ಇಷ್ಟೆಲ್ಲ ಭಾರವನ್ನು ಹೊತ್ತು, ಹೊಣೆಗಾರರಾಗಿ ಸಂತಸದ ಬದುಕಿನಲ್ಲಿ ಸಾಗಿದ್ದರು.

ಮಾತೆ ರಾಚವ್ವ ತಾಯಿಯವರು ಮುದೇನೂರ ಹಿರಿಯ ಮಠಾಧಿಕಾರಿಗಳಾದ ಮಹಾತ್ಮರ ಪುಣ್ಯ ಗರ್ಭದಲ್ಲಿ ಪುಟ್ಟಿ ಸಾಲಹಳ್ಳಿ ಮಠದ ತಾಯಿಯಾಗಿ ವೀರಸಂಗಯ್ಯ ಸ್ವಾಮಿಗಳ ಬಾಳ ಸಂಗಾತಿಯಾಗಿ ಬಂದವರು. ಇವರಾದರೂ ಆಚಾರ ಶೀಲರೂ, ಗುಣವಂತರೂ, ನಿರ್ಮಲ ನೀತಿಯುಕ್ತರೂ ಆಗಿದ್ದು, ಪತಿವ್ರತಾ ಪಾಲನೆಯನ್ನು ಅರಿತು ಆಚರಿಸುವ

ಪತಿವ್ರತೆಯಾಗಿದ್ದಳು. ವೀರಸಂಗಯ್ಯನವರ ಪ್ರತಿಯೊಂದು ಕಾರ್ಯ ಕ್ಷೇತ್ರದಲ್ಲಿ ಸಮಭಾಗಿಯಾಗಿ ಸಹಕಾರ ತೋರಿ ಗರತಿ ಬಾಳಿನ ತೆರದಿ ಸಂಸಾರ ಭಾರವನ್ನು ನಿರ್ವಹಿಸುವ ಸದ್ಗುಣದ ಖಣಿಯಾಗಿದ್ದಳು.

ಇಂಥಹ ಸುಮತಿ ತಾಯಿಯು ಗರ್ಭದಲ್ಲಿ ಒಂದಲ್ಲ ಎರಡಲ್ಲ ನಾಲ್ಕು ಜನ ಮಕ್ಕಳ ಭಾಗ್ಯ ಲಭಿಸಿತು. ಮೊದಲನೆಯವರಾದ ಮಡಿವಾಳಯ್ಯ, ಎರಡನೆಯವರಾದ ಮೇಳಯ್ಯ, ಮೂರನೆಯವರೆನಿಸಿ ಷಟ್‌ಸ್ಥಲ ಬ್ರಹ್ಮಜ್ಞಾನದ ಖಣಿಯಾಗಿ, ಲಿಂಗಾನಂದ ಲೋಲರೆನಿಸಿ, ಶಿವ ಮಹಾದೇವನೇ ತನ್ನ ಸಾತ್ವಿಕ ಕಳೆಯನ್ನು ಮಹಾಂತಯ್ಯನೆಂಬ ನಾಮದಿಂ ಅವತರಿಸಿ ಪರಿಶೋಭಿಸಿದನು.

ಇನ್ನು ನಾಲ್ಕನೇಯವರಾಗಿ ಹುಟ್ಟಿದವರು ಶ್ರೀ ಮಹಾಂತಯ್ಯನವರ ಸಹೋದರಿ (ಭಗಿನಿ). ರಾಚವ್ವತಾಯಿಯವರು- ವೀರಸಂಗಯ್ಯಪ್ಪನವರು ನಾಲ್ಕು ಜನ ಮಕ್ಕಳ ಮಾತಾ ಪಿತೃಗಳೆನಿಸಿ ಸಾಲಹಳ್ಳಿ ಹಿರಿಯ ಮಠದ ಒಡೆತನದಲ್ಲಿ ಸೌಖ್ಯಾನಂದ ಜೀವನದಲ್ಲಿ ಎನಿತೆಲ್ಲ ಸಂಪತ್ತಿನೊಡನೆ ಅನಂತ ಲೀಲಾ ವಿನೋದಗಳನ್ನೆಸಗುವ ಶಿವ ಕಳೆಯ ಸುಕುಮಾರ ಮಹಾಂತ ಯ್ಯಪ್ಪಗಳ ಜನನಿ ಜನಕರೆನಿಸುವ ಪುಣ್ಯವಂತರು, ಪಾವನ ಚರಿತರು, ಎಂದು ಸಾಲಹಳ್ಳಿ ಗ್ರಾಮದ ಜನತೆ ಪದೇ ಪದೇ ಸಂತಸದ ಉದ್ಗಾರ ತೆಗೆಯುತ್ತಿದ್ದರು.



## ೨ ನೇ ಅಧ್ಯಾಯ

### ಶುಭ ಶಕುನಗಳು

ಶ್ರೀ ಮಹಾಂತ ದೇವರ ಜನನ ಕಾಲದಲ್ಲಿ ಶಿವನ ಲೀಲಾ ವಿನೋದ ವೇನೋ ಅನ್ನುವಂತೆ ವಿಚಿತ್ರವಲ್ಲದಿದ್ದರೂ ಸಚಿತ್ರ ಶುಭಯೋಗದ ಶುಭ ಸಂದೇಶ ಸಾರುವರೀತಿಯಲ್ಲಿ ಘಟನೆಯೊಂದು ಜರಗಿತು.

ವೀರಸಂಗಯ್ಯಸ್ವಾಮಿಗಳ ಜೇಷ್ಠ ಪುತ್ರರಾದ ಮಡಿವಾಳಯ್ಯನವರು ಶ್ರೀ ಮಹಾಂತಸ್ವಾಮಿಗಳ ಜನನ ಕಾಲದಲ್ಲಿ ಸಾಧಾರಣ ಹದಿನಾಲ್ಕು ಹದಿನಾರು ವರುಷದ ತಾರುಣ್ಯದಲ್ಲಿ ಕಾಲಿಡುವ ವಯಸ್ಸಿನವರಾಗಿದ್ದರು.

ಅವ್ವ ರಾಚವ್ವನವರು ಮೂರನೇ ಗರ್ಭೋದಯದ ಪ್ರಸವವೇದನೆಯನ್ನು ಅನುಭವಿಸುತ್ತಿರುವ ದಿನದಂದು ಮಡಿವಾಳಯ್ಯನವರು ನಿತ್ಯ ಕಾಯಕದಂತೆ ಹೊಲಕ್ಕೆ ಹೋಗಿದ್ದರು.

ತಿರುಗಿ ಹೊಲದ ಕಾರ್ಯ ಮುಗಿಸಿ ಮನೆಗೆ ಬರುವಾಗ ದಾರಿಯ ಬದಿಯಲ್ಲಿ ನರಿಯೊಂದು ಆನಂದದಿಂದ ಓಡಿ ಬಂದು ಮಡಿವಾಳಯ್ಯನವರ ಸಮ್ಮುಖದಲ್ಲಿ ಗಕ್ಕನೇ ನಿಂತು ತಲೆ ಬಾಗಿ ನಮಸ್ಕರಿಸಿ, ಕೇಕೇ ಹಾಕಿ ಕುಣಿದು ಮಣಿದು ಮೇಲೆತ್ತರಕ್ಕೆ ಜಿಗಿದು ಚಲ್ಲಾಟವಾಡಿ ಸಂತಸದ ಸವಿಗನಸಿನ ಸತ್ಯಚಿತ್ರವನ್ನು ಬಿತ್ತರಿಸಿದಂತೆ ತರತರದ ಹಾವಭಾವಗಳಿಂದ ತನ್ನ ಭೆಟ್ಟಿಯ ಹಿನ್ನೆಲೆಯಲ್ಲಿ ಶುಭಪ್ರದ ಪ್ರಸಂಗ ಉಂಟೆಂದು ತಿಳಿಸಿದಂತೆ ಏನೇನೋ ಮಾಯಾಮರ್ಮ ತಿಳಿಸಹತ್ತಿತು. ಇದೇನು ಶಿವಮಹಾದೇವನ ಲೀಲೆಯೋ, ಇದೇನು ನಿನ್ನ ಪವಾಡವೋ ಎಂದು ಮಡಿವಾಳಯ್ಯನವರು ಆಶ್ಚರ್ಯದಿಂದ ನಿಂತು ನೋಡಹತ್ತಿದಾಗ ಶಿವನಪ್ಪಣೆಯಂತೆ ಶಿವಯೋಗಿಗಳ ಜನನದ ಪುಣ್ಯದಿನವಿದು ಎಂದು ಮನದಟ್ಟಾಗಿ ಅಣ್ಣ ಮಡಿವಾಳಯ್ಯನವರಿಗೆ ಆ ಪುಣ್ಯ ಪ್ರಸಂಗದ ಅರ್ಥ ಅರುಹಿ ಮಾಯವಾಯಿತು.

ಈಗ ಮಡಿವಾಳಯ್ಯನು ಇದೆಲ್ಲವೂ ಈಶ್ವರನ ಪ್ರೇರಣೆ ಎಂದು ತನ್ನಲ್ಲಿ ತಾನೇ ಹೆಮ್ಮೆಪಟ್ಟುಕೊಳ್ಳುತ್ತ ಹಿರಿಯರ ಹಿರಿನುಡಿಯಂತೆ ನರಿರಾಯಾ ಶಿವನ ಊಳಿಗದಾಳು. ಶುಭದಲ್ಲಿ ಮಂಗಲಕಾರ್ಯ ಮಂಗಲಪ್ರಸಂಗಗಳು ಉಂಟೆಂಬ ಭವಿಷ್ಯ ತಿಳಿಸುವಂತೆ ನರಿಯ ಮುಖಕಂಡರೆ ಸಂತಸದ ಸುವಾರ್ತೆ ಕೇಳಬೇಕಲ್ಲಾ ಎಂದು ತೀವ್ರದಲ್ಲಿ ಮನೆಗೆ ನಡೆದನು. ಹೊಲದಿಂದ ಹೊರಟ ಮಡಿವಾಳಯ್ಯನು ಲಗುಬಗೆಯಿಂದ ಹೊರಟಿದ್ದಾನೆ. ಹಿರಿಯರೊಮ್ಮೆ ತನ್ನೆದುರು ನುಡಿದ ನುಡಿ, ನರಿಯ ಮುಖಕಂಡ ಮಾನವನಿಗೆ ಸಂತಸದ ಪ್ರಸಂಗ, ಲಾಭದ ಪ್ರಸಂಗ ಕಂಡು ಬರುವದೆಂಬುದನ್ನು ಪದೇ ಪದೇ ಮೆಲುಕು ಹಾಕುತ್ತ ಬರುತ್ತಿರಲು—

ಊರ ಹೊರವಲಯದ ಭಾವಿಯಿಂದ ನೀರು ತುಂಬಿಕೊಂಡು ಮನೆಗೆ ಹೊರಟ ನಗುಮೊಗದ ನಾರಿ ಮುತ್ತೈದೆಯೋರ್ವಳು ದರ್ಶನಕೊಟ್ಟಳು. ಶುಭಸಂದೇಶದ ಗುರುತೆಂದು ಮಡಿವಾಳಯ್ಯ ಮತ್ತಷ್ಟು ಉಬ್ಬಿಹೋದನು.

ಮುಂದಾಗಿ ಮನೆಗೆ ನಡೆದಿರಲು ತಮ್ಮನಾದ ಮೋಳಯ್ಯನು ಬಾಲಕ ಸ್ವಭಾವ ಧರ್ಮದಂತೆ ಬಿಂದಿಗೆಯನ್ನು ತುಂಬಿಕೊಂಡು ಮುಂದಾಗಿ ಮನೆಗೆ ನಡೆದಿರಲು ಎದುರಾಗಿ ಮಹಾದೇವಮ್ಮನವರು ಮನೆಯಿಂದ ಹೊರಬಂದು ಹಸಿರು ಕುಪ್ಪಸ ಮೇಲ್ ಹೊದಿಕೆಯಾಗಿ ತಲೆತುಂಬ ಹಸಿರು ಬಣ್ಣದ ಶೀರೆಯ ಸೆರಗು ಹೊತ್ತು ಪತಿಪಾದ ಸನ್ನಿಧಿಯನ್ನು ಕುರಿತು ಗಂಡನ ಮನೆಗೆ ಹೊರಟು ನಿಂತಿದ್ದಳು. ಮೋಳಯ್ಯನವರು ತುಂಬಿದ ಬಿಂದಿಗೆಯೊಡನೆ ಬರುವದನ್ನು ಕಂಡು, ಬಾಲಕನನ್ನು ನಿರೀಕ್ಷಿಸಿ ಹಸಿರು ಬಳೆಗಳ ಸದ್ದುಗೈವ ಕರವನ್ನು ಹೆಗಲ ಮೇಲಿನ ಬಿಂದಿಗೆಯಲ್ಲಿ ಅದ್ದಿ ಪನ್ನೀರು ಪಡೆದು ಕಣ್ಣ ಕಂಬನಿಯನ್ನು ತೊಡೆದುಹಾಕಿ ಸಮಾಧಾನ ಸಂತಸಗಳಿಂದ ಮೋಳಯ್ಯನ ಪಾದಮುಟ್ಟಿ ನಮಸ್ಕರಿಸಿ ಗಂಡನ ಮನೆಗೆ ಕರೆಯಲು ಬಂದ ಜಂಡಿಯುತ್ತ ಕಳಿಸಲು ಬಂದ ಓರಿಗೆಯ ಗೆಳತಿಯರೊಡನೆ ನಗುನಗುತ್ತ ಹೊರಟಿಹಳು.

ಈಗಂತೂ ಅಣ್ಣ ಮಡಿವಾಳಯ್ಯನಿಗೆ ಮತ್ತಷ್ಟು ಸಂತಸವೂ ಆಶ್ಚರ್ಯವೂ ಏಕಕಾಲಕ್ಕೆ ಉದ್ಭವಿಸಿದವು. ಮುಂದಾಗುತ್ತಿರುವಂತೆ ಗೋವು ತಾ ಕರುವ ಕರೆಮುಕೊಂಡು ಮೈನೆಕ್ಕಿ ಬಾಲಬೀಸಿ ಮೈ ಕಡಿದು ಕಾಡಿಸುವ ಉಪದ್ವ್ಯಾಪಿ ನೊಣಗಳನ್ನು ಹಾರಿಸಿ ಮೊಲೆ ಉಣ್ಣುವ ಕರುವಿನ ಇಚ್ಛೆಯಂತೆ ಕೆಚ್ಚಲವನ್ನು ಪೂರ್ಣಗೊಳಿಸಿ ಹಾಲುಕರೆದು ಕರುವಿನ ಹೊಟ್ಟೆ ತುಂಬಿಸುತ್ತಿತ್ತು. ಕರುವು ಆನಂದದಿಂದ ಹಾಲು ಕುಡಿದು ಟಣಪಣ ಜಿಗಿದು ನಗುಮೊಗದಿ ನರ್ತಿಸುತ್ತಿತ್ತು. ಮಡಿವಾಳಯ್ಯನ ಆಶ್ಚರ್ಯಕ್ಕೆ ಸೀಮೆಯೇ ಇಲ್ಲದಾಯಿತು. ಅಣ್ಣ ತಮ್ಮಂದಿರೀರ್ವರು ಮಾರ್ಗ ಮಧ್ಯ ಕೂಡಿಕೊಂಡರು. ಮಡಿವಾಳಯ್ಯನವರು ಆಗಲೇ ವಯಸ್ಸಿಗೆ ತಕ್ಕಂತೆ ಪ್ರಪಂಚದ ಜ್ಞಾನ ತಿಳಿಯುವಂತಾಗಿದ್ದರು. ಅಂತೇ ಶುಭದ ಹಿನ್ನೆಲೆಯನ್ನರಿಯಲು ಉತ್ಸಾಹದಿಂದ ತೀವ್ರಗತಿಯಲ್ಲಿ ಮನೆಗೆ ಬಂದರು.



# ೩ ನೇ ಅಧ್ಯಾಯ

## ಶ್ರೀ ಮಹಾಂತ ದೇವರ ಜನನ.

ಇತ್ತ ವೀರಸಂಗಯ್ಯ ಸ್ವಾಮಿಯವರು ಶಿವನೊಲುಮೆಯ ಸಾಧನೆಯಾದ ಲಿಂಗಾರ್ಚನೆಗೆ ಕುಳಿತುಕೊಂಡಿದ್ದರು. ಅತ್ತ ರಾಚವ್ವ ತಾಯಿಯವರು ಪ್ರಸವ ವೇದನೆಯ ಪ್ರಸಂಗವನ್ನು ಅನುಭವಿಸುತ್ತಿದ್ದಾರೆ. ಆಗ ವೀರಸಂಗಯ್ಯಪ್ಪನವರು ಅರ್ಚಿಸುತ್ತಿರುವ ಇಂಗೈಯೊಳಿದ್ದ ಲಿಂಗಮೂರ್ತಿಯು ಮಾತನಾಡುವಂತೆ ಅದೃಶ್ಯ ನುಡಿಗಳು ಕೇಳಹತ್ತಿದವು. ಲಿಂಗರೂಪದಲ್ಲಿದ್ದ ಶಿವನೇ ವೀರಸಂಗಯ್ಯನವರಿಗೆ ಅಯ್ಯಾ ಜಂಗಮಾರ್ಯನೇ ಶಿವಮಹಾದೇವ ಮಹೇಶ್ವರನು ಭಕ್ತೋದ್ಧಾರ ಕಾರ್ಯಕ್ಕಾಗಿ ನಿಮಗೆ ಮಗನಾಗಿ ನಿಮ್ಮ ವಂಶದ ಕೀರ್ತಿಯನ್ನು ಆಚಂದ್ರಾರ್ಕ ಬೆಳಗ ಬಯಸಿ ಮಡದಿ ರಾಚವ್ವನ ಉದರದಿಂದ ಹುಟ್ಟಿ ಬರುತ್ತಿದ್ದಾನೆ. ಪರಮ ಆಚಾರ ಶೀಲರಾದ ದಂಪತಿಗಳೀರ್ವರು ಆನಂದದಿಂದ ಶಿವಕುಮಾರನನ್ನು ಪಡೆದು ಗುರುಸ್ಥಾನದ ಹಿರಿಹೊರೆಯನ್ನು ಮಹಾಂತನಿಗೆ ಒಪ್ಪಿಸಿ ನಿಶ್ಚಿಂತೆಯಿಂದ ಕಾಲ ಕಳೆಯಿರಿ ಹಾಗೂ ಮಹಾದೇವನ ಅಂಶೀಭೂತನಾದ ಆ ಸುಕುಮಾರನಿಗೆ ಮಹಾಂತಯ್ಯನೆಂದು ಪೆಸರಿಡುವ ಕಾರ್ಯಮಾಡಿರಿ ಎಂದು ಸಂತಸದಿಂದ ತಿಳಿಹಿದಂತೆ ಭಾಸವಾಗಹತ್ತಿತ್ತು.

ಆಗ ವೀರಸಂಗಯ್ಯಪ್ಪನವರು ಅತ್ಯಾನಂದಗೊಂಡವರಾಗಿ ಅಮಿತಾನಂದದಿಂದ ಅಮಿತ ಕರುಣಿ, ಶಿವಾ ನಿನ್ನ ಲೀಲೆ ಅಗಾಧವಾದದ್ದು ಎಂದು ಲಿಂಗಾರ್ಚನೆಯನ್ನು ಮನದಣಿಯುವಂತೆ ಒಳ್ಳೆ ಉತ್ಸಾಹದಿಂದ ಪೂರ್ಣಗೊಳಿಸಿದರು. ಹಾಗೂ ಸತಿಯಳ ಹೆರಿಗೆಯ ಕಾಲ ದೂರಿಲ್ಲವೆಂದು ಅರಿತವರಾಗಿ ಎಲ್ಲ ವ್ಯವಸ್ಥೆಯನ್ನು ಮುಂದಾಗಿ ಸಜ್ಜುಗೊಳಿಸಲು ಸನ್ನದ್ಧರಾದರು. ಈಗ ಹಿರಿಯ ಮಕ್ಕಳಾದ ಮಡಿವಾಳಯ್ಯ, ಮೇಳಯ್ಯನವರನ್ನು ತಾಯಿಯ ಬಾಣಂತಿತನಕ್ಕೆ ಬೇಕಾಗುವ ಸಾಮಗ್ರಿಗಳನ್ನು ವ್ಯವಸ್ಥೆಗೊಳಸಲು ತಿಳುಹಿಸಲು ಮುಂದಾಗಬೇಕೆಂದರು. ಅಷ್ಟರಲ್ಲಿ ಮಡಿವಾಳಯ್ಯನು ತಮ್ಮನೊಡಗೂಡಿ ಓಡುತ್ತ ಬಂದು—

ಅಪ್ಪನವರೇ ಅಪ್ಪನವರೇ ಎಂದನು. ಆಗ ವೀರಸಂಗಯ್ಯ ಭಾವಾವೇಷ ದಿಂದ ಎಚ್ಚತ್ತವರಂತೆ ಹಿರಿಯ ಮಗನ ಕೂಗು ಕೇಳಿ ಏನು ಮಗು ? ಎಂದು ಕೇಳಿದರು.

ಮಡಿವಾಳಯ್ಯ— ನಾನು ಹೊಲದಿಂದ ಮನೆಗೆ ಬರುವಾಗ ನರಿಯೊಂದರ ಮುಖ ಕಂಡೆ, ಅಲ್ಲದೇ ಏನೋ ಒಂದು ತರಹ ನರಿಯಣ್ಣ ವಿಚಿತ್ರ ರೀತಿಯ ಕವಾಡವನ್ನೆಸಗಿ ಮನಸ್ಸಿಗೆ ಅಚ್ಚರಿಯನ್ನುಂಟು ಮಾಡಿದ.

ವೀರಸಂಗಯ್ಯ— ಅಂಥಾ ಪ್ರಸಂಗವೇನು ಕಂಡು ಬಂತು ಮಗಾ.

ಮಡಿವಾಳಯ್ಯ— ಅಪ್ಪಾ ನರಿಯಣ್ಣ ಜಿಗಿಯುತ್ತ ಬೆದರಿಕೆ, ಹೆದರಿಕೆ ಗಳನ್ನು ಮರೆತು ನನ್ನೆದುರು ಬಂದು ಗಕ್ಕನೇ ನಿಂತು ಸಂತಸಪೂರ್ಣ ವಾದ ಧ್ವನಿತೆಗೆದು ಕೇಕೇ ಹಾಕಿ ಕುಣಿದು ಮಣಿದು ಮಾರೆತ್ತರಕ್ಕೆ ಮೇಲೆ ಹಾರಿ ನಮಸ್ಕರಿಸುವ ರೀತಿಯಲ್ಲಿ ತಲೆ ಬಾಗಿಸಿ ಚೇಷ್ಟೆಮಾಡಿ ಓಡಿಹೋಯಿತು.

ವೀರಸಂಗಯ್ಯ— ಈ ಪ್ರಸಂಗವನ್ನು ಕಂಡು ನಿನಗೆ ಅಚ್ಚರಿಯಾಗಿ ಹುಚ್ಚ ನಾಗಿರುವಿಯಲ್ಲವೇ ಮಡಿವಾಳಯ್ಯ.

ಮಡಿವಾಳಯ್ಯ— ನಿಜ ಅಪ್ಪನವರೇ.

ವೀರಸಂಗಯ್ಯ— ನಿಜವಪ್ಪಾ ನಿನ್ನ ಬಾಲಬುದ್ಧಿಗೆ ಸಿಲುಕದ ತರ್ಕವಾಗಿದೆ ನರಿರಾಯನ ಚೇಷ್ಟೆ. ತಾಳು ಸ್ವಲ್ಪ ಸಮಯದಲ್ಲಿ ತಾನೇ ತಿಳಿಯು ವದು ಆ ನರಿಯಣ್ಣನ ಚೇಷ್ಟೆಯ ಗುಟ್ಟು. ಏನೂ ಎನ್ನುವದು.

ಮೇಳಯ್ಯ— ಅಪ್ಪಾರೆ ನನಗೂ ಒಂದು ತರಹ ಆನಂದಗೊಳ್ಳುವ ಪ್ರಸಂಗ ಕಂಡುಬಂತು, ಈಗ ಬಿಂದಿಗೆ ತುಂಬಿಕೊಂಡು ಬರುವಾಗ.

ವೀರಸಂಗಯ್ಯ— ಅದೇನಪ್ಪಾ ನಿನಗಾದ ಆನಂದದ ಪ್ರಸಂಗ ?

ಮೇಳಯ್ಯ— ಅಲ್ಲರೀ ಅಪ್ಪಾರ ಮ್ಯಾಲಿನ ಮನಿ ಸಂಗವ್ವ ಚಿಗವ್ವ ಹೊಸ ಸೀರಿ ಉಟಗೊಂಡು, ತಲಿಮ್ಯಾಲೆ ಹೂ ದಂಡಿ ಹೊತಗೊಂಡು ಊರಿಗೆ ಹೊರಟವಳು ನನ್ನ ನಿಂದರಿಸಿ ನನ್ನ ಹೆಗಲಮ್ಯಾಲಿನ ಬಿಂದಿಗಿಯೊಳಗ ಕೈಹಾಕಿ ನೀರು ತೊಗೊಂಡು ಕಣ್ಣಿಗೆ ವರಿಸಿಕೊಂಡು

ನನ್ನ ಗದ್ದಾ ತುಟಿ ಹಿಡಿದು ಹಣಿಮುಟ್ಟಿ ಮುದ್ದುಕೊಟ್ಟು ನಗುನಗುತ್ತ ಹೋಗಿ ಬರತೀನಿ ಮೋಳಯ್ಯನವರೇ ಆಶೀರ್ವಾದ ಮಾಡ್ರಿ ಅಂದಳು. ಅಲ್ಲರಿ ಅಪ್ಪಾರ ನಾನು ಸಣ್ಣಾವಾ, ಚಿಗವ್ವಗ ಆಶೀರ್ವಾದ ಹ್ಯಾಂಗರಿ ಮಾಡುದು.

ವೀರಸಂಗಯ್ಯ— ಸಣ್ಣವನಾದರೂ ಜಂಗಮ ಮೂರ್ತಿಯಾದ ನಿನ್ನಿಂದ ಆಶೀರ್ವಾದ ಅಪೇಕ್ಷಿಸಿದ್ದಾಳೆ ಆ ಮುತ್ತೈದೆ ತಾಯಿ. ಜಂಗಮರಲ್ಲಿ ರುವ ಆ ತಾಯಿಯ ಭಕ್ತಿ, ಶ್ರದ್ಧಾಭಾವನೆ ಹಾಗೆ ಹೇಳಿಸಿರಬೇಕು. ಅದು ತಪ್ಪಲ್ಲ ತಮ್ಮಾ. ಮೋಳಯ್ಯಾ ನಡಿಯಪ್ಪಾ ಬಿಂದಿಗೆ ಒಳಗೆ ಇಡು ಇಷ್ಟರಲ್ಲಿ ನಿಮಗೆ ಇನ್ನೊಂದ್ಸರ್ವ ತಮ್ಮನ ಮುಖ ಕಾಣುವ ಪುಣ್ಯ ಪ್ರಸಂಗ ಪ್ರಾಪ್ತವಾಗಲಿದೆ.

ಮಡಿವಾಳಯ್ಯ— ಅಪ್ಪಾ ಆದರೆ ಅದೇ ಸಮಯದಲ್ಲಿ ಶಿದ್ದಲಿಂಗಪ್ಪನವರ ದೊಡ್ಡ ಆಕಳಾ ಹೋರಿಕರಾ ಕರಕೊಂಡು ನಮ್ಮ ಎದರು ಬಂದು ಚಿನ್ನಾಟವಾಡುತ್ತ ಕರುವಿಗೆ ಮೊಲೆ ಉಣಿಸುತ್ತ ಆದರ ಮೈ ನೆಕ್ಕಿ ನಮ್ಮನ್ನು ಅದೇಕೋ ಉತ್ಸಾಹಗಳಿಂದ ನೋಡುತ್ತ ನಿಲ್ಲುವಂತೆ ಮಾಡಿತು ನೋಡಿ ಆ ಗೋಮಾತೆ.

ವೀರಸಂಗಯ್ಯ— ನಿಜ ಮಡಿವಾಳಯ್ಯ ಎಲ್ಲವೂ ಶುಭಯೋಗ, ಶುಭ ಸಂದೇಶದ ಪ್ರತೀಕವಾಗಿ ಕಂಡಿವೆ ನಿಮ್ಮಗಳ ಕಣ್ಣಿಗೆ. ಇದರ ಕಾರಣ ಇಷ್ಟೇ ನಿಮ್ಮ ಬಂಧುವಾಗಿ ಹುಟ್ಟಿಬರುವ ನನ್ನ ಕಂದ ಕಾರಣ ಪುರುಷನಾಗುವದರಲ್ಲಿ ಸಂದೇಹವಿಲ್ಲ. ಅಲ್ಲದೇ ನಾನೀಗ ಲಿಂಗಾರ್ಚನೆ ಯಲ್ಲಿದ್ದಾಗ ಅಂಗೈಯಲ್ಲಿ ವಿರಾಜಮಾನವಾಗಿದ್ದ ಲಿಂಗಯ್ಯ ಹೇಳಿದ ಸ್ಪಷ್ಟವಾಣಿಯಂತೆ ಹರನೇ ತನ್ನ ಸಾತ್ವಿಕ ಕಳೆಯನ್ನು ಕಳಿಸು ತ್ತಿದ್ದಾನೆ. ಮಹೇಶನ ಮಹಿಮೆ ಅಗಾಧವಾದದ್ದು ಕಂದಗಳಿರಾ !

ಮಡಿವಾಳಯ್ಯ— ಅಂದರೆ ಅಪ್ಪಾ ಅವರೇ ಲಿಂಗದೊಡನೆ ಮಾತನಾಡಿದಿರಾ ?

(ಆಶ್ಚರ್ಯದಿಂದ ಕೇಳಿದ ಮಡಿವಾಳಯ್ಯನವರು ಭಾವನಾಪರವಶತೆ ಯಲ್ಲಿ ಮೂಕರಾಗಿ ಎವೆ ಬಡಿಯದೇ ನಿಂತಿದ್ದಾರೆ ವೀರಸಂಗಯ್ಯನವರ ಹಾಗೂ ಮಡಿವಾಳಯ್ಯನವರ ವಾಣಿಯನ್ನು ಕೇಳುತ್ತಿದ್ದಾನೆ ಬಾಲ ಮೋಳಯ್ಯಸ್ವಾಮಿ.)

ವೀರಸಂಗಯ್ಯ— ನಿಜ ಮಡಿವಾಳಯ್ಯ ಹರರೂಪಿ ಲಿಂಗಯ್ಯ ಮಾತನಾಡಿ ನನಗೆ ತಿಳಿಸಿದ ವಿಷಯ ಬಲು ಸೋಜಿಗವು ಸಂತಸಪೂರ್ಣವು ಆಗಿದೆಯಪ್ಪಾ.

ಮೋಳಯ್ಯ— ಅಂದರೆ ಏನು ಹೇಳಿತು ಲಿಂಗು ಹೇಳ್ರಿ ಅಪ್ಪಾರ.

ವೀರಸಂಗಯ್ಯ— ಅಯ್ಯಾ ಜಂಗಮಶ್ರೇಷ್ಠನೇ ನಿನ್ನ ಪತ್ನಿಯು ಉದರದಲ್ಲಿ ನನ್ನ ಸಾತ್ವಿಕ ಕಳೆಯು ಅವತಾರವಾಗುತ್ತದೆ. ಅವನಿಂದ ವೀರಶೈವ ಮತೋದ್ಧಾರವಾಗಬೇಕಾಗಿದೆ ಅಲ್ಲದೇ ಲಿಂಗಾಂಗ ಸಾಮರಸ್ಯ ತಿಳಿಯಬೇಕಾಗಿದೆ. ಲಿಂಗವಂತ, ಆಚಾರಶೀಲ ಸಂಪನ್ನ ವೀರಶೈವರಿಗೆ ಅವನಿಂದ ನಿನ್ನ ವಂಶಕೀರ್ತಿ ಮತ್ತಿಷ್ಟು ಬೆಳಗಬೇಕಾಗಿದೆ. ಮೋಹ ಮಾಯಾ, ಮದ, ಮತ್ಸರಗಳನ್ನು ಮರ್ದನಮಾಡಿ ಕ್ರಿಯಾಶೀಲ ಸಂಪನ್ನತೆಯನ್ನುದ್ಭವಿಸಿ ಜಗದೋದ್ಧಾರದೊಡನೆ ಭಕ್ತೋದ್ಧಾರ ಕಾರ್ಯಕ್ಕಾಗಿ ಕಳಿಸುತ್ತಿದ್ದೇನೆ. ಅವನ ಆಶೆಯಂತೆ ಗುರುಮೂರ್ತಿ ಚರಪುಂಗವ ಯತಿಯಾಗಿ, ಶಿವಯೋಗ ಸಾಮ್ರಾಜ್ಯದ ಹಿರಿಯ ಪೀಠದ ಅಧಿಕಾರಿಯಾಗಿ ಮೆರೆಯುವ ಮಹಾಂತನ ಆಶೆಯನ್ನು ಅಲ್ಲಗಳೆಯಬೇಡ. ಆಶೆ ಆಕಾಂಕ್ಷೆಗಳನ್ನು ತೂರಿ ಅರರಿಗಳನ್ನು ಇರಿದು ನೂರೊಂದು ಕಳೆಯುವ ಶತಾಯುಷಿ ಸುಪುತ್ರನ ಜನನ ವಾಗಲಿದೆ ಎಂದು ಹೇಳಿದ್ದಲ್ಲದೇ ನನ್ನ ಬಹುಭಾಗವನ್ನು ಪಡೆದು ಕೊಂಡಿರುವ ನಿನ್ನ ಸುಕುಮಾರನಿಗೆ ಮಹಾಂತಯ್ಯನೆಂದು ಹೆಸರಿಟ್ಟು ಹರ ಗುರು ಚರ ಎಲ್ಲರ ನಚ್ಚಿನ ಹೆಚ್ಚಿನ ಶಿವಯೋಗಿಯಾಗಿ ಭಕ್ತೋದ್ಧಾರ ಕಾರ್ಯಕ್ಕೆ ತೆರಳುವ ಅವನ ಆಶೆಗೆ ಅನುವುಮಾಡಿ ಕೊಡುವವನಾಗು. ಮಹಾಂತ ದೇವರ ಮನದಾಸೆಗೆ ಅಡ್ಡಾಗಬೇಡ ಎಂದು ಕೊನೆಯದಾಗಿ ಎಚ್ಚರಿಕೆಯ ನುಡಿ ಕೇಳಿಬಂತು ಅಂಗೈ ಯೊಳಿದ್ದ ಲಿಂಗ ಮುಖದಿಂದ.

ಮಡಿವಾಳಯ್ಯ— ಅಂತೂ ನಾವು ಬಲು ಭಾಗ್ಯವಂತರು ಅಲ್ಲವೇ ಅಪ್ಪ ನವರೇ ?

ವೀರಸಂಗಯ್ಯ— ನಾವಷ್ಟೇ ಅಲ್ಲ ಮಗು. ಹರನಾಸೆಯಂತೆ ಧರೆ ಬೆಳಗಲು ಬರುವ ನಮ್ಮ ಮಹಾಂತಯ್ಯನಿಂದ ಈ ಧರೆ ಪಾವನ ಜನ್ಮಭೂಮಿ.

ಸಾಲಹಳ್ಳಿಯಂತೂ ಪುಣ್ಯ ಭೂಮಿ ಎನಿಸುವದು. ಅಂತಹ ವೀರ ವೈರಾಗ್ಯನಿಧಿ ಶಿವಯೋಗಿ ನಮ್ಮ ವಂಶಜನಾಗುವದು ನಮಗಷ್ಟೇ ಅಲ್ಲ ವೀರಶೈವ ಜನಾಂಗದವರಿಗೇನೆ ಹೆಮ್ಮೆಯ ವಿಷಯ ಎಂದು ಆನಂದ ಉತ್ಸಾಹಪೂರ್ಣ ನುಡಿಗಳನ್ನು ಸುರಿಸಹತ್ತಿದರು. ಅಷ್ಟರಲ್ಲಿ ಶಿವಬಸವ್ವ ಎಂಬ ಮುದುಕಮ್ಮ ಬಂದು ಲಗುಬಗೆಯಿಂದ ಮಠದ ಪಠಾಂಗಣಕ್ಕೆ ಬಂದು—

ಶಿವಬಸವ್ವ— ಅಯ್ಯಾ ವೀರಸಂಗಪ್ಪಾರ ರಾಚವ್ವತಾಯಿಗೆ ಗಂಡುಕೂಸು ಹುಟ್ಟೈತೆ, ಸ್ವಲ್ಪ ಯವಸ್ತಾ ಮಾಡಬೇಕರಪ್ಪಾ ಮತ್ತ.

ವೀರಸಂಗಯ್ಯ— ಶಿವಬಸವ್ವಾ ಹೆದರಬೇಡಬಿಡವ್ವ. ಹರನ ಕರುಣೆಯಿಂದ ಹುಟ್ಟಿದ ಕಂದನು ಬಸಿರು ಬಗಿದು ಬಂದನಾದರೂ ಉಸಿರುಗರೆಯುವಂತಹ ಜಟಿಲ ಪ್ರಸಂಗವನ್ನು ನಮಗಾರಿಗೂ ತರಲಾರನೆಂಬ ಭರವಸೆ ನನಗಿದೆ. ಈ ವರಪುತ್ರ ನಮ್ಮ ವಂಶಕೀರ್ತಿ ಕಳಸವೆನಿಸಿ ಮೆರೆಯುವನವ್ವಾ ನಮ್ಮ ಮಹಾಂತ.

ಶಿವಬಸವ್ವ— ಏನ ಬುದ್ಧ್ಯಾರ ಈಗಾಗಲೇ ಹೆಸರು ಇಟ್ಟು ಹೇಳಿದಿರಲ್ಲಾ ಮಗನಿಗೆ ಮಹಾಂತನೆಂದು ?

ವೀರಸಂಗಯ್ಯ— ಶಿವಬಸವ್ವಾ ಹೆಸರಿನ ಉಸುರಿನೊಡನೆ ಉಸಿರಾಗಿ ಪುಟ್ಟಿ ಬಂದಿರುವ ಮಹಾಂತನ ಈ ಹೆಸರು ಸಾಮಾನ್ಯವಲ್ಲ. ಶಿವ ಮಹಾದೇವನ ಸಾತ್ವಿಕ ಕಳೆಯವ್ವಾ ಮಹಾಂತ ಎನ್ನುವದು. ಮಹಾಂತ ಅಂದರೆ ಮಾನವನು ಮುಟ್ಟಬೇಕಾದ ಶಿವಸಾಯುಜ್ಯದ ಹಿರಿ ಪಟ್ಟದ ಗುರಿ ಅರ್ಥಾತ್ ಹಂತವೆಂದು ತಿಳಿಯಬೇಕು. ಆ ಗುರಿಯನ್ನು ಮುಟ್ಟುವವನಾಗುತ್ತಾನೆ ನಮ್ಮ ಸುಕುಮಾರ. ಆತನ ಹೆಸರನ್ನು ಬಸುರಿನಲ್ಲಿರುವಾಗಲೇ ಹರನು ಲಿಂಗರೂಪದಲ್ಲಿ ಅರುಹಿದ್ದಾನೆ ಶಿವಬಸವ್ವಾ. ಕೂಸು ಬಾಣಂತಿಯರ ಉಪಚಾರ ಗೈಯುವದು ಲೌಕಿಕರಾದ ನಮ್ಮ ಕರ್ತವ್ಯ. ಸಂಸಾರಿಗಳ ಪದ್ಧತಿಯಂತೆ ಸಕಲವನ್ನೂ ಸಾಂಗಗೊಳಿಸಬೇಕು. ಬೇರೆ ಯಾರೂ ಹೆಣ್ಣುಮಕ್ಕಳಿಲ್ಲದ

ಈ ಮನೆಗೆ ಸೇನೆ ಹೆಣ್ಣುಮಗಳಾಗಿ ಕೆಲವು ದಿವಸ ಉಳಿದು ಕೂಸು, ಬಾಣಂತಿಯರನ್ನು ಉಪಚರಿಸುವವಳಾಗು ಎಂದು ದೀನವದನರಾಗಿ ನುಡಿದರು. ಸ್ವಾಮಿಗಳ ಹೇಳಿಕೆಯಂತೆ ಶಿವಬಸವ್ವ ಊಳಿಗದಾಳಾಗಿ ರಾಚವ್ವನವರ ಉಪಚಾರಕ್ಕೆ ಉಳಿದುಕೊಂಡಳು.



# ೪ ನೇ ಅಧ್ಯಾಯ

## ಮಹಾಂತಯ್ಯನವರ ತೊಟ್ಟಿಲ ಕಾರಣ

ಶಾಲಿವಾಹನ ಶಕೆ ೧೬೯೧ ಶುಕ್ಲನಾಮ ಸಂವತ್ಸರ ಜ್ಯೇಷ್ಠಮಾಸ ವದ್ಯ ಸಪ್ತಮಿ ಮಿತಿ, ಉತ್ತರಭಾದ್ರಪದ ನಕ್ಷತ್ರ ಶುಭಗಳಿಗೆಯಲ್ಲಿ ಇಸ್ವಿ ಸನ್ ೧೮೬೯ ಜೂನ ತಿಂಗಳ ಮಹಾಂತದೇವರ ಜನನವಾದ ಶುಭಕಾಲದಿಂದ ಕಾಲ ಮಾನದ ಪರಿಸ್ಥಿತಿಯು ಬಹುತರ ಸಾಲಹಳ್ಳಿ ಭಾಗದಲ್ಲಿ ಬದಲಾಯಿತು. ಸುಖಮಯವಾಯಿತು.

ಎಲ್ಲಿ ಕೇಳಿದರೂ ಜನತೆಯ ಉಸುರುಸುರಿನಲ್ಲಿ ನಮ್ಮ ಭವಿಷ್ಯ ಜೀವನವೇ ಹೆಚ್ಚಳದಲ್ಲಿ ರೂಪಗೊಂಡು ಸಾಗಿದೆ. ಮಳೆ ಬೆಳೆಗಳು ಸಮೃದ್ಧ ಗೊಂಡಿವೆ. ಸುತ್ತಲಿನ ನಮ್ಮ ಪುಣ್ಯ ಪ್ರದೇಶದಲ್ಲಿ ಸುಭಿಕ್ಷೆ ತಾಂಡವವಾಡು ತ್ತಿದೆ. ಸಾಲಳ್ಳಿ ಸೀಮೆಯನ್ನು ದಾಟಿ ಹತ್ತೆಂಟು ಹರದಾರಿಯವರೆಗೆ ಪ್ರತಿಯೋರ್ವರಿಂದ ಈ ಸಂತಸದ ಸವಿನುಡಿ ಕೇಳಿ ಬರುತ್ತಿತ್ತು. ಈ ಸಂತಸದ ಸವಿನುಡಿಗೆ ಕಾರಣವೇನಂದರೆ ನಮ್ಮ ವೀರಸಂಗಯ್ಯನವರಿಗೆ ಪುತ್ರ ಜನನ. ಅಂದಿನಿಂದ ದಿನ ದಿನಕ್ಕೂ ಗಳಿಗೆ ಗಳಿಗೆಗಳಿಗೂ ಶುಭಪ್ರಸಂಗಗಳು ತಲೆದೋರ ಹತ್ತಿದವು.

ಹೀಗಾಗಿ ಜನರು ವೀರಸಂಗಯ್ಯನವರ ಕಂದ ಹರನೊರದ ಕಂದ. ಅವರ ಪುಣ್ಯದ ಪುತ್ರ ಮಹಾದೇವ ಮಹೇಶ್ವರನ ಪ್ರಸಾದ ಸಾಕ್ಷಾತ್ ಶಿವನ ಅವತಾರಿ ಎಂದು ಹೆಮ್ಮೆಯಿಂದ ನುಡಿಯುತ್ತಿದ್ದರು. ಅದರಲ್ಲಿ ಜಂಗಮ ಪ್ರೇಮಿಗಳಾದ ಹಲವಾರು ಹಿರಿಯರು ಕಾರಣಪುರುಷ ಹರನ

ಪರಜ್ಯೋತಿ ಉದಯವಾಯಿತೆಂದು ಕೂಸಿನ ಕಾಲ್ಗುಣವನ್ನು ಹೊಗಳುತ್ತಿದ್ದರು. ಕಳೆದವೀಗ ಹದಿಮೂರು ದಿವಸಗಳು, ಪೂರ್ವಾಚಾರ ಪದ್ಧತಿಯಂತೆ ಲಿಂಗದೀಕ್ಷೆ, ಹೆಸರಿಟ್ಟು ಹರಿಸುವ ಶುಭದಿನ. ಅಂತೇ ತಂದೆ-ತಾಯಿಗಳಿಬ್ಬರು ಅತಿ ಉತ್ಸಾಹದಿಂದ ಶಿವನು ಲಿಂಗರೂಪದಲ್ಲಿ ಆರುಹಿದ ಮಹಾಂತಯ್ಯನೆಂಬ ಪೆಸರನಿಟ್ಟು ಆನಂದಿಸಲು ಮುಂದಾದರು. ಪದ್ಧತಿಯಂತೆ ಜಂಗಮದೀಕ್ಷೆ ಕೊಟ್ಟು, ಹೆಸರಿಟ್ಟು ವಿಧಾನೋಕ್ತ ಕ್ರಮಗಳನ್ನು ಆಚರಿಸ ಬಯಸಿದ ಹೆತ್ತವರು ಪೂರ್ವಸಿದ್ಧತೆಯನ್ನೆಲ್ಲ ಮಾಡಿ ನೆರೆಹೊರೆಯ ನಾರಿಯರಿಗೆ ಆಮಂತ್ರಣ ಕೊಟ್ಟು ಬರಲು ಶಿವಬಸವ್ವನನ್ನು ಕಳಿಸಿ, ಹಿರಿಯ ಹಿತೈಷಿಗಳನ್ನು ಸ್ವಾಗತಿಸಲು ಮಗ ಮಡಿವಾಳಯ್ಯನಿಗೆ ಹೇಳಿದರು.

ಅಂದಿನ ಶುಭದಿನದ ಶುಭಕಾರ್ಯಕ್ಕೆ ಊರಿನ ಮುತ್ತೈದೆಯರು ಹಸನ್ಮುಖಿಗಳಾಗಿ ಹೆಸರಿಡುವ ಉತ್ಸುಕತೆಯಲ್ಲಿ ಬಂದಿರುವರು.

ಆ ಲಲನಾಮಣಿಗಳಲ್ಲಿ ಮೇಲಿನ ಮನೆಯ ಮಲ್ಲಮ್ಮ, ಕೆಳಗಿನ ಮನೆಯ ಕಲ್ಲವ್ವ, ಹಿಂದಿನ ಮನೆಯ ನಿಂಗಮ್ಮ, ಗಡಬಡಿಯ ಗಂಗವ್ವ, ಗೌಡರ ಮನೆಯ ಗೌರಮ್ಮ, ಹಿತ್ತಲಮನಿ ಶಾವಕ್ಕ, ಸಾವುಕಾರ ಸಾವಂತ್ರೆವ್ವ, ಜೋಳದ ಜೋಳವ್ವ, ಅಕ್ಕಸಾಲಿಗರ ಅನ್ನಕ್ಕ, ಸಲಕಿ ಶಾಂತವ್ವ, ಗುದ್ಲಿಯವರ ಗಿರಿಜವ್ವ, ರಾಟಿ ರಾಮವ್ವ, ಶೀಲವಂತರ ಸೂಗವ್ವ, ಭಾವಿ ಬಾಲಕ್ಕ, ನಿಂಗರಡ್ಡಿ ನೀಲಕ್ಕ, ಅಯ್ಯಗೋಳ ಅರುಂದತಿ, ಶ್ಯಾನಬೋಗರ ಸುಮತಿ, ನೀರುಳ್ಳಿ ನಿರ್ಮಲಾ, ಕಡಪಟ್ಟಿ ಕಾಮಿನಿ, ಪುರಂತರ ಪಾರ್ವತಿ ಇವರೆಲ್ಲರಿಗೂ ಹಿರಿಯ ಮುತ್ತೈದೆ, ಮಹಾಂತ ದೇವರ ಊಳಿಗದಾಳಾಗಿ ಬಾಣಂತಿ ಸೇವೆಗೈದ ಶಿವಬಸವ್ವ ಮುದುಕಿ ಒಟ್ಟು ಇಪ್ಪತ್ತೊಂದು ಜನ ಮುತ್ತೈದೆ, ಮಂಗಲಾಂಗಿಯರಿಂದ ಆರಿಕೆ ಹರಿಕೆಗಳ ಉತ್ಸಾಹಪೂರ್ಣ ಜೋಗುಳಕ್ಕೆ ಬಾಲಲೀಲಾ ವಿನೋದ ತೋರುವ ಮಹಾಂತಯ್ಯನವರ ಹದಿಮೂರುದಿಶೆಕಾರ್ಯ ಸಾಂಗವಾಗಿದೆ. ಸರಳವಾಗಿದೆ, ಸಂತಸಪೂರ್ಣವಾಗಿದೆ, ಆನಂದ ಆಶ್ಚರ್ಯಗಳ ಸಂಗಮವಾಗಿದೆ.

ಹೆಸರಿಡಲು ಬಂದ ಮಂಗಲಾಂಗಿಯರು, ನಗುಮೊಗದ ಕೆಲನಾರಿಯರು, ವಾಚಾಳಿ ಎನಿಸಿದ ಹಲವಾರು ವಾರಿಜಾಕ್ಷಿಯರು ಅತೀ ಸಂತಸದ ಸವಿ

ಗಬ್ಬನ್ನು ಸವಿಯುತ್ತ ಚೇಷ್ಟೆ ಕುಚೇಷ್ಟೆಗಳಲ್ಲಿ ಮನೆ ಮಾರು ಮರೆತು ಕೆಲಸ ಬೊಗಸೆಗಳತ್ತ ಮನಸ್ಸು ತಿರುಗಿಸದೇ ಈ ಪುಣ್ಯ ಕಾರ್ಯದಲ್ಲಿ ತಲ್ಲೀನರಾಗಿ ದ್ದಾರೆ. ಇಂತಹ ಸಮಯದಲ್ಲಿ ಹಿರಿಯ ಮುತ್ತೈದೆ ಶಿವಬಸವ್ವ ಹುಡಿಗಿ ಯರನ್ನು ಹುಡುಗಾಟದ ಪ್ರಸಂಗದಿಂದ ಎಚ್ಚರಗೊಳಿಸುತ್ತ ಹೇಳುತ್ತಾಳೆ.

ನಡಬಾಗಿದ ಹಣ್ಣುದೇಹದ ಮುದುಕಮ್ಮ ಮಾರ್ಮಿಕ ಮಾತಿನ ಚಟಾಕಿಗಳಂತೆ ಮಾತಿನ ಪಟಾಕಿಯನ್ನು ಹಾರಿಸುತ್ತ,

ಶಿವಬಸವ್ವ— ಏನ್ರೆ ಎದ್ಕ ಬಂದೀರಿ ಕುಣಿ ಕುಣಿದು, ಮಾತಿನಲ್ಲಿ ಮರತ ಬಿಟ್ಟರಲ್ಲೇ ಹುಡುಗಿಯರೇ ಮುಖ್ಯ ಕಾರ್ಯಾನ.

ಕಲ್ಲವ್ವ— ಏನ ಯವ್ವಾ ಏನ ಮಾಡಂದಿ ಮತ್ತ ನಮಗ.

ಶಿವಬಸವ್ವ— ಅಲ್ಲರೇ ಬಾಣಂತಿ ಕೈಯಾನ ಕೂಸ ಇಸಗೊಂಡು ತೊಟ್ಟಿಲ ದಾಗ ಇಟ್ಟು ತೂಗಿ, ಜೋಗುಳಾ ಹಾಡಿ ಬಾಣಂತಿಗೆ ಆರತಿ ಮಾಡಿರಿ ಮೈಮಣಿಸಿ ಅಟು.

ಕಲ್ಲವ್ವ— ಅಲ್ಲ ಯವ್ವಾ ರಾಚವ್ವ ಚಿಗವ್ವ ನಾಲ್ಕು ಮಕ್ಕಳ ತಾಯಿ ಯಾದರೂ ಅದೆಷ್ಟ ನಾಚಿಕೊಂಡು ವಾರಿಗೆ ಉಳದಾಳ ನೋಡ ಬಾರದ.

ಶಿವಬಸವ್ವ— ಹೌದ ತಂಗಿ ಹೆಣ್ಣಿಗೆ ನಾಚಿಕಿ ಅನ್ನುದು ಹುಟ್ಟಗುಣಾ ಅಲ್ಲದ ನಮ್ಮ ಧರ್ಮದ ರೀತಿಯಂಗ ಹೇಳಬೇಕಂದರ ಹೆಣ್ಣಿನ ಹಿರಿ ಗುಣ ತಿಳಿಬೇಕಾದರ ನಾಚಿಕೆ ಲಜ್ಜೆ ಹೆಣ್ಣಿಗೆ ಮೊದಲು ಇರಬೇಕವ್ವ. ಹೆಣ್ಣಿಗೆ ನಾಚಿಕಿ ಸ್ವಭಾವ ಭೂಷಣ ಯವ್ವಾ. ಶಿವಬಸವ್ವ ಹೀಗೆ ಹೇಳಲು ಗಡಬಿಡಿಯ ಗಂಗವ್ವ ಮುಂದಾಗಿ ಬಂದು—

ಗಂಗವ್ವ— ಅಲ್ಲ ಎವ್ವಾ ರಾಚವ್ವಕ್ಕ ಬೇಕಾದರ ಹೆಸರ ಇಟ್ಟ ಜೋಗಳ ಹಾಡಿ, ಆರತಿಮಾಡಿ, ಆನಂದದಿಂದ ಎಲಿ, ಅಡಿಕಿ, ಸಕ್ಕರಿ ಪಟ್ಟಣ ಪಡಕೊಂಡ ಹೋಗಬರ್ರಿ ಗೆಳತಿಯರೇ ಅಂತ ಹೇಳಲಿ ಆಗ ನೋಡಬೇ ಎವ್ವಾ ಅಂದಾಗ ಶಿವಬಸವ್ವನಿಗೆ ಮಂಗಚೇಷ್ಟೆಯ ಈ ಹುಡುಗಿ ಯರ ಮನದ ಇಂಗಿತ ಅರ್ಥವಾಗಿ—

ಶಿವಬಸವ್ವ— ಅಲ್ಲ ಯುವ್ವ ರಾಚವ್ವ ಹೇಳವ್ವಾ! ಹೇಳು. ಮುಬೆರಕಿ ಚಿಟಗಾಣ್ಯಾರ ಕೂಡ್ಯಾರ. ಸುಮ್ಮ ಸಮ್ಮನ ಕಾಡತಾರ ತಂಗಿ, ನಿನ್ನಾ. ಆಗ ರಾಚವ್ವನವರು........

ರಾಚವ್ವನವರು— ಪರಮ ಹರುಷದಿಂದ ನಾರಿಮಣಿಯುರೆಲ್ಲ
ನೆರೆದು ತೊಟ್ಟಿಲ ಕಾರ್ಯಕೆ ಬಂದಿರೇ
ಹರಿಸಿ ಹರಕೆಯುನಿಟ್ಟು ಹೇಳಿರಿ ಹೆಸರೇನು.

ಆಗ ಅಕ್ಕಸಾಲಿಗರ ಅನ್ನಕ್ಕ, ಶಾನಭೋಗರ ಸುಮತಿ, ಪುರಂತರ ಪಾರ್ವತಿ, ಕಡಪಟ್ಟಿ ಕಾಮಿನಿ ಒಟ್ಟಾಗಿ ಕೆಳಗಿನಂತೆ ಕೇಳುತ್ತಾರೆ.

ಹೆತ್ತೊಡಲ ತಾಯವ್ವ ಈ ಮುತ್ತು ನಿನ್ನದು
ಉತ್ತಮ ಹೆಸರು, ನೀ ಹೇಳೆ ಮೊದಲು
ಹೊತ್ತಾಗುತದ ನಮಗೆಲ್ಲ ರಾಚವ್ವ.

ಆಗ ಮತ್ತೇ ಶಿವಬಸವ್ವ ಮುಂದಾಗಿ, ರಾಚವ್ವನವರ ತಡವರಿಸುವ ಮುಖದ ಭಾವನೆಯುನ್ನು ಅರಿತವಳಾಗಿ ವೀರಸಂಗಯ್ಯನವರನ್ನು ಸಮೀಪಿಸುತ್ತ,

ಅಪ್ಪಯ್ಯ ಜಂಗಮಮೂರ್ತಿ
ಒಪ್ಪುವ ಹೆಸರು ನೀ ಹೇಳಬೇಕಯ್ಯ
ಒಪ್ಪಿಳ್ಳ ನಾರಿಯುರು ಗಡಬಡಿಸುತಿಹರು

ಶಿವಬಸಮ್ಮನ ನುಡಿಯುನ್ನು ಕೇಳಿದ ವೀರಸಂಗಯ್ಯನವರು ನಸುನಗುತ್ತ ಹೇಳಿದರು.

ವಾರಿಜಾಕ್ಷಿಯುರೆಲ್ಲ ಸೇರಿ ಮನದುಂಬಿ
ಹರಸಿ ಲಿಂಗರೂಪಿ ಹರನಾಜ್ಞೆಯಂತೆ
ಗುರು ಮಹಾಂತದೇವರೆಂದು ಹೆಸರಿಟ್ಟು

ಆಗ ಯಾವತ್ತು ನಾರಿಮಣಿಯುರು ಮನದುಂಬಿ ಜೋಗುಳವನ್ನು ಹಾಡುವವರಾಗಿದ್ದಾರೆ, ಹಿರಿಯ ಹುದ್ದರಿಯಾಗಿದ್ದ ಶಿವಬಸಮ್ಮ ಮುಂದಾಗಿ ಧ್ವನಿ ತೆಗೆದು ಮಂಗಲ ಮೂರ್ತಿ ಜಂಗಮಾರ್ಯನ ಪಾವನ ಪುಣ್ಯನಾಮದ ಅಂಕಿತವನ್ನು ಹಾಕಿದಳು.

ಶಿವಬಸಮ್ಮ ನಾರಿಯರನ್ನು ಎಚ್ಚರಿಸುವ ರೀತಿಯಲ್ಲಿ ಹಾಡಿದಳು.

ಬಾಗಿಣಕೆ ಬಂದಿರೆ ಜೋಗುಳವ ಪಾಡಿರೆ
ಯೋಗಿ ಕಳೆಯಿಂದೊಪ್ಪುವ ಅಪ್ಪಯ್ಯಗೆ
ಬಾಗಿ ಮುದ್ದಿಸಿ ಹೆಸರಿಡರಿ ಮುದದಿಂದ

ಆಗ ನೆರೆದ ನಾರಿಯರು ಜೋಗುಳ ಪಾಡುತ್ತ ತೊಟ್ಟಿಲ ತೂಗಿ ಆನಂದದಿಂದ ಹಾಡುತ್ತಿದ್ದಾರೆ. ರಮ್ಯ ರಮಣೀಯ ಸಮಯವನ್ನು ವರ್ಣಿಸುವದು ಅಸಾಧ್ಯ. ಅದೆಂಥ ಭಾವಪೂರ್ಣ ಜೋಗುಳವದು ! ಕೇಳ ಬಯಸಿದರೆ ಮಹಾಂತನ ಜೀವನದ ಭವಿಷ್ಯ ಬಾಳಿನ ಇತಿಹಾಸವು ಆ ಜೋಗುಳದಲ್ಲಿ ರೂಪಗೊಂಡಿತ್ತು.

## ಜೋಗುಳ ಪದ

ಹರನಾಜ್ಞೆಯಲಿ ಬಂದ ನಮ್ಮ ಜಂಗಮಾರ್ಯನು
ಹರದೆಯರೆಲ್ಲ ಕೂಡಿ ಹರಸಿ ಕಂದನ
ವರವಿತ್ತು ತೂಗಿರೇ ಜೋ ಜೋ ಜೋ ||೧||

ಹುಟ್ಟುವ ಮುನ್ನ ಹೆಸರನ್ನೇ ಹೊತ್ತು
ದಿಟ್ಟಗೆ ಕಂಡ ವರಶಿಶುವೆ ಹೌದೇನವ್ವ
ತೊಟ್ಟಿತೊಳಿಟ್ಟ ಕಂದ ಜಂಗಮ ಜೋ ಜೋ ಜೋ ||೨||

ವೀರಸಂಗಯ್ಯನವರ ವರದ ಕುವರನಾಗಿ
ವೀರಶೈವ ಮತದ ಉದ್ಧಾರಿ ಸಾಲಳ್ಳಿ
ವರಪುರುಷ ಪರುಷಮಣಿಯೇ ಜೋ ಜೋ ಜೋ ||೩||

ವಡಲ ಗರ್ಭದಲ್ಲಿ ಅಡಗಿಸಿದ ರಾಚವ್ವ
ಒಡನೆ ಭೂವಿಗೆ ಬೆಳಕಿತ್ತಳವ್ವ
ಉಡಿಯ ಜ್ಯೋತಿಯನ್ನು ಜೋ ಜೋ ಜೋ ||೪||

ಮುತ್ತಿನಂಥ ಕೂಸು ಎತ್ತಿಕೊಳ್ಳಿರೇ ತಾಯಿ
ಅತ್ತದ್ದು ಗೊತ್ತಿಲ್ಲ ಪರಿಪೂರ್ಣ
ಸತ್ ಚಿತ್ತಾನಂದ ಮೂರುತಿ ಜೋ ಜೋ ಜೋ ||೫||

ಬಿಂದು ತಾ ರೂಪಾಗಿ ಷಂದಳಿದ ಜಂಗಮೇಶಾ
ಇಂದುಧರನ ಅವತಾರ ತಂದೆ
ಸಂದೇಶ ಶುಭವಾಗಿ ಜೋ ಜೋ ಜೋ ||೬||

ತೊಟ್ಟಿಲೊಳಿಟ್ಟು ಒಟ್ಟಿಗಣ್ಣ ಬಿಟ್ಟು
ದಿಟ್ಟಿ ತಾಗದಂತೆ ಚಲುವ ಚನ್ನಗೆ
ತುಟ್ಟಿ ತುದಿಯಲಿ ತಟ್ಟಿ ಜೋ ಜೋ ಜೋ ||೭||

ಆಕಾಶವೆಂಬ ತೊಟ್ಟಿಲಕೆ ದಿಕ್ಕಿನ ಕಟ್ಟು
ಚುಕ್ಕೆಗಳೆಲ್ಲ ಒಟ್ಟಾಗಿ ತೂಗುವವು
ಅಕ್ಕರೆಯ ಶಿಶುವನ್ನು ಜೋ ಜೋ ಜೋ ||೮||

ಕಳೆಗುಂದದ ಕೂಸು ತೊಳೆದ ಮುತ್ತವ
ಬೆಳೆದು ಬಾಳಲಿ ಶಿವಯೋಗ ಸಾಧಿಸೆ
ಕಳುಹಿಕೊಟ್ಟಾನ ಶಿವ ತಾ ಜೊ ಜೋ ಜೋ ||೯||

ನೆರೆದ ನಾರಿಯರೆಲ್ಲ ಹರಿಸಿನಿಂದ ಹಾಡಿ
ಹರಕೆ ಇಟ್ಟು ಹೇಳಿರವ್ವಾ ನಮ್ಮಯ್ಯ
ಸರಿಕರಲ್ಲಿ ಸಂಪನ್ನ ಎಂದು ಜೋ ಜೋ ಜೋ ||೧೦||

ಉಸುರಿನಂತೆ ಬಸುರಾಗಿ ಶಿಶು ಶಿವಯೋಗಿ
ವ್ಯಸನ ಬಿಟ್ಟೇಳು ಹಾಲು ಕುಡಿ
ನೊಸಲ ನೇತ್ರನ ವರವೇ ಜೋ ಜೋ ಜೋ ||೧೧||

ಸತ್ಯ ಸದಾಚಾರ ಚಂದುಳ್ಳ ಹಾಸಿಗೆ
ನಿತ್ಯ ಶಿವತೇಜ ಪರಿಪೂರ್ಣ ಹೊದಿಕೆ
ಉತ್ತಮಾಂಗ ಮಹಾಂತಯ್ಯ ಜೋ ಜೋ ಜೋ ||೧೨||

ಧರೆಯು ಬೆಳಕಾಗಿ ಧರ್ಮದ ಜೋಳಿಯಾಗಿ
ಧೀರ ಶಿವಯೋಗಿ ನೀನಾಗಿ
ಧರಣಿಯನೇ ಪಾಲಿಪ ಮಹಾಂತಯ್ಯ ಜೋಜೋಜೋ ||೧೩||

ಸತ್ಯ ಕೀರ್ತಿಯು ಪಡೆದು ನೀನು
ನಿತ್ಯ ನಿರ್ಮಲ ಮೂರುತಿಯಾಗಿ
ಮಿಥ್ಯಕ್ಕೆ ಮಣಿಯದ ಮಹಾಂತಯ್ಯ ಜೋ ಜೋ ಜೋ ||೧೪||

ಹಾಡಿ ಹರಿಸುವೆವು ಹಿರಿಯ ಹರಿಕೆಯಲಿ
ಪಾಡಿ ನಲಿಯುವೆವು ನೆರೆದ ನಾರಿಯರು
ಕೂಡಿ ಮನವು ಓಡಿ ಬಾಳು ಮಹಾಂತಯ್ಯ
ಜೋ ಜೋ ಜೋ ||೧೫||

ಮುತ್ತಿನಂಥ ಮಗನ ಪಡದೆವ್ವ ರಾಚವ್ವ
ಎತ್ತಿಕೊಳ್ಳವ್ವ ಉತ್ತಮ ಕಂದನ
ಹೊತ್ತಾಗತದ ಮಲಗೋ ಮಹಾಂತಯ್ಯ
ಜೋ ಜೋ ಜೋ ||೧೬||

ಆಗ ಕೊನೆಯ ನುಡಿಯೆಂದು ಹಿರಿಯ ಮುತ್ತೈದೆ ಶಿವಬಸವ್ವ ಶಿವಯೋಗಿಯ ಬಾಳಿನಲ್ಲಿ ಸುತ್ತುವರೆದು ಬರುವ ಸಕಲ ಗುಣಗಳನ್ನು ತಿಳಿಸುವ ರೀತಿಯಲ್ಲಿ ಜೋಗುಳ ಹಾಡಲು ಮುಂದಾಗಿ ಬಂದಳು. ಕೂಡಿದ ನಾರಿಯರೊಡಗೂಡಿ ಆನಂದದಿಂದ—

## ಜೋಗುಳ ಪದ

ಜೋ ಜೋ ವೀರಶೈವ ವಿರತಿ ಜೋ ಜೋ
ಜೋ ಜೋ ಹರನ ರೂಪ ವೈರಾಗ್ಯನಿಧಿಯೇ ಜೋ ಜೋ
ಸರಿಕರೆಲ್ಲ ಸಂತಸದಿ ಹರಿಸಿ ಹೆಸರಿಡಿರೇ ಮಹಾಂತನೆಂದು ಜೋ ಜೋ
ವರ ಪುರುಷ ಪುರುಷ ಮಣಿಯೇ ಜೋ ಜೋ
ಕರುಣಿ ನನ್ನಪ್ಪ ಶಿವಯೋಗಿ ಮಹಾಂತೇಶ ಜೋ ಜೋ
ವೈರಾಗ್ಯದಾಸೆಯಲಿ ನೀ ಬಂದೆ ಶಿವಯೋಗಿ ಜೋ ಜೋ
ವೀರ ವಿರತಿಯಾಗಿ ಕಂಗೊಳಿಪ ಬಾಲಯೋಗಿ ಜೋ ಜೋ
ಹಿರಿಯ ಮಠದ ಸ್ವಾಮಿ ಹರನ ರೂಪ ಹೊತ್ತು ಭುವಿಗೆ ಬಂದೆ ಜೋ ಜೋ

ಅರುಹಿನ ಕಣ್ಣಾಗಿ ರಾಚಮ್ಮನುದರ ಜ್ಯೋತಿಯಾಗಿ ಧರೆ
ಬೆಳಗಬಂದೆ ಜೋ ಜೋ
ಹರನಾಜ್ಞೆಯಲಿ ಧರೆ ಪಾಲಿಸುವ ವೀರಶೈವ ಕೀರ್ತಿ ಮೂರುತಿ ಜೋ ಜೋ
ವೀರಸಂಗಯ್ಯಸ್ವಾಮಿ ಪಡೆದುಕೊಂಡ ಪುಣ್ಯರಾಶಿ ಜೋ ಜೋ
ವರ ವೀರಶೈವ ಕಾರ್ಯ ಕುಶಲ ಮೂರ್ತಿ ಜೋ ಜೋ

ಈ ರೀತಿಯಾಗಿ ಶಿವಬಸವ್ವನು, ಯಾವತ್ತು ಕೂಡಿದ ಹೆಂಗಳೆಯರು ಒಡಗೂಡಿ ಜೋಗುಳವ ಹಾಡಿ ಮೇಲೆ ಬಾಗಿಣವ ಪಡೆದು ಎಲೆ, ಅಡಿಕೆ ಕೊಳ್ಳುವವರಾಗಿದ್ದಾರೆ. ಅವರೆಲ್ಲರ ಬಾಯಿಗೆ ಸಿಹಿ ನೀಡುವ ಉದ್ದೇಶದಿಂದ ತಂದೆ ವೀರಸಂಗಯ್ಯನವರು ಮಗ ಮಡಿವಾಳಯ್ಯನಿಂದ ನೆರೆದ ನಾರಿಯರಿಗೆ ಸಕ್ಕರೆ ಹಂಚಿ, ಮಹಾಂತನ ಜೀವನ ಸಕ್ಕರೆಯಂತೆ ಸಿಹಿಯಾಗಲೆಂದು ಹರಸಿ ಹೋಗಿ ಬರುವವರಾಗಿರೆಂದು ಹೇಳಿದ್ದಾರೆ.

ಆಗ ಸಕಲ ಮುತ್ತೈದೆಯರು ತಮ್ಮ ಚರಿತ್ರೆಯ ನಾಯಕರಾದ ಬಾಲ ಶಿವಯೋಗಿಗಳನ್ನು ಮನ ತಣಿಯುವವರೆಗೆ ಮುದ್ದಿಸಿ, ಎತ್ತಿ ಇಳಿಸಿ ಆಡಿಸಿ ಆನಂದಪಟ್ಟವರಾಗಿ ಬಾಣಂತಿಗೆ, ಕೂಸಿಗೆ ಶುಭಕೋರಿ, ಹರಿಕೆ ಆಶೀರ್ವಾದ ರೂಪದಲ್ಲಿ ತಾವುಗಳೆಲ್ಲರೂ ತಂದ ಕಿರಿ ಅಂಗಿ, ಕುಲಾಯಿ, ಕುಂಚಗಿ, ಮೇಲ್‌ಹೊದಿಕೆ, ಹಾಸುವ ರೇಶ್ಮೆಯ ಮಡಿತುಂಡು ಶಿವಯೋಗಿಯ ಜೀವನಕ್ಕೆ ಮಠಾಧಿಕಾರಿಯಾಗುವ ಸ್ವಾಮಿಗೆ ಒಪ್ಪುವಂಥಾ ಕಾವಿ ಬಣ್ಣದಲ್ಲಿ ಅದ್ದಿ ತೆಗೆದ ಹಲವಾರು ಉಡುಗರೆಯನು ಕೊಟ್ಟು, ತಾಯಿಯಾದ ಪುಣ್ಯವತಿಗೆ ಶೀರೆ, ಕುಪ್ಪಸ, ಬಾಣಂತಿಯುಚ್ಚು, ಉಳಿಗದವಳಾಗಿ ಆರೈಕೆ, ಉಪಚಾರಗೈದ ಶಿವಬಸವ್ವನಿಗೆ ಉಡುಗರೆ ಕೊಟ್ಟು ಬಾಲಯೋಗಿ ಕಳೆಯಿಂದೊಪ್ಪುವ ಮಹಾಂತದೇವರನ್ನು ಮನಸಾರೆ ಪ್ರೀತಿ, ಪ್ರೇಮಗಳಿಂದ ರಂಜಿಸಿ ತಮ್ಮ ತಮ್ಮ ಮನೆಗಳಿಗೆ ತೆರಳಿದರು.



# ೫ ನೇ ಅಧ್ಯಾಯ

## ಮಹಾಂತಯ್ಯನವರ ಬಾಲ್ಯ ಹಾಗೂ ವಿದ್ಯಾಭ್ಯಾಸ

ಮಹಾಂತಯ್ಯನವರ ಜನನದಿಂದ ವೀರಸಂಗಯ್ಯನವರ ಬಾಳಿನಲ್ಲಿ ಹೊಸರೂಪವಾಯಿತು. ಪ್ರತಿ ವರುಷ ಬೆಳೆದುಬರುವ ಹೊಲದ ಪೀಕು ಗಳೆಲ್ಲ ಇಮ್ಮಡಿ ಮುಮ್ಮಡಿಯಾಗಿ ಬಂದವು. ಮನೆಯಲ್ಲಿ ಹೈನ ಹಾಲು ದನಕರುಗಳ ಹೆಚ್ಚಳ ಹೇಳತೀರದು. ಇನ್ನು ಊರಲ್ಲಿಯಂತೂ ಉತ್ಸವ, ಪುಣ್ಯಕಾರ್ಯಗಳಾದ ಪುರಾಣ, ಪ್ರವಚನ, ಕೀರ್ತನೆಗಳು ಸಾಗಿ ದೇವರಲ್ಲಿ ವಿಶ್ವಾಸ ಭಕ್ತಿಯನ್ನಿಟ್ಟು ನಡೆದುಕೊಳ್ಳಲು ಜನರು ಮುಂದಾಗಹತ್ತಿದರು. ಶ್ರೀ ದುರದುಂಡೇಶ್ವರ ಕೃಪೆಗೆ ಪಾತ್ರರಾಗಬೇಕೆಂದು ಹಂಬಲಿಸಹತ್ತಿದರು. ಶಿವಪುರಾಣದಂತಹ ಪವಿತ್ರ ಕಾರ್ಯವನ್ನು ಅದೇ ವರ್ಷ ಶ್ರಾವಣಮಾಸದ ಪುಣ್ಯಪ್ರಸಂಗದಲ್ಲಿ ಜರುಗಿಸಲು ಸನ್ನದ್ಧರಾದರು. ನಿತ್ಯವೂ ದಾಸೋಹ ಕಾರ್ಯವು ಜರುಗಿ ಗ್ರಾಮದ ದೀನದಲಿತರಿಗೆ, ಪವಿತ್ರ ಪ್ರಸಾದ ಒದಗಿಸಿದರು.

ಬರುಬರುತ್ತ ಹಳ್ಳಿಗರ ಮುಗ್ಧ ಮನದಲ್ಲಿ ನಿಜದ ನಿಲುವನರಿಯುವ ಆಸೆ ಹೆಚ್ಚಿ ಲಿಂಗನಿಷ್ಠೆ ಸೇವಾಕಾರ್ಯಗಳಲ್ಲಿ ಮುಂದಾಗಹತ್ತಿದರು. ವಿಚಾರಶೀಲ ಸಂಪನ್ನರಾಗಿ ಮತ್ಸರ ಮರೆತು, ಭೇದ ಬುದ್ಧಿ ಅಳಿದು ತಿಳುವಳಿ ಕೆಯ ಭಾವನೆಗಳು ರೂಪಗೊಂಡು ಯಾವತ್ತರು ನಾವು ಗ್ರಾಮವಾಸಿಗಳು ಅಣ್ಣ ತಮ್ಮರು, ಒಬ್ಬರಿಗೊಬ್ಬರು ಆಸರನೀಡಿ ನಿಜ ಜೀವನದಲ್ಲಿ ಏಕೋ ಭಾವ ಮೂಡಿ ಬರಲೆಂದು ಬಯಸಹತ್ತಿದರು.

ಮಹಾಂತಯ್ಯನವರ ಜನನದ ಶುಭಯೋಗದಿಂದ ಸಾಲಹಳ್ಳಿ ಗ್ರಾಮ ದಲ್ಲಿ ಮೊದಲಿನಿಂದಲೂ ಬೆಳೆದುಬಂದ ವೈರತ್ವದ ಸೆಳವು ಮಾಯವಾಗಿ ಬಾಂಧವ್ಯದ ಸವಿಯೂಟವನ್ನು ಎರಡು ಮನೆತನದ ಹಿರಿಯ ಹುದ್ದರಿಗಳು ನಗುನಗುತ್ತ ಸೇವಿಸಿ, ಆತ್ಮೀಯರಾಗಿ ಬಂಧುಗಳಂತೆ ಬಾಳುವ ಭರವಸೆ ಯನ್ನು, ವಚನವನ್ನು ಗುರುಮೂರ್ತಿ ಹಿರಿಯ ವೀರಸಂಗಯ್ಯನವರ ಪಾದ ಮುಟ್ಟಿ ಪ್ರಮಾಣಬದ್ಧವಾಗಿ ತಿಳಿಸಿದರು. ಶಿವಪುರಾಣದ ಸಮಾಪ್ತಿಯ ದಿನದಂದು ಮಂಗಲಕಾರ್ಯಗಳ ಕೂಟ,ಜಂಗಮಾರ್ಚನೆ, ಅಥಿತಿ-ಅಭಾಗಿಗಳ

ಸತ್ಕಾರದ ನೋಟ, ಆದರ್ಶ ತತ್ವ ಸಂಪದ್ಭರಿತ ಸಾಲಹಳ್ಳಿ ಗ್ರಾಮದ ಈ ಸುಖಮಯ ಸಂಗತಿಯನ್ನು ಹೊತ್ತು ವಾಯುದೇವ ತನ್ನ ಕರ್ತವ್ಯವೆಂದು ನಾಡಿನ ನಾಲ್ಕೂ ದಿಕ್ಕುಗಳಲ್ಲಿ ಪಸರಿಸಿದನು.

ಮಹಾಂತಯ್ಯನವರ ಜನನವಾಗಿ ಈಗ ಆರು ತಿಂಗಳಲ್ಲಿಯೇ ಸಾಲಹಳ್ಳಿಗ್ರಾಮು ಇಷ್ಟೊಂದು ಪ್ರಗತಿಯನ್ನು ಸಾಧಿಸಿತು. ಸಾಲಹಳ್ಳಿಗ್ರಾಮು ಅಷ್ಟೇ ಅಲ್ಲ. ಅಪ್ಪನವರ ಅವತಾರದಲ್ಲಿ ಪುಣ್ಯ ಪ್ರಕಾಶದ ಶುಭಪ್ರಕಾಶ ಜ್ಯೋತಿಯು ಚಿನ್ಮಯ ಜ್ಯೋತಿಯಾಗಿ, ನಿರ್ಮಲ ಜ್ಯೋತಿಯಾಗಿ ಸುತ್ತಲಿನ ಹತ್ತು ಹರದಾರಿಯ ಗ್ರಾಮಾಂತರ ಪ್ರದೇಶವನ್ನು ಬೆಳಗಹತ್ತಿತು. ಮಾನವನು ತನ್ನ ಬದುಕಿನಲ್ಲಿ ಬಯಸುವ ಸುಖ, ಸಂತೋಷ, ಸಮೃದ್ಧತೆ ಎಲ್ಲವೂ ಉದ್ಭವಿಸಿದವು.

ಈಗ ಮಹಾಂತಪ್ಪನವರು ಆರು ವರ್ಷದ ಬಾಲಕರು. ಈ ಬಾಲ ವಯದಲ್ಲಿ ಮಹಾಂತನ ಗುಣ ಸದ್ಗುಣದ ಖಣಿಯಾಗಿತ್ತು. ಪರರ ದುಃಖ ಗಳನ್ನು ವಿಚಾರಿಸುವಷ್ಟು, ತಿಳಿದುಕೊಳ್ಳುವಷ್ಟು ನಿರ್ಮಲವೂ ಆಗಿತ್ತು. ತಾಯಿಯಾದ ರಾಚಮ್ಮನು ತಂದೆಯಾದ ವೀರಸಂಗಯ್ಯನವರು ಆಗಿನ ಕಾಲ ಮಾನಕ್ಕೆ ತಕ್ಕಂತೆ ಮಹಾಂತಯ್ಯನವರಿಗೆ ಓದು ಬರಹ, ವಿದ್ಯಾ ಬುದ್ಧಿ ಗಳನ್ನು ಕಲಿಸುವ ಸದಿಚ್ಛೆಯುಳ್ಳವರಾಗಿದ್ದಾರೆ ಜಂಗಮರ ಪದ್ಧತಿಗನು ಸಾರವಾಗಿ ಶಿವಪೂಜಾ ವಿಧಿ, ಶಾಸ್ತ್ರಾಭ್ಯಾಸದ ತಿರುಳು ತಿಳಿಸುವ ಉದ್ದೇಶ ದಿಂದ ವೀರಸಂಗಯ್ಯಪ್ಪಗಳು ಮಗುವಾದ ಮಹಾಂತ ದೇವರಿಗೆ ಮನೆಯಲ್ಲಿ ಮಠದ ಭಾವಣಿಯಲ್ಲಿ ಅಕ್ಷರಾಭ್ಯಾಸಕ್ಕೆ ಗುರುವಾಗಿ ಓಂ ನಮಃ ಸಿದ್ಧಂ ಎಂಬ ಪಾಠ ಮೊದಲು ಸುರುವು ಮಾಡಿದ್ದಾರೆ. ನೂರಾರು ವರುಷಗಳ ಹಿಂದಿನ ಮಾತು, ಈಗಿನ ಕಾಲದಂತೆ ಪೆನ್ನು, ಪೆನ್ಸಿಲು, ಪಾಠಿ, ಪುಸ್ತಕ, ಹಾಳಿ, ಪಾಳಿಗಳ ಅನುಕೂಲವಿಲ್ಲದ ಕಾಲವದು. ಮೇಲಾಗಿ ಚಿಕ್ಕ ಹಳ್ಳಿಯಾಗಿದ್ದ ಸಾಲಳ್ಳಿ ಯಲ್ಲಿ ವಿದ್ಯಾಭ್ಯಾಸದ ಅನುಕೂಲಕ್ಕೆ ಬೇಕಾಗುವ ಶಾಲೆಯಂತೂ ಮೊದಲಿರ ಲಿಲ್ಲ. ವೀರಸಂಗಯ್ಯಪ್ಪನವರೇ ಹತ್ತೆಂಟು ಹುಡುಗರಿಗೆ ತಾವೇ ವಿದ್ಯಾ ಬುದ್ಧಿ ಕಲಿಸುವ ಉದ್ದೇಶದಿಂದ ಮಠದ ಭಾವಣಿಯಲ್ಲಿ ಅನುಕೂಲ ಮಾಡಿದ್ದರು. ಮಾವಿನ ಹಲಗೆಯೊಂದನ್ನು ಸಿದ್ಧಪಡಿಸಿ ಅದರ ಮೇಲೆ

ಉಸುಕು ಸುರಿದು ಬಿದಿರು ಕಟ್ಟಿಗೆಯು ತುಂಡು ಪೆನ್ಸಿಲಿನ ಆಕಾರಕ್ಕೆ ಮುರಿದಿಟ್ಟುಕೊಂಡು ಉಸುಕಿನ ಮೇಲೆ ತೀಡಿ ತೀಡಿ ಕಲಿಸುವ ಪರಿಪಾಠವನ್ನು ವೀರಸಂಗಯ್ಯನವರು ಸಾಂಗಗೊಳಿಸಿ, ಹಲವಾರು ಮಕ್ಕಳಿಗೆ ವಿದ್ಯಾದಾನ ಮಾಡುವ ಶಾಲಾ ಗುರುಗಳು ಆಗಿದ್ದರು. ಈ ಮೊದಲೊಮ್ಮೆ ತಿಳಿಸಿದೆ. ಮೂಲಾಕ್ಷರ ವ್ಯಂಜನಗಳೊಡನೆ ಕಾಲು, ಪಾವು, ದೀಡೆ, ಅಂಕಿ, ಮಗ್ಗಿ ಇತ್ಯಾದಿಗಳನ್ನು ನಮ್ಮ ಮಹಾಂತರು ಮುಖಪಾಠ ಮಾಡಿದರು. ಮರಾಠಿಯನ್ನು ಪರಿವರ್ತಿಸಿ ಕನ್ನಡಕ್ಕಿಳಿಸಿಕೊಂಡವರಾಗಿ ಕೈಗೆ ಸಿಕ್ಕ ಹಲವಾರು ಕನ್ನಡ ವಾಚನ ಭಾಗಗಳನ್ನು, ಕಾವ್ಯ ಮಾಲೆಯನ್ನು ಬಾಯಿಪಾಠಮಾಡಿ ರೂಢಿಸಿಕೊಂಡರು. ಅದರೊಡನೆ ಆಳವಾದ ಅಭ್ಯಾಸ ಬಲದಿಂದ ಹಲವಾರು ಸರಳ ಗದ್ಯಭಾಗದ ಗ್ರಂಥಗಳನ್ನು ಅರಗಿಸಿಕೊಂಡರು. ಹೀಗೆ ಪದ್ಧತಿಗನುಸಾರವಾಗಿ ಅಪ್ಪ ಮಹಾಂತರ ಪ್ರಥಮ ಶಿಕ್ಷಣ ಮುಂದುವರೆಯಿತು.

ಅಪ್ಪನವರ ಮನದಾಸೆಯಂತೆ ಉನ್ನತ ಮಟ್ಟದ ಅಭ್ಯಾಸ ದೊರೆಯುವದೆಂತು ? ಈಗಿನಂತೆ ಆಗಿನ ಕಾಲದಲ್ಲಿ ಪಟ್ಟಣಕ್ಕೊಂದು ವಿಶ್ವವಿದ್ಯಾಲಯವಿರಲಿಲ್ಲ. ಹಳ್ಳಿಗೊಂದು ಶಾಲೆ ಇರಲಿಲ್ಲ. ಹೈಸ್ಕೂಲ ಶಿಕ್ಷಣವಂತೂ ತೀರ ವಿರಳ. ಇಂತಹ ಕಾಲಮಾನದಲ್ಲಿ ಮಹಾಂತರಿಗೆ ಜಂಗಮ ಮಕ್ಕಳ ಕರ್ತವ್ಯದಂತೆ ಸಂಸ್ಕೃತ ಕಲಿಯುವ ಇಚ್ಛೆ ಉಂಟಾಯಿತು. ಇಚ್ಛೆಯೇನೋ ಹುಟ್ಟಿಕೊಂಡಿತು. ಆದರೆ ಕಲಿಯುವದೆಂತು ? ಆದರೂ ಮಹೇಶಪ್ರೇಮಿಯಾದ ಮಹಾಂತರಿಗೆ ಶಿವಮಹಾದೇವ ಮಹೇಶ್ವರನ ಕರುಣೆಯಿಂದ, ತಂದೆಯವರ ಪ್ರಯತ್ನದ ಫಲವಾಗಿ ಅವರ ಇಚ್ಛೆ ಈಡೇರುವ ಪ್ರಸಂಗವು ಪ್ರಾಪ್ತವಾಯಿತು.

ತಾತ್ವಿಕ ಜ್ಞಾನ ಸಂಪಾದನೆಯ ಆಸೆಯು ಅಂಕುರಿಸಿ ಮಹಾಂತಯ್ಯನವರು ತಮ್ಮ ನಿಜಬಾಳಿನ ಗುರಿ ಮುಟ್ಟುವ ಉದ್ದೇಶದಿಂದ ನಿಜಗುಣ ಶಿವಯೋಗಿವರೇಣ್ಯರ ಕೈವಲ್ಯವನ್ನು ಅರಿತುಕೊಳ್ಳುವ ಆಸೆಯುಳ್ಳವರಾಗಿದ್ದಾರೆ. ಅವರಿಗಿರುವ ಆಸೆಯಂತೆ ಅಪ್ಪ ವೀರಸಂಗಯ್ಯ ಸ್ವಾಮಿಗಳು ಸಹಾಯದ ಸಿಹಿನೀರು ಹಣಿಸಿ, ವಿದ್ಯಾಬುದ್ಧಿಗಳು ಹೆಮ್ಮರವಾಗಿ ಬೆಳೆಯಬೇಕು ನಮ್ಮ ಮಹಾಂತನಲ್ಲಿ ಎಂಬ ಸದಿಚ್ಛೆಯಿಂದ ಸಂಸ್ಕೃತ ಪಾಠಕ್ಕೆ

ಅನುಕೂಲ ಮಾಡುವವರಾದರು. ಹಿರಿಯ ಮಠದ ಸಂಪ್ರದಾಯಕ್ಕೆ ತಕ್ಕಂತೆ ವೈದಿಕವನ್ನಂತೂ ಕಲಿಯಲೇಬೇಕು. ಅಲ್ಲದೇ ಲಿಂಗಪೂಜಾ ಸಮಯದಲ್ಲಿ ಬೇಕಾಗುವ ಮಂತ್ರಗಳನ್ನು, ವಿವಾಹ, ಮಂಗಲಕಾರ್ಯಗಳಿಗೆ ಬೇಕಾಗುವ ನೇಮಾಚಾರಗಳನ್ನು, ರುದ್ರಾಭಿಷೇಕ ವಿಧಿ, ಯಾವತ್ತನ್ನು ಅಪ್ಪ ವೀರಸಂಗಯ್ಯನವರಿಂದ ಕಲಿತುಕೊಂಡವರಾಗಿ ಹಿರಿಯ ಮಠದ ಜಂಗಮರಲ್ಲಿ ಸೈ ಎನಿಸಿಕೊಳ್ಳುವ ಮಟ್ಟಿಗೂ ಮುಂದುವರೆಯುವವರಾಗಿದ್ದಾರೆ.

ವಯಸ್ಸಿನ ಎಂಟನೇ ವರ್ಷದಲ್ಲಿ ವಿಧಾನೋಕ್ತವಾಗಿ ಇಷ್ಟೆಲ್ಲವನ್ನು ಕಲಿತು, ಜೀರ್ಣಿಸಿ ಅರಗಿಸಿಕೊಂಡ ಮಹಾಂತಯ್ಯನವರು ಮಹೇಶ್ವರ ದೀಕ್ಷಾ ಸಂಸ್ಕಾರ ಪಡೆಯಬೇಕೆಂದು ವೀರಸಂಗಯ್ಯ ಸ್ವಾಮಿಗಳು ಕ್ರಮಬದ್ಧವಾಗಿ ಆಚಾರ ಪದ್ಧತಿಯನ್ನು ಅನುಸರಿಸಿ ಪುತ್ರನಿಗೆ ಸಂಸ್ಕಾರ ಕೊಟ್ಟವರಾದರು.

ಇಂತಿರ್ಪ ಸಮಯದಲ್ಲಿ ಮಗನ ಮೇಲಿನ ವ್ಯಾಮೋಹದಿಂದಲೋ ಕರುಳ ಬಳ್ಳಿ ಹಬ್ಬಲೆಂಬ ಸದ್ಭಾವನೆಯಿಂದಲೋ ಸರಿಕರೊಡನೆ ಸಂಸಾರಿಯಾಗಿದ್ದು ಮಕ್ಕಳು ಮೊಮ್ಮಕ್ಕಳನ್ನು ಪಡೆದು ಅಜ್ಜಿ ಎನಿಸಿಕೊಂಡು ಅನವರತ ಮೊಮ್ಮಕ್ಕಳ ಆಟ ಪಾಠ, ಅನಂತ ಲೀಲಾವಿನೋದಗಳಲ್ಲಿ ಕಾಲ ಕಳೆಯುವ ಅಭಿಲಾಷೆಯಿಂದಲೋ, ಕೊನೆಯ ಗಂಡು ಮಗ ಸುಖ ಸಂಸಾರಿಯಾಗಿ ಬಾಳಲೆಂದು ಹಾರೈಸಿದ ತಾಯಿ ರಾಚವ್ವನವರು ಪುತ್ರ ವಾತ್ಸಲ್ಯದ ಬಂಧನದಲ್ಲಿ ಬಂಧಿತರಾಗಿ, ದೀಕ್ಷಾ ಸಂಸ್ಕಾರವಾದ ಬಳಿಕ ಮಠದ ಅಧಿಕಾರಿಯಾಗಿದ್ದರೂ ಸ್ವಾಮಿತ್ವದ ಪಟ್ಟ ಬೇಡವೆಂದು ಹಟ ಹಿಡಿದರು. ಆದರೆ ಮಹೇಶನ ಸಾತ್ವಿಕ ಕಳೆಯ ಬಹುಭಾಗವನ್ನು ಪಡೆದುಕೊಂಡು ವೀರಶೈವ ಮತೋದ್ಧಾರಕ್ಕೆ ಅವತಾರ ಮಾಡಿರುವಾಗ ಈ ತಾಯಿಯ ಇಚ್ಛಾನುಸಾರ ಸಂಸಾರ ಸಂಕಷ್ಟಗಳಲ್ಲಿ ಬೀಳಲು ಸಾಧ್ಯವೇ ?

ಶಿವಮಹಾದೇವ ಮುಕ್ಕಣ್ಣನ ಇಚ್ಛೆಯಂತೆ ಮಹಾಂತಯ್ಯ ಮಹಾಂತ ದೇವರೆನಿಸುವ ಕಾಲ ನಿರ್ಣಯವನ್ನು ಹೊತ್ತುತಂದ ಅಪ್ಪ ಮಹಾಂತಯ್ಯನವರು ತಾಯಿ ರಾಚವ್ವನವರಿಗೆ ತಮ್ಮ ಮುಖ್ಯ ಕರ್ತವ್ಯ, ಬಾಳಿನಲ್ಲಿ ತಾವು

ಸಾಧಿಸಬೇಕೆಂಬ ಮುಖ್ಯ ಗುರಿ, ಶಿವನನ್ನು ಸಾಕ್ಷಾತ್ಕರಿಸಿಕೊಳ್ಳುವ ಇಚ್ಛೆ, ಲಿಂಗಪೂಜಾ ಅನುಷ್ಠಾನ, ಧರ್ಮದ ಏಳಿಗೆಗಾಗಿ ತಮಗಿರುವ ಉತ್ಕೃಷ್ಟ ಅಭಿಲಾಷೆಯನ್ನು ತಿಳಿಸಿ, ತಾಯಿಯವರನ್ನು ಸಮಾಧಾನ ಪಡಿಸಿದರು.



# ೬ ನೇ ಅಧ್ಯಾಯ

## ಮಹಾಂತಯ್ಯನವರು ಮಹಾಂತದೇವರಾದದ್ದು

ಮಹಾಂತಯ್ಯ ಮಹಾಂತದೇವರೆನಿಸಿಕೊಳ್ಳಲೆಂದು ಮಹೇಶ್ವರನು ಸ್ವಪ್ನಾರ್ಥವನ್ನೇ ಅಪ್ಪನವರಲ್ಲಿ ರೂಪಿಸಿ ಕಳುಹಿಸಿದಾಗ ದೇವತ್ವದ ಸ್ಥಾನಕ್ಕೆ ಬರಲೇಬೇಕಾದದ್ದು ಸೂಕ್ತವೆಂದು ವೀರಸಂಗಯ್ಯ ಸ್ವಾಮಿಗಳು ಹಾಗು ಕಲಾದಗಿ ಗುರುಲಿಂಗ ಷಟ್ಸ್ಥಾಧ್ಯಕ್ಷರು ಮಹಾಂತಯ್ಯನವರ ಮುಖ ಮಂಡಲ ದಲ್ಲಿ ರಾರಾಜಿಸುವ ಬ್ರಹ್ಮತೇಜಸ್ಸನ್ನು, ವೈರಾಗ್ಯದ ಕಳೆಯನ್ನು ಕಂಡು ಮಹಾಂತಯ್ಯರಿಗೆ ಹತ್ತೊಂಭತ್ತನೇ ವಯಸ್ಸಿನಲ್ಲಿ ಸಾಲಹಳ್ಳಿ ಹಿರಿಯ ಮಠದ ಅಧಿಕಾರ ಪೀಠವನ್ನು ವಹಿಸಿಕೊಟ್ಟರು.

ಈಗ ಅಪ್ಪನವರು ಸ್ವಾಮಿಗಳಾದರು, ಮಠಾಧಿಕಾರಿಗಳಾದರು. ಮೋಹ, ಮಾಯಾ ಪ್ರಪಂಚದ ಶಕೆ ಅಪ್ಪನವರಿಗೆ ತಾಕದಿರಲೆಂದು ಶಿವನು ಉದ್ದೇಶಪಟ್ಟು ಮಹಾಂತದೇವರ ಮನೋಮಂದಿರದಲ್ಲಿ ವೈರಾಗ್ಯದ ಬೀಜವನ್ನು ಬಿತ್ತಿ, ಮಹಾಜ್ಞಾನ ನಿಧಿಯನ್ನಾಗಿ ಪರಿವರ್ತಿಸಿದನು. ಮಹಾಂತಯ್ಯನವರು ಹಿರಿಯ ಮಠದ ಅಧಿಕಾರಕ್ಕೆ ಬಂದಮೇಲೆ ಷಟಸ್ಥಲ ಬ್ರಹ್ಮರೆನಿಸಿದ ಆಚಾರ, ವಿಚಾರ, ಕ್ರಿಯಾಶೀಲ ಸಂಪತ್ತು, ನಡೆ ನುಡಿಗಳಲ್ಲಿ ನಿಸ್ಸೀಮರಾದರು. ಆತ್ಮದ ಸಂಕುಚಿತ ಭಾವನೆಗೆ ಕಿಂಚಿತ್ತಾದರೂ ಅವಕಾಶ ಕೊಡದೇ ಬಾಲ್ಯ ಜೀವನದಿಂದಲೂ ಅಚ್ಚೊತ್ತಿ ಬೆಳೆದುಬಂದ ಉತ್ತಮ ಗುಣಗಳಿಂದಾಗಿ ಭಕ್ತ ಬಳಗದ ಹಾರೈಕೆಯ ಹಿರಿ ಮಾಠಸ್ಥ ಗುರುಗಳಾದರು. ಗರ್ವ, ಹ್ಯಾವ, ಆತ್ಮ ಪ್ರಶಂಸೆಗಳನ್ನೇ ಅರಿಯದ ಅಪ್ಪನವರು ಅಣ್ಣಂದಿರೊಡನೆಯೂ ಚಿತ್ತಮಾತಾ ಪಿತರೊಡನೆಯು ಆತ್ಮೀಯ ಭಾವನೆ

ಯಿಂದಲೂ ಪೂಜ್ಯ ಭಾವನೆಯಿಂದಲೂ ನಡೆದುಕೊಳ್ಳುತ್ತಿರುವರು. ನೆರೆ ಹೊರೆಯುವರೊಡನೆ ಅಚ್ಚು ಮೆಚ್ಚಿನವರಾಗಿ ತಮ್ಮ ಹತ್ತೊಂಭತ್ತು-ಇಪ್ಪತ್ತನೆ ವಯಸ್ಸಿನಲ್ಲಿ ತರುಣ ತೇಜಸ್ಸಿನಲ್ಲಿ ಕಾಲಿಟ್ಟಾಗ ವೀರಸಂಗಯ್ಯಪ್ಪನವರು ನಿಶ್ಚಿಂತರಾಗಿ ತಮ್ಮಾಯುಷ್ಯದ ಕಾಲದ ಶೇಷಾಯುಷ್ಯವನ್ನು ಶಿವಸಂಕೀರ್ತನೆ ಯಲ್ಲಿ ಲಿಂಗಪೂಜಾನಿಷ್ಠೆಯಲ್ಲಿ ಕಳೆಯಲು ಸಿದ್ಧರಾಗಿ ಮಠದ ಯಾವತ್ತು ಅಧಿಕಾರವನ್ನು ಮಹಾಂತದೇವರಿಗೆ ಬಿಟ್ಟುಕೊಟ್ಟು ತಟಸ್ಥರಾಗಿ ಶಿವಧ್ಯಾನದಲ್ಲಿ ಉಳಿದುಕೊಂಡರು. ಆದರೆ ರಾಚವ್ವತಾಯಿಯವರು ಮಾತ್ರ ತಮ್ಮ ಕಿರಿಯ ಮಗನಾದ ಮಹಾಂತದೇವರ ಜೀವನದ ಭವಿಷ್ಯವನ್ನು ಬದಲಿಸಬೇಕೆಂದು ಹಾತೊರೆಯುತ್ತಿರುವರು. ಆದರೆ ಮಹಾಂತದೇವರು ಮಹಾತಾಯಿಯಾದ ರಾಚವ್ವನವರನ್ನು ಸಮಾಧಾನ ಪಡಿಸುತ್ತ, ತಮ್ಮ ವೀರ ವಿರತಿ ವೃತ್ತಿಯನ್ನು ತಿಳಿಸಿ, ಭಗವಂತನ ಪ್ರೇರಣೆಯಂತೆ ನಾವು ಬ್ರಹ್ಮ ಚರ್ಯವ್ರತಪಾಲನೆಯಲ್ಲಿದ್ದು ವೀರಶೈವ ಜನಜಾಗೃತಿಗೆ ಸಹಾಯವಾಗುವ ಲಿಂಗಪ್ರೇಮಿಯಾಗಿ ಲಿಂಗಾಂಗ ಸಾಮರಸ್ಯದ ತತ್ವದಂತೆ ಷಟಸ್ಥಲ ಸಾಧನೆ ಯಲ್ಲಿ ಬಾಳಬೇಕಾಗಿದೆ. ಅದಕ್ಕೂ ಮಾತಾಪಿತರ ಪುಣ್ಯಪೂರ್ಣ ಆಶೀರ್ವಾದ ಬೇಕೆಂದು ಕೇಳಿಕೊಂಡು ಅವರನ್ನು ಸಂತೈಸಿ ತಮ್ಮ ನಿತ್ಯ ಕರ್ತವ್ಯ, ಲಿಂಗಾರ್ಚನೆಯೊಡನೆ ವೀರಶೈವ ತತ್ವಗಳನ್ನು ವೀರಶೈವ ಜನಾಂಗ ಅಭಿವೃದ್ಧಿಗಾಗಿ ಸಾಧಿಸುವ ಕರ್ತವ್ಯವನ್ನು ಪಾಲಿಸುತ್ತ ಲಿಂಗಾನಂದದಲ್ಲಿ ಕಾಲ ಕಳೆಯುತ್ತಿದ್ದರು.

ರಾಚವ್ವತಾಯಿಯವರು ಉಪಾಯಗಾಣದೇ ಶಿವನ ಇಚ್ಛೆಯ ವಿರುದ್ಧ ನಾವೇನು ಮಾಡಲು ಸಾಧ್ಯವೆಂದು ಮಗುವಾಗಿ ಪುಟ್ಟಿ ದೇವರಾಗಿ, ಹಿರಿಯ ಮಠದ ಪಟ್ಟಾಧಿಕಾರಿಯಾದ ಮಹಾಂತದೇವರ ಬಗ್ಗೆ ಹೆಮ್ಮೆ ಪಡುತ್ತಿದ್ದರು. ಪತಿಯೊಡನೆ ತಾವಾಯಿತು ತಮ್ಮ ಮೊಮ್ಮಕ್ಕಳ ಪಾಲನೆ ಪೋಷಣೆಯಲ್ಲಿಯೂ ತಮ್ಮ ಸೊಸೆಯಂದಿರನ್ನು ತಾಯಿಯಂತೆ ಕಾಣುತ್ತ ತಮ್ಮ ಮನೆತನದ ಹೆಚ್ಚಳ, ಕೀರ್ತಿ ಗೌರವಗಳನ್ನು ಅರಿತು ಹಿರಿ ಹಿರಿ ಹಿಗ್ಗುತ್ತ ಕಾಲ ಕಳೆಯುತ್ತಿದ್ದರು.

ತಂದೆ ತಾಯಿಗಳ ಈ ಆನಂದದ ಬದುಕನ್ನು ಕಂಡು ಮಹಾಂತ ದೇವರು ಸಂಸಾರದ ಯಾವ ಕಾರ್ಯಗಳಲ್ಲಿ ಭಾಗವಹಿಸಿ ಇದು ನಮ್ಮದು,

ನವುಗೆ ಬೇಕು ಎಂದು ಆಶಿಸದೆ ತಮಗಿತ್ತ ಮಠದ ಅಧಿಕಾರ ಧರ್ಮದಂತೆ ಲಿಂಗಪೂಜೆ, ವೈರಾಗ್ಯದ ನಿಷ್ಠೆ ನೇಮಗಳಲ್ಲಿ ಸ್ವಲ್ಪ ತಪ್ಪದಂತೆ ಲಿಂಗಯ್ಯನ ಒಲುಮೆಗಾಗಿ ಮಹೇಶನ ಧ್ಯಾನದಲ್ಲಿ ಜನಹಿತ, ಧರ್ಮಹಿತ, ಕಾರ್ಯಗಳಲ್ಲಿ ಎಡಬಿಡದೇ ಶ್ರಮವಹಿಸಿ ಸಾರ್ಥಕಗೊಳಿಸಿ ಸಂತೋಷದಿಂದ ವೈರಾಗ್ಯ ಜೀವನ ಸಾಗಿಸಿದ್ದರು.



## ೭ ನೇ ಅಧ್ಯಾಯ

### ಕಹಿ ಬೇವು ಸಿಹಿಯಾದದ್ದು

ಮಠದ ಮುಂಭಾಗದಲ್ಲಿ ಒಂದು ಬೇವಿನ ಮರವು ತನ್ನಿಂದ ತಾನೇ ಬೆಳೆದು ಬಾಳಿಕೊಂಡಿತೋ ಅಥವಾ ವೀರಸಂಗಯ್ಯಸ್ವಾಮಿಗಳು ಇಚ್ಛೆಪಟ್ಟು ಮಠದ ಮುಂಬಾಗದಲ್ಲಿ ನೆರಳಾಗಲೆಂದು ಆ ಮರವನ್ನು ನೆಟ್ಟಿದ್ದರೋ ಅರಿಯದ ವಿಷಯ

ಆದರೆ ಈಗ ನಮ್ಮ ಮಹಾಂತದೇವರ ಕರುಣೆಯ ಜಲ ಉಂಡು ಉಸುರು ಬಿಡುವ ಆ ಬೇವಿನ ಮರ ತನ್ನ ವಿಷದುಸುರು ಕಳೆದುಕೊಂಡು ಸಿಹಿರಸ ಸುರಿಸುವ ಸವಿತೊಪ್ಪಲ ಹೊತ್ತು ನಿಂತಿದೆ. ದಿನ ನಿತ್ಯ ಮೂರುಕಾಲ ಲಿಂಗಾರ್ಚನೆ ಮುಗಿದ ಬಳಿಕ ಲಿಂಗಯ್ಯನಿಗೆ ಎರೆದ ನೀರನ್ನು ಈ ಬೇವಿನ ಮರದ ಬೊಡ್ಡೆಗೆ ಸುರುವಿ ಹರುಷದಿಂದ ಮರದ ಮೇಲ್ ಬದಿಯ ಇಕ್ಷಿಸಿ ಕ್ಷಿತಿಜದೊಡೆಯ ಶಿವ ಮಹಾದೇವನ ಸ್ಮರಣೆಯಲ್ಲಿ ತೊಪ್ಪಲದ ಮೇಲೆಲ್ಲ ಕೈಯಾಡಿಸಿ ಹಸಿದ ಮಗುವನ್ನು ಸಂತೈಸುವ ರೀತಿಯಲ್ಲಿ, ಹಸು ತನ್ನ ಕರುವನ್ನು ನೆಕ್ಕಿ ಸಮಾಧಾನ ಪಡಿಸುವ ಹಾಗೆ ಅಪ್ಪನವರು ಆನಂದ ಹಸನ್ಮುಖಭಾವನೆಯಲ್ಲಿ ಬೊಡ್ಡೆಯ ತಳಪಾಯದಲ್ಲಿ ಕೈಯಾಡಿಸಿ ಬರುತ್ತಿದ್ದ ಪರಿಣಾಮದಿಂದ ಆ ಬೇವಿನಮರ ತನ್ನ ಹುಟ್ಟುಗುಣವಾದ ಕಹಿಯನ್ನು ಕಳೆದುಕೊಂಡು ಸವಿ ಸವಿಯಾದ ತೊಪ್ಪಲ ಬಿಡುತ್ತ ಪುರ ಜನರ ದೃಷ್ಟಿಯಲ್ಲಿ ಪವಾಡದ ಪುಣ್ಯಮರವಾಗಿ, ಹೆಮ್ಮರವಾಗಿ ಬೆಳೆದು ನಿಂತಿದೆ ಎಂದು

ಹೇಳಬಹುದು. ಬೇವಿನ ಮರದ ಉದಾಹರಣೆಯೊಡನೆ ಇಂತಹ ಸತ್ಯಘಟನೆಗಳು ಸಾಕಷ್ಟು ಸಾಗಿರುವ ಆ ಕಾಲ ಮಹಿಮೆ. ಯಲ್ಲಿ ಅಪ್ಪನವರ ಮಹಿಮೆಯೊಂದು ಅಗಾಧವಾದದ್ದು ಅಲೌಕಿಕವಾದದ್ದು ಲೌಕಿಕರಾದ ನಮ್ಮ ನಿಮ್ಮಗಳಿಗೆ ನಿಲುಕದ ಮಾತು. ಯೋಗಿಗಳ ಪುಣ್ಯ ದರ್ಶನದಲ್ಲಿ ಸ್ಪರ್ಶ್ಯಮಾತ್ರದಲ್ಲಿ ಬೇವಿನ ಕಹಿಯಂಥ ಮಾನವನ ಹೀನಗುಣ ಕಳೆಯುವ ಸಾಮರ್ಥ್ಯ, ತಪೋ ಬಲ, ಯೋಗಬಲ, ಅನುಷ್ಠಾನ ಶಕ್ತಿ ಅಡಗಿರುತ್ತದೆ ಎನ್ನುವದು ಎಷ್ಟೆಂದರೂ ಸಂಸಾರದ ಸೆಳವಿನಲ್ಲಿ ಸೋತು ಸಣ್ಣಾಗಿರುವ ನಮಗೆ ಅಂಥಹ ಪಾವನ ಪವಾಡಗಳ ಪರಿಚಯವಾಗುವದು ಒಂದು ಪುಣ್ಯವಿಶೇಷವೆಂದೇ ಹೇಳಬೇಕು. ಅರುವಿನ ಕಣ್ಣದೃಷ್ಟಿಯಿಂದ ಶರಣರು, ಶಿವಯೋಗಿಗಳು, ಲಿಂಗಾನುಷ್ಠಾನ ದುರಂಧರರು, ಪ್ರಪಂಚದ ಬಂಧನದಲ್ಲಿ ಸಿಕ್ಕು ಕೊಳಲಾಡುವ ನಮ್ಮ ನಿಮ್ಮಂಥವರನ್ನು ಕರುಣೆಯಿಂದ ಕಂಡು ಮರುವಿನ ಮಡುವಿನಲ್ಲಿ ಬೀಳುವಾಗ ಎಚ್ಚರಿಕೆಯಲ್ಲಿ ಶಿವಯೋಗ ಸಾಮರ್ಥ್ಯದಲ್ಲಿ ಹಿತ ವಚನ ಹಿತ ಬೋಧೆ ನೀಡಿದರೆ ಮಾತ್ರ ನಮ್ಮ ಜನ್ಮ ಪಾವನ, ಮಾನವರಾಗಿ ಜನಿಸಿದ್ದಕ್ಕೂ ಸಾರ್ಥಕ. ಬೇವಿನ ಮರದ ವಿಷದುಸುರು ಮಾಯವಾದಂತೆ ಮಾನವರ ಹೀನ ಬದುಕಿನಲ್ಲಿ ಕಂಡು ಬರುವ ವಿಷಬಾಳಿನ ವಿಷಗಳಿಗೆ ತನ್ನ ತಾನೇ ಸರಿಯುವದರಲ್ಲಿ ಸಂಶಯವಿಲ್ಲ.



## ೮ ನೇ ಅಧ್ಯಾಯ

### ಅಪ್ಪನವರು ಹುಟ್ಟೂರನ್ನು ತ್ಯಜಿಸಿದ್ದು

ಹೀಗೆ ಕೆಲಕಾಲ ಅಪ್ಪನವರು ಸಾಲಳ್ಳಿಯ ಮಠದಲ್ಲಿ ತಮ್ಮ ನಿತ್ಯ ಜೀವನವನ್ನು ಲಿಂಗಾಚರಣೆ, ವೀರಶೈವ ತತ್ವಬೋಧೆ, ಶಿವಯೋಗ ಸಾಧನೆ ಅನುಷ್ಠಾನದ ಗುರಿ ತಿಳಿಯುವ ಹವ್ಯಾಸದಲ್ಲಿ ಸಾಗಿದವರೇ ಹೊರತು ಭೂಮಿ ಸೀಮೆಗಳ ಅಪೇಕ್ಷೆಯಾಗಲಿ, ಮೋಹ, ಮದ, ಮತ್ಸರಗಳ ಸುಳು ವಾಗಲಿ ಸೋಂಕಲಿಲ್ಲ. ಆದರೆ ದಾಯಾದಿಗಳೆಂದು ಕರೆಯಿಸಿಕೊಳ್ಳುವ ಅಣ್ಣ ಮಡಿವಾಳಯ್ಯ, ಮೇಳಯ್ಯನವರು ಸಂಸಾರದ ವಿಷಯವಾಸನೆ

ಯನ್ನುಂಡು ಪ್ರಪಂಚದ ಆಸೆ ಆಮಿಷಗಳಿಗೆ ಒಳಗಾಗಿ ಗೃಹಸ್ಥ ಜೀವನದ ಪ್ರವೇಶ ಮಾಡಿದ ಅವರು ಗೃಹಸ್ಥಾಶ್ರಮದ ಪರಿಸ್ಥಿತಿಯಲ್ಲಿ ಮಠದ ಆಸ್ತಿಯನ್ನು ಇಬ್ಭಾಗ ಮಾಡಿಕೊಳ್ಳುವ ಇಚ್ಛೆಯುಳ್ಳವರಾಗಿದ್ದಾರೆ. ಅದರಂತೆ ಬೀಳು ಭೂಮಿಯನ್ನು ಮಹಾಂತದೇವರ ಪಾಲಿಗೆ ಬಿಟ್ಟು ಸಕಲ ಆಸ್ತಿಯನ್ನು ಹಂಚಿಕೊಂಡು ತಮ್ಮ ಸಂಸಾರ ನಿರ್ವಹಿಸುವ ಹೊಣೆಗಾರಿಕೆಯಲ್ಲಿ ಮಹಾಂತ ದೇವರಿಗೆ ಅನ್ಯಾಯ ಮಾಡುತ್ತಿದ್ದೇವೆ, ಮೋಸಮಾಡುತ್ತಿದ್ದೇವೆ, ವಂಚಿಸುವ ಸಾಧಕರಾಗಿದ್ದೇವೆ ಎನ್ನುವದನ್ನು ಮರೆತು, ಆಸ್ತಿಪಾಸ್ತಿಗಳ ಆಸೆಯಲ್ಲಿ ತುಸು ಭೂಮಿ, ಅದೊಂದು ಮಠ ಬಿಟ್ಟು ಹಂಚಿಕೊಂಡು ತಮ್ಮ ತಮ್ಮ ಭಾಗದಲ್ಲಿ ಉಳಿದುಕೊಂಡವರಾಗಿದ್ದಾರೆ. ಆದರೂ ಮಹಾಂತದೇವರು ಇದಾವದರ ಕಡೆಗೆ ಲಕ್ಷ್ಯಗೊಡದೆ ತಟಸ್ಥರಾಗಿ ಉಳಿದುಬಿಟ್ಟರು. ಆದರೆ ತಮ್ಮ ತಮ್ಮಲ್ಲಿ ದಾಯಾದಿಗಳು, ಊರಲ್ಲಿ ಕೆಲವು ಹಿರಿಯರು ಹಾಗೂ ಯಜಮಾನರಾದ ವೀರಸಂಗಯ್ಯನವರು ಮಹಾಂತದೇವರಿಗೆ ಅನ್ಯಾಯ ಮಾಡಿದಂತಾಗುತ್ತದೆ, ವಂಚಿಸಿ ಆಸ್ತಿ ಎತ್ತಿ ಹಾಕುವ ಇರಾದೆ ಉಳ್ಳವರೆನಿಸಿ ಕೊಳ್ಳಬೇಕಾಗುತ್ತದೆ ಎಂಬ ಧರ್ಮ ಸಂಕಟದಲ್ಲಿ ಸಿಕ್ಕು ಅವರಿಗೆ ಎಷ್ಟು ಭೂಮಿ ಬರುವದೋ ಅಷ್ಟನ್ನು ಕೊಡಲೇಬೇಕು ಎಂಬ ಕಾರಣದಿಂದ ಪ್ರಕೋಪದ ಮಟ್ಟಕ್ಕೆ ಮುಟ್ಟಿ ಕಲಹಕ್ಕೆ ಕಾರಣವಾಗುತ್ತದೆ. ಎಲ್ಲರಲ್ಲಿಯೂ ಭಿನ್ನಾಭಿಪ್ರಾಯ ಹುಟ್ಟಿ ವಿಪರೀತಕ್ಕೆ ಬಂದ ಪ್ರಸಂಗವನ್ನು ಅರಿತ ಮಹಾಂತದೇವರು ಏನೊಂದು ಮಾಡಲಿಕ್ಕೆ ಸಾಧ್ಯವಾಗದೇ ಸುಮ್ಮನಾಗಿ ಬಿಟ್ಟರು. ಅವರ ಈ ಸಾಧುವಾದ ವರ್ತನೆಗೆ ಕಾರಣ ಇಲ್ಲದಿಲ್ಲವೆಂದು ಧಾರಾಳವಾಗಿ ಹೇಳಬಹುದು.

ಸೌಮ್ಯ ಜೀವಿಗಳೂ, ಸಾಧುತ್ವದ ಮರ್ಮವನ್ನರಿತವರೂ, ಸಾತ್ವಿಕ ಗುಣಸ್ವಭಾವದವರೂ, ತತ್ವಜ್ಞಾನಿಗಳೂ, ಸಂಪನ್ನತೆಯೇ ಸಂಪೂರ್ಣ ಜೀವನದ ಮೂಲ ಗುರಿ ಎಂದು ತಿಳಿದವರೂ ಆದ ಮಹಾಂತದೇವರಿಗೆ ಈ ಮಾತ್ಸರ್ಯದ ಕಲಹದ ಕಾರಣವಾಗಿರುವ ಆಸ್ತಿ ಪಾಸ್ತಿಗಳನ್ನು ಬಿಟ್ಟುಕೊಟ್ಟು ಹೆಚ್ಚೇನು ಈ ಸ್ಥಾನವನ್ನೇ ಬಿಡಬೇಕೆಂಬ ಬಯಕೆ ಉದ್ಭವಿಸಿ ವೈರಾಗ್ಯ ಮುಂದಾಗಿ ಹೊಲ, ಮನೆ, ಮಠ ತಮಗಿದ್ದ ಸಾಲಳ್ಳಿ ಹಿರಿಯ ಮಠದ ಅಧಿಕಾರ ಎಲ್ಲವನ್ನು ಮರೆತು ಹೊರಟರು.

————

# ಅಧ್ಯಾಯ

## ಮುದಕವಿಯ ಹಾದಿಯಲ್ಲಿ ಹುಲಿರಾಯನ ಭೆಟ್ಟಿ

ಸ್ವಸ್ಥಾನ ಬಿಟ್ಟು ಹೊರಟ ಮಹಾಂತದೇವರು ಮುದಕವಿಗೆ ಪ್ರಯಾಣ ಮಾಡುವವರಾಗಿದ್ದಾರೆ. ಮಹಾತ್ಮರಾದವರ ಮನದಿಂಗಿತವನ್ನು ಅರಿಯುವದು ಅಷ್ಟೊಂದು ಸುಲಭಸಾಧ್ಯವಲ್ಲವೆಂದೇ ಹೇಳಬಹುದು.

ಹುಟ್ಟಿ ಬಂದಿರುವ ಪ್ರತಿಯೋರ್ವ ಮಹಾತ್ಮರು ಹುಟ್ಟಿದಾಗಲೇ ಮಹಾತ್ಮ ಎನಿಸಿಕೊಂಡೇ ಬಂದಿರುವದಿಲ್ಲನಾದರೂ ತಮ್ಮ ಪ್ರಯತ್ನ, ಪರಿಶ್ರಮ ಸಾಧನೆಗಳನ್ನು ಸಾಧಿಸಿ, ಸಿದ್ಧಿಯನ್ನು ಪಡೆದು ಯಾವ ಆಸೆ ಆಕಾಂಕ್ಷೆಗಳಿಗೆ ಒಳಗಾಗದೆ ತಮಗೆ ಲಭಿಸಿದ ಜ್ಞಾನಜ್ಯೋತಿಯ ಬೆಳಕಿನಲ್ಲಿ ಮುಂದಾಗುವರು.

ಈಗ ಮಹಾಂತದೇವರು ತಮ್ಮ ಸಾಧನೆಯ ಗುರಿಯನ್ನು ತಲುಪುವದಕ್ಕಾಗಿ, ತಮಗೆ ಲಭಿಸಿದ ಜ್ಞಾನವನ್ನು ಸದುಪಯೋಗ ಪಡಿಸಿಕೊಳ್ಳುವ ಆಸೆಯಿಂದ, ದೇವತ್ವದ ಮಾರ್ಗವನ್ನು ಕಂಡು ಹಿಡಿಯುವ ಸದ್ಭಾವನೆಯಿಂದ ಸಕಲ ಆಸ್ತಿ ಪಾಸ್ತಿ ಮನೆ ಮಠಗಳನ್ನು ಸರಿಕಂರಾದ ಅಣ್ಣಂದಿರುಗಳಿಗೆ ಬಿಟ್ಟು ಕೊಟ್ಟು ಹೊರಟಿದ್ದಾರೆ.

ಸಾಲಹಳ್ಳಿಯಲ್ಲಿ ಇರುವಾಗಲೇ ಇವರು ಮುದಕವಿಗೆ ಆಗಾಗ ಹೋಗಿ ಬರುತ್ತಿದ್ದರೆಂಬುದು ತಿಳಿದು ಬಂದ ವಿಷಯ. ಇವರ ಬಾಲ್ಯ ಗೆಳೆಯನಾಗಿದ್ದ ಶಿವಲಿಂಗಯ್ಯ ಸೇವೆಗಾಗಿ ಅಪ್ಪನವರಿಗೆ ಜೊತೆಯಾಗಿರುತ್ತಿದ್ದನಂತೆ. ಈ ಶಿವಲಿಂಗಯ್ಯನನ್ನು ಕರೆದುಕೊಂಡು ಸಾಲಹಳ್ಳಿಯಿಂದ ಮುದಕವಿಗೆ ಹೊರಟ ಒಂದು ಪ್ರಸಂಗದಲ್ಲಿ ಎರಡನೇ ಪವಾಡದ ಪರಿಚಯವಾಗುವಂಥಾ ಘಟನೆ ನಡೆದುಹೋಗಿದೆ. ಈ ವಿಷಯವನ್ನು ಆಗ ಬಾಲಕನಾಗಿ ಮಹಾಂತದೇವರ ಸೇವೆ ಮಾಡಿಕೊಂಡಿದ್ದ ಶಿವಲಿಂಗಯ್ಯ ಈಗ ಸಾಧಾರಣ ೮೦ ವಯಸ್ಸಿನವನಾಗಿರಬಹುದು. ಆತನಿಂದ ಕೆಳಗಿನ ಪ್ರಸಂಗ ಕೇಳಿಬಂದಿದೆ.

ತರುಣ ವಯಸ್ಸಿನ ಮಹಾಂತದೇವರಿಗೆ ಕುದುರೆ ಹತ್ತುವದೆಂದರೆ ಬಲು ಇಷ್ಟ. ಎಂಥಹ ದಷ್ಟಪುಷ್ಟವಾದ ಎಟ್ಟಿಗುಣದ ಕುದುರೆಯಿರಲಿ ಅದರ

ಮೇಲೆ ಸವಾರಿ ಮಾಡಿ ಮೆತ್ತಗೆ ಮಾಡಿಕೊಂಡು ಬಂದಾಗಲೆ ಅವರ ಮನಸ್ಸಿಗೆ ಸಮಾಧಾನ ಹಾಗೂ ಅಭಿಮಾನ ಕುದುರೆ ಸವಾರಿ ಮಾಡಿಕೊಂಡು ಸಂಚಾರ ಕಾರ್ಯಗಳನ್ನು ಕೈಕೊಂಡು ಭಕ್ತರ ಬೇಕುಬೇಡೆಲ್ಲವನ್ನು ತಿಳಿದು, ಭಕ್ತರೆಲ್ಲ ಸನ್ಮಾರ್ಗದಲ್ಲಿ ಸಾಗುವಂತೆ ಮಾಡುವದೇ ಅವರ ಗುರಿಯಾಗಿ ಎಡಬಿಡದೇ ಮಠದ ಕಾರ್ಯಕ್ಷೇತ್ರದಲ್ಲಿ ಇವರ ಪರಿಶ್ರಮ ಇಲ್ಲದಿರಲಿಲ್ಲವೆಂದು ಕೇಳಬಲ್ಲೆವು.

ಹೀಗೆ ಒಮ್ಮೆ ಶಿವಲಿಂಗಯ್ಯನನ್ನು ಸಂಗಡ ಕರೆದುಕೊಂಡು ಸಾಲಳ್ಳಿಯಿಂದ ಮುದಕವಿಯ ಮಾರ್ಗವಾಗಿ ಕುದುರೆಯ ಮೇಲೆ ಸಂಚಾರಕ್ಕೆ ಹೊರಟಿದ್ದಾರೆ. ಸಂಜೆಯ ಮುಂಗಾಳು ಮುಂದಾದ ಸಮಯ. ಮಾರ್ಗ ಕ್ರಮಣ ಸಾಗಿದೆ. ಸಾಲಹಳ್ಳಿಯನ್ನು ಬಿಟ್ಟು ಮುದಕವಿಯ ಮಧ್ಯದಾರಿಗೆ ಬಂದಿದ್ದಾರೆ. ಸುತ್ತಲು ಗುಡ್ಡ, ಕೊಳ್ಳ, ಡಬ್ಬಕಳ್ಳಿ, ಹೊನ್ನಂಬರಿ, ಮುಳ್ಳಕಂಟೆ, ಸುಲಂಗಿ, ಹೊನ್ನಿ ಹಲವಾರು ಗಿಡಗಂಟೆಗಳಿಂದ ಮುಚ್ಚಿದ ಗುಡ್ಡದ ಬದಿಯಲ್ಲಿ ಕುದುರೆಯನ್ನು ನಡೆಯಿಸಿಕೊಂಡು ಹೊರಟಿದ್ದಾರೆ. ಮಹಾಂತ ದೇವರ ಹಿಂದೆ ಕುದುರೆಯ ಮೇಲೆ ಶಿವಲಿಂಗಯ್ಯ ಅಂಜಿಕೆಯ ಅಳ್ಳೆದೆಯವನಾಗಿ ಕೂತಿದ್ದಾನೆ. ಅಪ್ಪನವರು ಯಾವ ಭಯಕ್ಕೂ ಒಳಗಾಗದೆ ತಮ್ಮಿಚ್ಛೆಯಲ್ಲಿ ಶಿವಧ್ಯಾನದಲ್ಲಿ ಸಾಗಿದ್ದಾರೆ. ಮೇಲಾಗಿ ಹೊತ್ತು ಮುಳುಗುವ ಸಮಯ, ಕತ್ತಲಾಗುವ ಹೊತ್ತು ಜನರ ಸುಳಿವಂತೂ ಕೇಳಬಾರದು. ಅಷ್ಟರಲ್ಲಿ ಗುಡ್ಡದ ಒಂದು ಬದಿಯಿಂದ ಹುಲಿರಾಯನ ಘನಘೋರ ಗಂಭೀರ ಘರ್ಜನೆ ಕೇಳಿಬಂತು. ಆದರೂ ಲಕ್ಷ್ಯಗೊಡದೆ ಗುಡ್ಡದ ಪಕ್ಕದ ಸೀಳು ದಾರಿಯಲ್ಲಿ ಕುದುರೆಯನ್ನು ನಡೆಸಿಕೊಂಡು ಶಿವಲಿಂಗಯ್ಯನನ್ನು ಬೆನ್ನಿಗೆ ಹತ್ತಿ ಕೂಡ್ರಿಸಿಕೊಂಡು ಸಾಗಿರಲು ಹುಲಿರಾಯನ ಆರ್ಭಟ ಮತ್ತಷ್ಟು ಸಮೀಪವಾಯಿತು. ಮೌನ ಗಂಭೀರ ಸ್ವರೂಪದ ಆ ಅಡವಿಯ ಗುಡ್ಡದ ಮಾರ್ಗದಲ್ಲಿ ಪ್ರತಿಧ್ವನಿಗಳು ಅಲೆ ಅಲೆಯಾಗಿ ಬಂದು ಬಾಲ ಶಿವಲಿಂಗಯ್ಯನ ಕರ್ಣ ರಂಧ್ರ ಸೇರುತ್ತಿವೆ. ಭಯ ಆವರಿಸಿದ ಶಿವಲಿಂಗಯ್ಯ ಅಪ್ಪನವರನ್ನು ಮತ್ತಷ್ಟು ಗಟ್ಟಿಯಾಗಿ ಅಪ್ಪಿಕೊಂಡು ನಡುಗುತ್ತ ಕುಳಿತಿರಲು ಹುಲಿರಾಯನು, ಆ ಅಡವಿರಾಜಾ ಕೆಂಗಣ್ಣ ದೃಷ್ಟಿಯಿಂದ ಕೆಂಡದುಂಡಿಯನ್ನುಗುಳುತ್ತ ಎದುರಾಗಿ ಬಂದು ನಿಂತು ನೋಡುತ್ತಾನೆ. ಹಸಿದ ಒಡಲಿಗೆ

ಮೃಷ್ಟಾನ್ನ ಭೋಜನವಾಗಿ ದೊರೆತ ಒಂದು ಕುದುರೆ, ಇಬ್ಬರು ತರುಣ ಮಾನವ ಜೀವಿಗಳು. ಆಗ ಹುಲಿಯು ಆ ರುದ್ರ ಭೀಕರ ಮುಖಕಂಡ ಶಿವಲಿಂಗಯ್ಯ ಮಹಾಂತದೇವರನ್ನು ಅಪ್ಪಿಕೊಂಡು ಗದಗದ ನಡುಗುತ್ತ ಚಿಟ್ಟನೇ ಚೀರಿಕೊಂಡು, ಅಂಜಿ ಅಳುವವನಾಗಿದ್ದಾನೆ. ಆದರೆ ಮಹಾಂತ ದೇವರು ತಮಗಿದ್ದ ಯೋಗಸಾಧನೆಯ ಬಲದಿಂದ ಲಿಂಗಪೂಜಾ ಬಲ ವಿಶೇಷದಿಂದ ಧೈರ್ಯಗೊಂಡವರಾಗಿ ಶಿವಲಿಂಗಯ್ಯನನ್ನು ಸಂತೈಸುತ್ತ ಹೆದರಬೇಡಯ್ಯಾ ! ಕೇಡು ಯಾವದು ನಮ್ಮನ್ನೇನು ಮಾಡದು, ಭಯ ಬೇಡ ಭಯಬೇಡ ತಾಳಯ್ಯೆ ಎಂದು ಸಮಾಧಾನಪಡಿಸುತ್ತಿದ್ದಾರೆ. ಆಗ ಹುಲಿಯು ಬರುವಾಗ ತಂದ ಕ್ರೌರ್ಯಗುಣ ದ್ವಿಗುಣಿತವಾಗುವ ಬದಲು ಬರುಬರುತ್ತ ಅಕಳಿಸುತ್ತ ಸೌಮ್ಯವಾಗಿ ನಿಂತಿತು. ಮಹಾಂತದೇವರ ತಪೋಶಕ್ತಿಯ ಮುಂದೆ ಮೂಕವಾಗಿ ವೈಮಣಿಸಿ, ತಲೆ ಬಾಗಿಸಿ, ಕ್ಷಣ ಕ್ಷಣಕ್ಕೂ ತಮ್ಮೆದುರು ಈ ರೀತಿ ಕ್ರೂರಮೃಗವೆನಿಸಿ ಬಂದದ್ದು ತಪ್ಪಾತು ಎಂದು ಕ್ಷಮೆಯಾಚಿಸುವಂತೆ ನಿಂತು, ಬಳಿಕ ಸೌಮ್ಯ ಹೆಜ್ಜೆಯಿಂದ ಸಾಗಿ ಮರೆಯಾಗಿ ಹೋಯಿತಂತೆ. ಆಗ ಶಿವಲಿಂಗಯ್ಯನು ಹೋದ ಜೀವ ಮರಳಿ ಪಡೆದನಂತೆ. ಸಮಾಧಾನದ ಉಸಿರುಬಿಟ್ಟು ಮೌನಿಯಾಗಿ ಹುಲಿರಾಯ ಮರೆಯಾದರೂ ಮಹಾಂತದೇವರನ್ನು ಇನ್ನೂ ಹಾಗೆ ಅಪ್ಪಿ ಕೊಂಡು ನಡುಗುತ್ತಿದ್ದನಂತೆ. ಅವನನ್ನು ಕಂಡು ಅವನ ಸ್ಥಿತಿ ತಿಳಿದು ಅಪ್ಪನವರು ನಸುನಕ್ಕು ಸಮಾಧಾನ ಹೇಳುತ್ತ ಕುದುರೆಯನ್ನು ಮುಂದೋಡಿಸಿ ಕೊಂಡು ಹೋಗಿ ಮುದಕವಿಯನ್ನು ಸೇರಿದವರಾಗಿದ್ದಾರೆ. ಅಪ್ಪನವರ ಸೇವಾ ಕಾರ್ಯದಲ್ಲಿದ್ದ ಶಿವಲಿಂಗಯ್ಯನು (೧೯೬೮ ರಲ್ಲಿ) ಮುದುಕನಾಗಿ ಇನ್ನೂ ಇದ್ದಾನೆ. ಈ ಸತ್ಯ ಘಟನೆಯನ್ನು ಚಾಚೂ ತಪ್ಪದೇ ಹೇಳುತ್ತಿದ್ದ ನೆಂದು ಧಾರಾಳವಾಗಿ ಹೇಳಬಹುದು. ಈಗ ಮಹಾಂತದೇವರು ಹುಟ್ಟೂರ ಹಿರಿಯ ಮಠದ ಆಸ್ತಿ ಸಂಪತ್ತನ್ನು ಸರಿಕರಿಗೆ ಬಿಟ್ಟುಬಂದು ಮುದಕವಿಯಲ್ಲಿ ಉಳಿದುಕೊಂಡಿರುವದು ಗೊತ್ತಾದ ವಿಷಯವೇ ಸರಿ.

ಮುದಕವಿಗೆ ಬಂದ ಬಳಿಕ ಮುದೇನೂರು, ಸಾಲಪೂರು, ಬಟಕುರಕಿ ಹಾಗೂ ಸುತ್ತಲಿನ ಹಲವಾರು ಗ್ರಾಮಾಧಿಕಾರಿಗಳು ಹಾಗೂ ಗ್ರಾಮದ

ಪ್ರಮುಖ ಭಕ್ತರಲ್ಲೊಬ್ಬರಾದ ಶಿವಮ್ಮಾಪುರದ ಗೌಡರು ಮತ್ತು ಇನ್ನಿತರ ಭಕ್ತ ವೃಂದವು ಸೇರಿ ಮಠದ ಅಧಿಕಾರವನ್ನು ಒತ್ತಾಯದಿಂದ ಒಪ್ಪಿಸಿ, ಅತ್ಯಂತ ಶ್ರದ್ಧಾ ಭಕ್ತಿಯಿಂದ ನಡೆದುಕೊಳ್ಳುವವರಾಗಿದ್ದಾರೆ. ಅನುಗ್ರಹ ಮಾಡುವ ಸಾಮರ್ಥ್ಯ ಉಳ್ಳವರೂ ಮಠಾಧಿಕಾರಿಗಳೂ ಆಗಿರುವ ಮಹಾಂತದೇವರಲ್ಲಿ ಯಾವ ತರದ ಲೌಕಿಕ ಆಸೆ ಆಮಿಷಗಳಿಗೆ ಸ್ಥಳವಿರಲಿಲ್ಲ. ಚಿಕ್ಕವರಾಗಿದ್ದಂದಿನಿಂದಲೂ ವೈರಾಗ್ಯದ ಒಲವು, ಅಲೌಕಿಕ ತೇಜಸ್ಸು ಬ್ರಹ್ಮಚರ್ಯ ವ್ರತ ಪಾಲನೆಯ ಯಶಸ್ಸು ಸಂಪೂರ್ಣ ಇವರ ಸೊತ್ತಾಗಿದ್ದವೆಂದೆ ಹೇಳಬಹುದು.

ಆದರೆ ಮಹಾಂತದೇವರ ಮನದಾಸೆ ಮತ್ತೊಂದು ದಿಕ್ಕಿನತ್ತ ಹರಿಯ ಹತ್ತಿತು. ಆದರೂ ಭಕ್ತರ ಒತ್ತಾಯ ಅಪೇಕ್ಷೆಗಳಿಗೆ ಒಳಗಾದ ಅಪ್ಪನವರು ಸ್ವಲ್ಪಕಾಲ ಮುದಕವಿಯಲ್ಲಿ ಉಳಿದುಕೊಂಡಿದ್ದರು. ಅವರ ಇಚ್ಛೆಮಾತ್ರ ಹೆಚ್ಚಿನ ಜ್ಞಾನ ಸಂಪಾದನೆಗಾಗಿ ತವಕಪಡಹತ್ತಿತು. ಸಂಸ್ಕೃತ ಅಭ್ಯಾಸ ಮಾಡುವ ಆಸೆ ಅಂಕುರಿಸಿತು. ಆದರೆ ಮುದಕವಿ, ಮುದೇನೂರುಗಳಂಥ ಸಣ್ಣ ಸಣ್ಣ ಹಳ್ಳಿಗಳಲ್ಲಿ ಅದು ಹೇಗೆ ಸಾಧ್ಯ? ಅಂತೇ ಹುಡುಕಹತ್ತಿದರು ತಮ್ಮ ಮನದಾಸೆ ಪೂರ್ಣಗೊಳ್ಳುವ ಉತ್ಕೃಷ್ಟ ಸ್ಥಾನವನ್ನು. ಶಿವನು ಇವರ ಆಸೆಗೆ ಯಶನೀಡುವ ಉದ್ದೇಶದಿಂದ ಇವರನ್ನು ಅರಭಾವಿ ಶ್ರೀ ದುರದುಂಡೇಶ್ವರ ಮಠದತ್ತ ಹೊರಳಿಸಿ, ಮುದಕವಿಯ ಋಣ ತೀರಿಸಿದನು. ಆದರೂ ಭಕ್ತರ ಬಲತ್ಕಾರದಲ್ಲಿ ವರ್ಷೊಪ್ಪತ್ತು ಮುದಕವಿಯಲ್ಲಿ ಉಳಿದು ತಮ್ಮ ಮನದಾಸೆಯನ್ನು ಎಲ್ಲರಿಗೂ ತಿಳಿಸಿ, ತರತರದ ಹಿತವಾದ ಬೋಧೆ ಮಾಡಿ ಒಪ್ಪಿಸಿ ತಮ್ಮ ಒಲವಿನತ್ತ ಸಾಗುವವರಾಗಿದ್ದರು. ಶಿವನ ಕರುಣೆಯಿಂದ ಶ್ರೀ ದುರದುಂಡೇಶ್ವರನ ಕೃಪಾಛತ್ರದ ನೆರಳು, ಅರಭಾವಿಯ ಪುಣ್ಯಾರಣ್ಯದ ಹಿರಿಯ ಪರಂಪರೆಯ ಸ್ವಾಮಿಗಳಾದ ಮಹಿಮಾಶಾಲಿಗಳೆನಿಸಿದ ಶಿವಲಿಂಗಸ್ವಾಮಿಗಳ ಆಶ್ರಯವನ್ನು ಕುರಿತು ಹೊರಟರು.



# ೧೦ ನೇ ಅಧ್ಯಾಯ

## ಅಪ್ಪನವರು ಅರಭಾವಿ ಮಠಕ್ಕೆ ಆಗಮಿಸಿದ್ದು

ಮುದಕವಿಯಿಂದ ಮಹಾಂತದೇವರು ಅರಭಾವಿ ಮಠಕ್ಕೆ ಬಂದು ಮಠದ ಮಹಾಸ್ವಾಮಿಗಳಾದ ಶಿವಲಿಂಗಸ್ವಾಮಿಗಳಲ್ಲಿ ತಮ್ಮ ಮನದಾಸೆಯನ್ನು ಅರಿಕೆಮಾಡಿಕೊಂಡರು. ತಮಗಿರುವ ಸಂಸ್ಕೃತ ಕಲಿಯಬೇಕೆಂಬ ಇಚ್ಛೆಯನ್ನು ತಿಳಿಸಿ ಸ್ವಾಮಿಗಳ ಅಪ್ಪಣೆಯ ಪ್ರಕಾರ ಸಂಸ್ಕೃತ ಪಾಠಶಾಲೆಯ ಪರಿಸರದ ನೆರಳಿನಲ್ಲಿ ವಿದ್ಯಾರ್ಜನೆ, ಲಿಂಗಾರ್ಚನೆ, ನಿಷ್ಠೆ, ಬ್ರಹ್ಮತೇಜಸ್ಸು ಪಡೆಯುವ ಉತ್ಕೃಷ್ಟ ಆಶೆಯನ್ನು ಪುನಃ ಪುನಃ ಅರಿಕೆ ಮಾಡಿಕೊಂಡರು.

ಆಗ ಶಿವಲಿಂಗಸ್ವಾಮಿಗಳಾದರೂ ಮಹಾಂತದೇವರ ಉತ್ಕೃಷ್ಟ ಆಶೆ ಆಕಾಂಕ್ಷೆಗಳಿಗೆ ಸೈ ಎನ್ನುತ್ತ ಆನಂದದಿಂದ ಆತ್ಮೀಯತೆಯಿಂದ ಒಪ್ಪಿಕೊಂಡರಲ್ಲದೇ ತಮ್ಮ ನೆರಳಿನೋಪಾದಿಯಲ್ಲಿ ಉಳಿಸಿಕೊಂಡರು. ಅಲ್ಲದೇ ಮಹಾಂತದೇವರಲ್ಲಿರುವ ಕ್ರಿಯಾಚಾರ ನಿಷ್ಠೆ ನೇಮಗಳಿಗೆ ಮಾರುಹೋದ ಸ್ವಾಮಿಗಳು ಮಠದ ಕಾರುಭಾರ ವಹಿಸಿಕೊಟ್ಟು ನಿಶ್ಚಿಂತೆಯಿಂದ ಇರಹತ್ತಿದರು.

ಗುರುಗಳ ಪ್ರತಿ ವಿಶ್ವಾಸಗಳಿಗೆ ಪಾತ್ರರಾದ ಮಹಾಂತದೇವರು ತಮ್ಮ ನಿಷ್ಠೆ, ನಿಗರ್ವದ ಬದುಕು, ನಿತ್ಯ ತತ್ವಭರಿತ ತಪಸ್ಸು, ಯೋಗಸಾಧನೆ, ಲಿಂಗಪೂಜಾವಿಧಾನಗಳ ಶಕ್ತಿ ಸಾಮರ್ಥ್ಯದಲ್ಲಿ ತಮ್ಮ ಕಾರ್ಯ ಕುಶಲತೆಯನ್ನು ಎಲ್ಲರೂ ಮೆಚ್ಚುವಂತೆ ಕಾರ್ಯತತ್ಪರರಾದರು. ಮೊದಲೇ ಪೂರ್ವಪರಂಪರೆಯ ದೊಡ್ಡಮಠ, ಅರಭಾವಿ ಶ್ರೀ ದುರದುಂಡೇಶ್ವರನ ಆ ಮಠವೆಂದರೆ ಜಾಗ್ರತಸ್ಥಳವೆಂದೂ ತಪಸ್ವಿಗಳ ನೆಲೆವೀಡು, ಪುಣ್ಯ ಚರಿತೆಯ ಪಾವನ ತಾಣವೆಂದೂ ಕರೆಯುತ್ತಿದ್ದರು. ಅರಭಾವಿಯ ಈ ಜಾಗ್ರತ ಮಠಕ್ಕೆ ಭಕ್ತವೃಂದದ ಹೆಚ್ಚಳವು ಅತಿಯಾಗಿದ್ದು ಅಮವಾಸ್ಯ ಪುಣ್ಯಪರ್ವ ದಿನಗಳಲ್ಲಿಯಂತೂ ಭಕ್ತಬಳಗವನ್ನು ನೋಡಬೇಕು. ಸಹಸ್ರಾರು ಭಕ್ತರು ತಮ್ಮ ಕಷ್ಟ ಪರಂಪರೆಯ ನಿವಾರಣೆಗಾಗಿ ಸಾಗಿ ಬರುವದುಂಟು. ಇಂತಹ ಸಮಯದಲ್ಲಿ ಮಹಾಂತದೇವರು ತಮ್ಮ ಕಾರ್ಯ ಕೌಶಲ್ಯದಿಂದ ಭಕ್ತರ ಮನವನ್ನು

ಸೆರೆಹಿಡಿದು ಅವರ ಕಷ್ಟ ಜೀವನದ ಸಮಸ್ಯೆಗೆ ಪರಿಹಾರ ಮಾರ್ಗ ತೋರಿಸುತ್ತ ಮಾನವನು ದೈವ ಭಕ್ತನಾಗಿ ನಡೆ, ನುಡಿ, ಆಚಾರ ವಿಚಾರ ಕ್ರಿಯಾಶೀಲ ಸಂಪನ್ನರಾಗಿ ಬಾಳುವ ಬೋಧೆ ಮಾಡುತ್ತಿದ್ದರು. ಇದರಿಂದ ಭಕ್ತಬಳಗದಲ್ಲಿ ಮಹಾಂತದೇವರ ಬಗ್ಗೆ ಎಲ್ಲಿಲ್ಲದ ಅಭಿಮಾನ, ಶ್ರದ್ಧಾಭಕ್ತಿ ಹುಟ್ಟಿ ಅವರ ಹೇಳಿಕೆಯಂತೆ ನಡೆದುಕೊಳ್ಳುತ್ತಿದ್ದರು.

ಶಿವಲಿಂಗಸ್ವಾಮಿಗಳಂತೂ ಮಹಾಂತದೇವರ ಕಾರ್ಯ ತತ್ಪರತೆಗೆ ಮೆಚ್ಚಿಕೊಂಡು ಮಠದಲ್ಲಿ ಯಾವದೇ ಕಾರ್ಯ ಜರುಗಿದರೂ ಇವರೇ ಮುಂದಾಗಬೇಕೆನ್ನುವಂತಾಯಿತು. ಮಠದ ಸಂಪೂರ್ಣ ಜವಾಬ್ದಾರಿಯನ್ನೇ ವಹಿಸಿಕೊಟ್ಟರು. ಆರಭಾವಿ ಪುಣ್ಯಾರಣ್ಯವೆನಿಸಿದ ದುರದುಂಡೇಶ್ವರ ಮಠದ ಅಧಿಕಾರಿಗಳಾದ ಶಿವಲಿಂಗಸ್ವಾಮಿಗಳು ತಮ್ಮ ಮರಿದೇವರೆಂದು ಹಾರಗೊಪ್ಪದ ಶಿದ್ಧಲಿಂಗಸ್ವಾಮಿಗಳನ್ನು ತಮ್ಮ ಸೇವೆಯಲ್ಲಿರಿಸಿಕೊಂಡಿದ್ದರು. ಮೇಲಾಗಿ ಶಿವಲಿಂಗಸ್ವಾಮಿಗಳ ತರುವಾಯ ಶಿದ್ಧಲಿಂಗಸ್ವಾಮಿಗಳು ಉತ್ತರಾಧಿಕಾರಿಗಳೆಂದು ಈಗಾಗಲೇ ಠೀವರ್ಮಾನಿಸಿದ್ದರು.

ಈಗ ಮಹಾಂತದೇವರು ಸಿದ್ಧಲಿಂಗಸ್ವಾಮಿಗಳ ಸೇವಾ ಭಾಗ್ಯವನ್ನು ಪಡೆದುಕೊಂಡು ಮನಮುಟ್ಟಿ ಶ್ರದ್ಧೆವಹಿಸಿ ಸೇವೆ ಗೈಯಲು ಸಿದ್ಧಲಿಂಗ ಸ್ವಾಮಿಗಳಿಗಳಿಗೂ ಬಲು ಮೆಚ್ಚಿನವರಾದರು. ಅಂತೂ ಮಹಾಂತದೇವರ ಸ್ವಭಾವಕ್ಕೆ ಈರ್ವರೂ ಸ್ವಾಮಿಗಳು ಸುಪ್ರಸನ್ನರಾಗಿದ್ದರು.

ಶ್ರೀ ದುರದುಂಡೀಶನ ಕೃಪಾವಲ್ಲರಿಯು ಕುಸುಮ ಪರಿಮಳ ತುಂಬಿ ಪರಿಶೋಭಿಸುವದಾಯಿತು. ಲಿಂಗಾನಂದದಲ್ಲಿ, ಶಿವಯೋಗ ಸಾಧನೆ, ಮಠದ ಮಹತ್ವಪೂರ್ಣ ಕಾರ್ಯಕ್ಷೇತ್ರದಲ್ಲಿ ತಮ್ಮ ದುಡಿಮೆ ಇವುಗಳ ಹೊರತು ಇಲ್ಲ ಸಲ್ಲದ ಉಸಾಬರಿಯನ್ನು ಅರಿಯದೇ ಎಲ್ಲರ ನೆಚ್ಚಿನ ಹೆಚ್ಚಿನ ಮಹಾ ಸಾಧಕರೆನಿಸಿ ಬಾಳಹತ್ತಿದರು. ದಿನ ದಿನಕ್ಕೂ ಹೊಸ ಕಾರ್ಯಗಳು ರೂಪಗೊಳ್ಳಹತ್ತಿದವು. ಧರ್ಮ ಪ್ರಸಾರಕಾರ್ಯ ವೀರಶೈವ ಧರ್ಮದ ಮಹತ್ವ ತಿಳಿಯಲೆಂದು ಅನುದಿನವು ಪವಾಡ ಪುರುಷರ ಚರಿತ್ರೆ ಕೀರ್ತನ ರೂಪದಲ್ಲಿ ಪುರಾಣ ರೂಪದಲ್ಲಿ ಪ್ರವಚನ ರೂಪದಲ್ಲಿ ಎಡಬಿಡದೇ ಸಾಗಹತ್ತಿದವು.

ಮಠದ ಉನ್ನತಿಗಾಗಿ ಶಿವಲಿಂಗಸ್ವಾಮಿಗಳಿಗೂ ಸಿದ್ಧಲಿಂಗಸ್ವಾಮಿಗಳಿಗೂ ಎಡಗೈ ಬಲಗೈಯಾಗಿ ಸ್ವಾಮಿಗಳೀರ್ವರ ಉತ್ತರೋತ್ತರ ಕಲ್ಯಾಣ ಕಾರ್ಯಕ್ಕಾಗಿ ಬೇಗು ಬೆಳಗು ದುಡಿದು ಗುರುಸೇವಾ ಕಾರ್ಯವನ್ನು ತನುಮನಗಳಿಂದ ಪೂರೈಸುತ್ತಿದ್ದರು.



## ೧೧ ನೇ ಅಧ್ಯಾಯ

### ಅರಭಾವಿ ಪುಣ್ಯಾರಣ್ಯ ಮಠದ ಸ್ಥಾಪನೆ

ಶ್ರೀ ಆದಿ ದುರದುಂಡೇಶ್ವರನ ಸನ್ನಿಧಾನವೆನಿಸಿದ ಅರಭಾವಿಯ ಮಠದ ಉನ್ನತಿಯನ್ನು ಬಹುಭಾಗ ವರ್ಣಿಸುವಂತಹದು. ದುರದುಂಡೇಶ ಸ್ವಾಮಿಗಳಿಂದ ನಿರ್ಮಲವಾದ ಈ ಮಠದಲ್ಲಿ ಅದೆಷ್ಟು ಸ್ವಾಮಿಗಳು, ಯತಿಪುಂಗವರು, ಜಂಗಮ ಮೂರ್ತಿಗಳು ಕೀರ್ತಿಶೇಷರಾಗಿ ಬಾಳಿ ವೀರಶೈವ ಧರ್ಮ ಜಾಗೃತಿಯನ್ನುಂಟು ಮಾಡಿರುವರೋ ಬಲ್ಲವರಾರು.

ನನಗೆ ತಿಳಿದ ಮಟ್ಟಿಗೆ ವಿವರಿಸುವದೇನೆಂದರೆ ಶಿವಲಿಂಗಸ್ವಾಮಿಗಳು ಅವರ ತರುವಾಯ ಸಿದ್ಧಲಿಂಗಸ್ವಾಮಿಗಳು ಮುಂಚಿರುವ ಮಹಾಂತಸ್ವಾಮಿಗಳು ನಂತರ ಶಿವಾನಂದ ಸ್ವಾಮಿಗಳು.

ಶ್ರೀ ದುರದುಂಡೇಶ್ವರ ಸ್ವಾಮಿಗಳಿಂದ ಸ್ಥಾಪಿತವಾದ ಅರಭಾವಿ ಮಠವು ಅರವತ್ತು ಅಂಕಣಗಳ ಭವ್ಯವಾದ ಪಠಾಂಗಣದೊಡನೆ ಸುತ್ತಲು ಕೋಟೆಯ ಗೋಡೆಯನ್ನು ಹೋಲುವಂತೆ ಭವ್ಯವಾಗಿಯೂ, ಅಂದವಾಗಿಯೂ, ಬಲು ಚಂದವಾಗಿಯೂ ನಿರ್ಮಾಣವಾಗಿರುವದು. ಇಡಿಗಲ್ಲು ಹಾಸು ಬಂಡೆಗಳಿಂದ ಭದ್ರವಾದ ಬುನಾದಿ ಹಾಕಿ ಕಟ್ಟಿದ ಮಠದ ವಿಶಾಲ ವೈಭವ ವರ್ಣಿಸುವಂತಹುದು. ಅಲ್ಲದೇ ಮಠದ ಉನ್ನತ ಮಟ್ಟವನ್ನು ನೋಡಿದರೆ ಅದೆಷ್ಟು ವೈಭವದಲ್ಲಿ ಬಾಳಿರಬೇಕೆಂದು ಆಶ್ಚರಿಯಾಗುವದು. ಮಧ್ಯಭಾಗದಲ್ಲಿ ಕರ್ತೃಗದ್ದಿಗೆ, ಪಠಾಂಗಣದ ಸುತ್ತಲೂ ಕೋಣೆಗಳ ನಿರ್ಮಾಣ, ದನದ ಕೊಠಡಿ, ಅಶ್ವಗಳ ಲಾಯ, ಹಿಂದಿನ ಒಂದು ಬದಿಯಲ್ಲಿ

ಹೂಬನ, ಬೆಲ್ವ, ಬನ್ನಿಯ ಮರಗಳ ಸಾಲು ಪೂಜಾ ಕಾರ್ಯಗಳ ಅನಕೂಲತೆಯನ್ನು ಒದಗಿಸಲು ವ್ಯವಸ್ಥೆಯಾಗಿದೆ. ಹಾಗೂ ನಿತ್ಯ ದಾಸೋಹ ಧರ್ಮದಂತೆ ಬರುಹೋಗುವ ಭಕ್ತರಿಗೆ, ಅತಿಥಿಗಳಾಗಿ ಬಂದವರಿಗೆ, ಅನಾಥರೆನಿಸಿ ಬಂದವರಿಗೆ ಅನ್ನಪ್ರಸಾದ ಒದಗಿಸುವ ಪರಿಪಾಠವನ್ನು ಯಥಾರೀತಿ ಸಾಂಗಗೊಳಿಸಿದ್ದಾರೆ. ಮೇಲಾಗಿ ಮಹಾನ್ ತಪಸ್ವಿಗಳಿಂದ ನಿರ್ಮಿತವಾದ ಈ ಮಠವು ಜಾಗ್ರತಾವಸ್ಥೆಯಲ್ಲಿದ್ದು ತನ್ನ ಮಹಿಮೆ, ಘನತೆ, ಗೌರವಗಳನ್ನು ಉಳಿಸಿಕೊಂಡಿದೆ. ಪೂಜಾ ಮಂದಿರದಲ್ಲಿ ಯಾವಾಗಲೂ ಪೂರ್ವಾಚಾರ ಪದ್ಧತಿಯಂತೆ ಭಸ್ಮ, ಗಂಧ, ಪತ್ರಿ, ಪುಷ್ಪಾದಿಗಳ ಸಂಗ್ರಹವಿರುತ್ತದೆ. ಇಂತಹ ಭವ್ಯವಾದ, ಸುಂದರವಾದ ಮಠವು ಪೂರ್ವಜರಿಂದ ಪ್ರಕಾಶಗೊಂಡು ಶೋಭಿಸುವಂತೆ ಅದರ ಜೀರ್ಣೋದ್ಧಾರ ಕಾರ್ಯಗೈದು ಮೂಲ ಸ್ಥಿತಿಯನ್ನೇ ಮತ್ತಷ್ಟು ಭವ್ಯಗೊಳಿಸಿದ ಸತ್ಯಪ್ಪ ಎಂಬ ವಡ್ಡರ ನಾಯಕ ಮಹಾಶಯನ ಪರಿಚಯವನ್ನಷ್ಟು ತಮ್ಮೆಲ್ಲರಿಗೆ ಮಾಡಿಸುವದು ಸೂಕ್ತವೆಂದೆನಿಸುತ್ತದೆ.

ಜಮಖಂಡಿ ತಾಲೂಕ ಪೈಕಿ ಹಳ್ಳಿ ಎನಿಸಿದ ಬಬಲಾದಿಯಲ್ಲಿಯು ಜಾಗ್ರತ ಮಠ ಉಂಟು. ಸದಾಶಿವಸ್ವಾಮಿಗಳು ಪ್ರಭಾವಿತರು, ಪವಾಡ ಪುರುಷರು ಎನಿಸಿದವರು. ಅವರು ತಮ್ಮ ಈ ಮಠವನ್ನು ಸತ್ಯಪ್ಪನಿಂದ ನಿರ್ಮಿಸಿದರೆಂದು ತಿಳಿದ ವಿಷಯ. ಮಠದ ಕಟ್ಟಡ ಪೂರ್ತಿಯಾದ ನಂತರ ಸತ್ಯಪ್ಪನು (ವಡ್ಡರ ನಾಯಕನು) ಸದಾಶಿವಸ್ವಾಮಿಗಳ ಸನ್ನಿಧಾನಕ್ಕೆ ಹೋಗಿ ಶ್ರದ್ಧಾ ಭಕ್ತಿಯಿಂದ ಕರಜೋಡಿಸಿ ನನ್ನ ಕಾರ್ಯವಂತೂ ಮುಗಿಯಿತು, ನನ್ನ ಬಾಳಿನ ಮುಂದಿನ ದಾರಿಗೆ ಹೋಗಲು ಅಪ್ಪಣೆ ಕೊಡಿ ಬುದ್ಧಿ ಅಂತಾ ಬೇಡಿಕೊಂಡನು. ಬಬಲಾದಿ ಮಠದ ಅಪ್ಪನವರು ವಡ್ಡಯ್ಯನಿಗೆ ಶುಭಾಶೀರ್ವಾದ ಮಾಡಿ ಅವನ ಭಕ್ತಿ ಕರ್ತವ್ಯನಿಷ್ಠೆಗೆ ಸಂತುಷ್ಟರಾದರು.

ಅಪ್ಪಣೆಯನ್ನು ಬಯಸಿದ ಸತ್ಯಪ್ಪನಿಗೆ ಸದಾಶಿವಸ್ವಾಮಿಗಳು ಅಂದರೆ ಬಬಲಾದಿ ಮಠದ ಸ್ವಾಮಿಗಳು ಅಯ್ಯಾ, ಕಲ್ಲೊಡೆಯುವ ಕರ್ಮಚಾರಿಯೇ ಕೇಳು, ನೀನು ಇಲ್ಲಿಂದ ಹೊರಟವನು ಹೊತ್ತು ಮುಳುಗಿದ ಸ್ಥಳದಲ್ಲಿ ಬಿಡಾರ ಹೂಡುವವನಾಗು. ಇದು ಶಿವನ ವರವೆಂದೆ ಭಾವಿಸು, ನೀನು ನಿಂತ ಸ್ಥಳದಲ್ಲಿ ಖಂಡಿತವಾಗಿ ನಿನ್ನ ಅಭ್ಯುದಯವಾಗುವದು. ಅಲ್ಲದೇ, ನಿನ್ನ ಜೀವನವು

ಕರ್ನಾಟಕ ಇತಿಹಾಸದಲ್ಲಿ ಸಮಾವೇಶಗೊಳ್ಳುವದು. ಮೇಲಾಗಿ ನೀನು ನಿಲ್ಲುವ ನೆಲೆಯಾಗುವ ಪುಣ್ಯಭೂಮಿಯು ತಪಸ್ವಿಗಳ ಬೀಡು, ತಪೋನಿಧಿಗಳ ಗೂಡು, ಲಿಂಗನಿಷ್ಠೆ, ಶಿವಯೋಗ ಸಾಮರ್ಥ್ಯ, ಬ್ರಹ್ಮಚರ್ಯ ಸಂಪತ್ತಿನಿಂದ ವಿರಾಜಿಸುವ ವೈರಾಗ್ಯ ನಿಧಿಗಳ ಸಂಗಮ ಆ ಸುಕ್ಷೇತ್ರ. ಅಂತಹ ತಾಪಸಿಗಳ ನೆರಳಿನಲ್ಲಿ ಬದುಕಿನ ಗಳಿಗೆಯನ್ನು ಕಳೆಯುವವನಾಗು, ಶಿವನ ತೇಜಸ್ಸಿನಿಂದ ಶಿವಯೋಗಿ ಸಾಮ್ರಾಟರೆನಿಸಿದ ಅರಭಾವಿ ಶ್ರೀ ದುರದುಂಡೇಶ್ವರ ಮಠದ ಸ್ವಾಮಿಗಳ ದರ್ಶನ ಹೊಂದಿ ಪುನೀತನಾಗು, ಚರಿತಾರ್ಥನಾಗು, ಜಾತಿ ಮತ ಪಂಥಗಳ ಮೇಲು ಕೀಳು ಎಂಬ ತುಚ್ಛ ಭಾವನೆಗೆ ಸ್ಥಳವಿಲ್ಲದ ಅರಭಾವಿ ಮಠದ ಸ್ವಾಮಿಗಳ ಪಾವನ ಪುಣ್ಯಭೂಮಿ ನಿನ್ನ ಬದುಕಿನ ಸಂತಸ ಜೀವನಕ್ಕೆ ಆಸರಾಗುವದೆಂಬುದನ್ನು ಮರೆಯದಲೇ ಹೊರಡುವವನಾಗು ಎಂದು ಆಶೀರ್ವಾದ ಮಾಡಿದ್ದಲ್ಲದೆ, ಮತ್ತು ಹೇಳಿದ್ದಾರೆ—ಅಯ್ಯಾ ಕಲ್ಲೊಡೆಯುವ ಕಾಯಕದ ಕರ್ಮಚಾರಿ ಎನಿಸಿದ ವಡ್ಡನೇ ಕೇಳು.

ಶ್ರೀ ದುರದುಂಡೀಶ್ವರನ ಸನ್ನಿಧಾನದಲ್ಲಿ ಉಳಿದ ಬಳಿಕ ನಿನ್ನೀ ಜೀವನದ ಇತಿಹಾಸವೇ ಬದಲಾಗುವದು. ಧನ, ಕನಕ, ಪುತ್ರ ಪೌತ್ರಾದಿ, ಸಂಪತ್ತು ಅದು ಹೇಗೋ ದೊರೆಯುವವು. ದೊರೆತು ಬಂದ ಸಂಪತ್ತನ್ನು ಉಳಿಸಿ ಕೊಳ್ಳಬೇಕಾದರೆ ಈಗ ನಾವು ಹೇಳುತ್ತಿರುವ ತತ್ವಪಾಲನೆಯಾಗಬೇಕು. ನಿನ್ನಿಂದಾಗಲಿ, ನಿನ್ನ ಕುಲಬಾಂಧವರಿಂದಾಗಲಿ, ಬಂಧು ವರ್ಗದವರಿಂದಾಗಲಿ, ಪುತ್ರ ಪೌತ್ರಾದಿಗಳಿಂದಾಗಲಿ ತತ್ವಪಾಲನೆಗೆ ಚ್ಯುತಿಯು ಬಾರದಿರಲಿ.ಅಂದರೆ ಧರ್ಮಕಾರ್ಯವನ್ನು ಮರೆಯದವರು, ಕರ್ಮಕ್ಕೆ ಅಂಜಿ ಹಿಂಜರಿಯುವವರು, ನ್ಯಾಯ ನೀತಿಗಳನ್ನು ಅಲ್ಲಗಳೆಯದವರು, ಆಗಿ ಬಾಳಿರುವವರೆಗೆ ಯಾವ ಭಯವು ಇಲ್ಲ, ಐಶ್ವರ್ಯಕ್ಕೆ ಕುಂದಿಲ್ಲ. ಒಂದು ಸಮಯ ನೀನಾಗಲಿ ನಿನ್ನ ಮುಂದಿನ ಪೀಳಿಗೆಯಾಗಲಿ ಎಂದು ಕರ್ಮಕಾಂಡದಲ್ಲಿ ಧುಮುಕುವಿರೋ, ಅನ್ಯಾಯ ಅಧರ್ಮ ಅತ್ಯಾಚಾರ ಅನಾಚಾರಗಳಿಗೆ ಅಂಜದೇ ಆಚಾರ ವಿಚಾರಗಳನ್ನು ಮರೆತು, ಧರ್ಮನಿಷ್ಠೆಯನ್ನು ತೊರೆದು ಪರಪೀಡಕರಾಗಿ ಹಿಂಸೆಗೆ ಅಂಜದೇ ಅಳುಕದೆ ನಿಮ್ಮ ಕಾರ್ಯಧರ್ಮವನ್ನು ಮರೆತು ಮದಾಂಧ ರಾಗಿ ಸಿರಿ ಸೊಬಗಿನಲ್ಲಿ ಮೆರೆಯುವವರಾಗುವಿರೋ ಅಂದೇ ನಿಮ್ಮ ಮನೆತನದ ಅವಸಾನ ಖಂಡಿತವೆಂದು ತಿಳಿ. ನೆನಪಿರಲಿ, ಹೋಗಿ ಬಾ ಸದಾಶಿವನ

ಕರುಣೆಯಿಂದ ಶುಭವಾಗಲಿ ಎಂದು ಆಶೀರ್ವಾದ ಮಾಡಿ ಬಬಲಾದಿಯಿಂದ ಕಳಿಸುವವರಾಗಿದ್ದಾರೆ ನಿಸ್ಸೀಮ ಭಕ್ತ ಎನಿಸಿದ ಆ ವಡ್ಡರ ನಾಯಕ ಸತ್ಯಪ್ಪನನ್ನು.

ಈ ವಡ್ಡಯ್ಯನಾದರೂ ಸ್ವಾಮಿಗಳ ಅಪ್ಪಣೆಯ ಮೇರೆಗೆ ತನ್ನ ಚಾಳಿ ಗಾಸರವಾದ ಸಾಹಿತ್ಯ ಸರಂಜಾಮುಗಳನ್ನು ಬಂಡಿಯಲ್ಲಿ ತುಂಬಿಕೊಂಡು ಬಬಲಾದಿಯನ್ನು ಬಿಟ್ಟು ಹೊತ್ತು ಮುಳುಗುತ್ತಿರುವ ಸಮಯಕ್ಕೆ ಸರಿಯಾಗಿ ಅರಭಾವಿ ಪುಣ್ಯಾರಣ್ಯದ ಸಮೀಪ ಬಂದವನಾಗಿದ್ದಾನೆ, ಅರಭಾವಿ ಸ್ವಾಮಿಗಳ ಮಠದ ಸಮೀಪ ಈತನ ಬಂಡಿ ಬರುವದಕ್ಕೂ ಸೂರ್ಯದೇವನು ಮುಳುಗುವ ದಕ್ಕೂ ಸರಿ ಹೋಯಿತು. ಅದೇ ಸಮಯವನ್ನು ಎದುರು ನೋಡುತ್ತ ಬಂಡಿಯನ್ನು ಹೊಡೆದುಕೊಂಡು ಬಂದ ಸತ್ಯಪ್ಪನಿಗೆ ಬಬಲಾದಿ ಸ್ವಾಮಿಗಳ ಹೇಳಿಕೆ ನೆನಪಾಗಿ ತಕ್ಷಣ ಬಂಡಿ ನಿಲ್ಲಿಸಿದ್ದಾನೆ.

ಸುಮ್ಮನೆ ಕುಳಿತರೆ ಮುಗಿಯಲಿಲ್ಲ ಸತ್ಯಪ್ಪನ ಕರ್ತವ್ಯ. ಸಂಸಾರದ ಬಂಧನದಲ್ಲಿ ಸಿಲುಕಿದ ಅವನೊಬ್ಬ ನಮ್ಮಂಥ ಪ್ರಪಂಚಿಕ. ಕಾರಣ ಹೆಂಡತಿ ಮಕ್ಕಳ ಹೊಟ್ಟೆಯ ಪಾಡಿಗೆ ದುಡಿಮೆಯ ಪ್ರಯತ್ನಕ್ಕಾಗಿ ವಿಚಾರ ತಲೆಯಲ್ಲಿ ಸುಳಿಯಹತ್ತಿದವು ಅದರೊಡನೆ ಬಬಲಾದಿ ಸ್ವಾಮಿ ಗಳ ಅಮರವಾಣಿ ಅಚ್ಚಳಿಯದೇ ನಿಚ್ಚಳವಾಗಿ ಎಚ್ಚರಿಸುತ್ತಿತ್ತು ಇದೇ ನಿನ್ನ ಉದ್ಧಾರದ ಪುಣ್ಯಭೂಮಿ ಎಂದು.

ಒಳದನಿಯ ಎಚ್ಚರದ ನುಡಿ ನೆನಪಿನ ನೆಲೆಯಾಗಿ ಪದೇ ಪದೇ ಎದುರು ಬರುವದಾಗಲು ಕೊನೆಗೊಂದು ನಿರ್ಧಾರಕ್ಕೆ ಬಂದು ಈ ಪುಣ್ಯ ಭೂಮಿಯೇ ನನ್ನ ಜೀವನದ ಹೆಗ್ಗುರುತಾಗಲೆಂದು ಅಲ್ಲಿಯೇ ನಿಲ್ಲುವವ ನಾದನು.

ಸುಮ್ಮನೇ ನಿಲ್ಲುವದರಿಂದ ಮುಗಿಯಲಿಲ್ಲ ಅವನ ಕರ್ತವ್ಯ ಬೆನ್ನಿಗೆ ಬಿದ್ದ ಹೆಂಡತಿ ಮಕ್ಕಳಿಗಾಗಿ ಇದ್ದಷ್ಟು ಸಾಮಾನುಗಳ ಭದ್ರತೆಗಾಗಿ ಹಾರಿ, ಗುದ್ದಲಿಗಳ ಸಹಾಯದಿಂದ ತಗ್ಗು ತೆಗೆದು ಗೂಟನೆಟ್ಟು (ಡೇರೆ) ಗುಡಿಸಲು ಕಟ್ಟುವ ಸಿದ್ಧತೆಯಿಂದ ತಗ್ಗು ತೆಗೆಯುವವನಾದನು. ತಗ್ಗು ತೆಗೆಯುತ್ತಿ

ರಲು ದ್ರವ್ಯತುಂಬಿದ ಹಂಡೆ ತಗ್ಗಿನ ತಳದಲ್ಲಿ ನಿಚ್ಚಳವಾಗಿ ಕಂಡದ್ದಲ್ಲದೇ ಹಾರಿಯು ಏಟು ಬಿದ್ದಾಗೊಮ್ಮೆ ಝುಣಲ್ ಎಂದು ಸಪ್ಪಳಮಾಡುವ ಹಂಡೆದ ಧ್ವನಿ ವಡ್ಡಯ್ಯನಿಗೆ ಮಾತ್ರ ನಿಚ್ಚಳವಾಗಿ ಕೇಳುವದಾಗಿದೆ. ಪುಣ್ಯಪುರುಷರ ತಪೋವಾಣಿಯಂತೆ ಒಡ್ಡಯ್ಯನಿಗಾಗಿ ಒಲಿದುಬಂದ ನಿಧಿ ಸಂಗ್ರಹವದು. ಕೇಳುವದೇನು ಯಾವ ತೊಂದರೆ ತ್ರಾಸು ಭಯವಿಲ್ಲದೇ ಸರಳವಾಗಿ ನಿಧಿ ಸಂಗ್ರಹದ ಹಂಡೆ ಒಡ್ಡಯ್ಯನ ವಶವಾಯಿತು.

ಮುಂದೆ ಒಡ್ಡಯ್ಯನಾದರೂ ಬಬಲಾದಿಸ್ವಾಮಿಗಳ ಅಪ್ಪಣೆಯು ಮೇರೆಗೆ ಇಷ್ಟೆಲ್ಲ ಸಂಪತ್ತು ದೊರೆತ ಮೇಲೆ ಮತ್ತೆಲ್ಲಿಗೆ ಹೋಗುತ್ತಾನೆ. ದೈವೀ ನಿರ್ಣಯದಂತೆ ಈಗ ವಾಡಿಕೆಯಲ್ಲಿರುವ ಪ್ರಕಾರ ಅರಭಾವಿ ಒಡ್ಡಯ್ಯನಾಗಿ ಉಳಿದುಕೊಂಡಿದ್ದಾನೆ.

ಆದರೆ ಸಂಪತ್ತು ಸಿಕ್ಕಿತೇನೋ ನಿಜ, ಸಿಕ್ಕ ಶಿರಿಸಂಪತ್ತನ್ನು ಉಳಿಸಿ ಕೊಳ್ಳಬೇಕಾದರೂ ಬಲವಾದ ಪುಣ್ಯಬೇಕು. ನಿಷ್ಠೆ ಕರ್ತವ್ಯ ಎಂಬ ತಪಸ್ಸುಬೇಕು. ನಿಧಿ ದೊರಕಿಸಿಕೊಟ್ಟ ದಾರಿ ಬಬಲಾದಿ ಅಪ್ಪನವರದಾದರೆ ಅದರ ಭದ್ರತೆ, ಉಳಿವು, ಅಳಿವು ನಮ್ಮ ಅರಭಾವಿ ತಪಸ್ವಿಗಳ ಪಾಲಿಗೆ ಇತ್ತೆಂದು ಧಾರಾಳವಾಗಿ ಹೇಳಬಹುದು. ಪುಣ್ಯಾತ್ಮ ಒಡ್ಡರ ಸತ್ಯೆಪ್ಪ ನಾದರೂ ಶ್ರೀ ದುರದುಂಡೇಶ್ವರ ಮಠದ ಸ್ವಾಮಿಗಳಲ್ಲಿ ಅತ್ಯಂತ ಭಕ್ತಿ ಯುಳ್ಳವನಾಗಿದ್ದನೆಂದು ಕೇಳಬಲ್ಲೆವು.

ಮೇಲಾಗಿ ಮಠದ ಬಗ್ಗೆ ಶ್ರದ್ಧಾಭಕ್ತಿ ಇದ್ದಕಾರಣ ಈ ಒಡ್ಡರ ನಾಯಕನು ಮಠದ ಉನ್ನತಿ, ಭವ್ಯತೆಯನ್ನು ಹೆಚ್ಚಿಸಲು ತನ್ನ ಕಲ್ಲೊಡೆ ಯುವ ಕಾಯಕವನ್ನು ಮರೆಯದೇ ಮಠದ ಕೆಲವು ಭಾಗಗಳನ್ನು ಕಟ್ಟಿದ್ದಲ್ಲದೇ ಕೆಳಗಿನ ಅರವತ್ತೂರು ಪಾವುಟಗೆಗಳನ್ನು, ಸುತ್ತಲೂ ಹೊರ ಗೋಡೆಯನ್ನು ನಿರ್ಮಿಸಿ ಭವ್ಯಗೊಳಿಸಿದನಂತೆ. ಅಲ್ಲಿಗೆ ಬಂದ ಭಕ್ತರಿಗಾಗಿ ಉಳಿದುಕೊಳ್ಳಲು ಛಾವಣಿಯನ್ನು ನಿರ್ಮಿಸಿ ಮಠಕ್ಕೆ ಇನ್ನಷ್ಟು ಕಳೆ ಬರುವಂತೆ ಮಾಡಿದ ಭಕ್ತಜನರಲ್ಲಿ ಈತನೂ ಒಬ್ಬನೆಂದು ಹೇಳಿಕೆಯುಂಟು

ಮುಂದೆ ಕೆಲಕಾಲದ ಬಳಿಕ ಒಡ್ಡರ ನಾಯಕನು ಕಾಲವಾಗಿ ಮನೆ ತನದ ಜವಾಬ್ದಾರಿ, ಕಾರಭಾರ, ಮಕ್ಕಳು ಮೊಮ್ಮಕ್ಕಳ ಕೈಗೆ ಬಂದ

ಬಳಿಕ ಕೇಳುವದೇನು ಬಬಲಾದಿಸ್ವಾಮಿಗಳ ಆಶೀರ್ವಾದಕ್ಕೆ ಪುಟಕೊಟ್ಟಂತೆ ಅರಭಾವಿ ಮಠದ ಸ್ವಾಮಿಗಳ ಕೃಪೆಯೊಂದು ಸರಿದು ಕೊಟ್ಟ್ಯಾಧೀಶ್ವರನ ಮನೆತನವೆನಿಸಿದ ಈ ಒಡ್ಡರ ಮನೆತನವಿಂದು ಅಳಿಗಾಲದ ಅವಸಾನದ ಪ್ರಸಂಗ ತಂದುಕೊಂಡಿತು. ಕಾರಣ ಮಕ್ಕಳೆನಿಸಿದ ಮೂಢರು ಧರ್ಮ, ನೀತಿ ಬಾಹಿರರಾಗಿ ಅನ್ಯಾಯ, ಅಧರ್ಮದಾಚರಣೆಯಲ್ಲಿ ಸಾಗಿ ತಮ್ಮ ಕರ್ತವ್ಯ ಕಾಯಕವೆನಿಸಿದ ಕಲ್ಲು ಒಡೆಯುವದು, ಕಟ್ಟಡ ಕಟ್ಟುವದು ಬಿಟ್ಟು ಹೇಯ ಕಾರ್ಯಭಾಗಿಗಳಾಗಿ ಹೆಣ್ಣು, ಹೆಂಡ, ಹೊನ್ನು ಇವುಗಳಲ್ಲಿ ಸೆರೆಯಾಗಿ ಸರ್ವನಾಶಕ್ಕೆ ದಾರಿ ಮಾಡಿಕೊಂಡರು. ಅನೀತಿ ಅನಾಚಾರವೇ ಅವರ ನಾಶಕ್ಕೆ ಕಾರಣವೆಂದು ಬಬಲಾದಿಸ್ವಾಮಿಗಳು ಮೊದಲೇ ಭವಿಷ್ಯ ನುಡಿದಿದ್ದಾರೆ. ಆದರೂ ಇನ್ನು ಅದೆಲ್ಲಿ ಸ್ವಲ್ಪ ಪುಣ್ಯ ಉಳಿದಿದೆಯೋ ಸಾಧಾರಣ ಮಟ್ಟದ ಸ್ಥಿತಿಯಲ್ಲಿ ಚರಿತ್ರಹೀನರಾಗಿ ಬಾಳುತ್ತಿದ್ದಾರೆ. ಈ ವಿಷಯದಿಂದ ಯಾರಿಗಾದರೂ ಜಾಗ್ರತಸ್ಥಾನಗಳ ಬಗ್ಗೆ ಭಯ ಭಕ್ತಿ ಹುಟ್ಟದಿರಲಿಕ್ಕಿಲ್ಲ.

ಒಡ್ಡರ ನಾಯಕ ಸತ್ಯಪ್ಪನ ತರುವಾಯ ಅವನ ಮಕ್ಕಳು, ಮೊಮ್ಮಕ್ಕಳು ಕಾಲಮಾನಕ್ಕೆ ತಕ್ಕಂತೆ ಬದಲಾಗಿ, ಭಕ್ತಿ ಭಾವಗಳು ನಶಿಸಿ, ಉಡಾಳರಾಗಿ ಉಪದ್ವ್ಯಾಪ ವ್ಯವಹಾರಗಳಲ್ಲಿ ತೊಡಗಿ ಹಿಂಸಾಜೀವಿಗಳಾಗಿ ತಮ್ಮ ಮೂಲ ಪುರುಷರ ಉತ್ಕೃಷ್ಟ ಇತಿಹಾಸದ ಶಕ್ತಿಯನ್ನೇ ಕಳೆದು ಕೊಂಡರು. ಅದೇನೇ ಆದರೂ ಅರಭಾವಿ ಶ್ರೀ ದುರದುಂಡೇಶ್ವರ ಮಠದ ಸ್ವಾಮಿಗಳಲ್ಲಿ ಒಡ್ಡರ ಮೂಲಪುರುಷನು ಮಾತ್ರ ಅನನ್ಯ ಭಕ್ತಿಯುಳ್ಳವನು, ನಿಷ್ಠೆಯಿಂದ ಸ್ವಾಮಿಕಾರ್ಯಕ್ಕಾಗಿ ದುಡಿದವನು ಎನ್ನುವ ಕಾರಣದಿಂದ ಒಡ್ಡರನಾಯಕನ ಚರಿತ್ರೆಯನ್ನು ಇಲ್ಲಿ ಚಿತ್ರಿಸಲಾಗಿದೆ.



# ೧೨ ನೇ ಅಧ್ಯಾಯ

## ಶ್ರೀ ಶಿವಲಿಂಗಸ್ವಾಮಿಗಳಿಂದ ಶ್ರೀ ಸಿದ್ಧಲಿಂಗಸ್ವಾಮಿಗಳಿಗೆ ಅರಭಾವಿ ಮಠದ ಅಧಿಕಾರ

ಅರಭಾವಿಯ ಮಠಕ್ಕೆ ಬಂದು ಕಾರ್ಯತತ್ಪರತೆಯಲ್ಲಿ ಹತ್ತೆಂಟು ವರ್ಷಗಳು ಗತಿಸಿದವು. ಗುರುಗಳೀರ್ವರ ಶಿಷ್ಯರಾಗಿ, ಸೇವಕರಾಗಿ, ಕಣ್ಮಣಿಗಳಾಗಿ, ಕ್ರಿಯಾಚಾರ ಕಾರ್ಯಕುಶಲತೆಯ ಪ್ರಭಾವಿತರಾಗಿ, ಲಿಂಗನಿಷ್ಠೆ ಯೋಗನಿಷ್ಠೆಯಲ್ಲಿ ಬಾಳಹತ್ತಿದರು ಅಪ್ಪನವರು.

ಇಂತಿರ್ಪ ಸಮಯದಲ್ಲಿ ಇನ್ನೂ ಇವರಿಗೆ ಹೆಚ್ಚಿನ ಜವಾಬ್ದಾರಿ ಬೀಳಲೆಂದೋ ಅಥವಾ ಶಿವಲಿಂಗಸ್ವಾಮಿಗಳೇ ಇಚ್ಛಾಸ್ವಪ್ರಸ್ಪತಿಯಲ್ಲಿ ಶಿವನ ಸನ್ನಿಧಾನವನ್ನು ಬಯಸಿದರೋ ಅಥವಾ ಶಿವಮಹಾದೇವನು ಇಚ್ಛೆಪಟ್ಟು ಶಿವಲಿಂಗಸ್ವಾಮಿಗಳನ್ನು ತನ್ನತ್ತ ಕರೆಯಿಸಿಕೊಳ್ಳಬಯಸಿದನೋ ಅಂತೂ ಶಿವಲಿಂಗಸ್ವಾಮಿಗಳು ತಾವು ಲಿಂಗೈಕ್ಯರಾಗುವ ಪೂರ್ವದಲ್ಲಿ ಮಹಾಂತ ದೇವರನ್ನು ಬರಮಾಡಿಕೊಂಡು ತಮ್ಮ ತರುವಾಯ ಉತ್ತರಾಧಿಕಾರಿಗಳಾಗ ಬೇಕಿದ್ದ, ಮರಿದೇವರೆನಿಸಿದ ಸಿದ್ಧಲಿಂಗಸ್ವಾಮಿಗಳ ಸಮಕ್ಷಮ ಮಠದ ಕೀರ್ತಿ, ಗೌರವಗಳನ್ನು ಕಾಯ್ದುಕೊಂಡು ಹೋಗುವಂತೆ ಉಪದೇಶಮಾಡಿ ಪೂರ್ಣ ಆಶೀರ್ವಾದವನ್ನು ನೀಡಿದರು.

ಸ್ವಾಮಿಗಳು ತಮ್ಮ ನಿರ್ಧಾರದಂತೆ ಸಿದ್ಧಲಿಂಗಸ್ವಾಮಿಗಳಿಗೆ ಜಂಗಮ ಸಂಸ್ಕಾರದೊಡನೆ ಮಠದ ಪೂರ್ಣ ಅಧಿಕಾರವನ್ನು ವಹಿಸಿಕೊಟ್ಟು ಪಟ್ಟಾಧಿಕಾರದೊಡನೆ ಸರ್ವ ಹಕ್ಕುಗಳನ್ನೂ ದಯಪಾಲಿಸಿದರು. ಅಧಿಕಾರ ಸ್ವೀಕಾರ ಸಮಯದಲ್ಲಿ ಮಹಾಂತದೇವರು ವ್ಯವಸ್ಥಾಪಕರಾಗಿ ಒಳ್ಳೇ ಆಸ್ತೆವಹಿಸಿ ಸಮಾರಂಭವನ್ನು ನೆರವೇರಿಸಿದರು. ಇದರಿಂದ ಸಿದ್ಧಲಿಂಗಸ್ವಾಮಿಗಳ ಹೆಚ್ಚಳವನ್ನು ಹೆಚ್ಚಿಸಿ ಅವರ ನೆಚ್ಚಿನವರಾದರು.

ಕಾರ್ಯ ಕುಶಲರಾದ ಮಹಾಂತದೇವರು ಮಠದ ಕಾರಭಾರವನ್ನು ಅಡ್ಡಿ ಆತಂಕಗಳು ಬಾರದಂತೆ ಕಾಪಾಡಿಕೊಂಡು ಬಂದರು. ಇವರ ದಕ್ಷ

ಆಡಳಿತೆಯಿಂದ ಮಠದ ಉನ್ನತಿ ಮತ್ತಷ್ಟು ಹೆಚ್ಚಿತು. ಅಲ್ಲದೇ ಪ್ರಭಾವಿತ ವಾಗಿ ಕಂಗೊಳಿಸುವದಾಯಿತು. ಭಕ್ತ ಬಳಗವಂತೂ ಅಂಕೆ ಸಂಖ್ಯೆಗೆ ನಿಲುಕದಷ್ಟು ಬೆಳೆಯುಹತ್ತಿತು. ಬರುಹೋಗುವ ಭಕ್ತವೃಂದವನ್ನು, ಮಠದ ಹಿತೈಷಿಗಳನ್ನು, ಅಧಿಕಾರ ಮಾರ್ಗವನ್ನು ಆಕರ್ಷಿಸಿ, ಪ್ರೀತಿ ವಿಶ್ವಾಸಗಳಿಂದ ಪ್ರೇಮಾದರಗಳಿಂದ ಬರಮಾಡಿಕೊಂಡು ಗೌರವದಿಂದ ಕಾಣುತ್ತಿದ್ದರಲ್ಲದೇ ಮಾನವ ಬಾಳಿನ ದಾತಿಯು ನಿಜಗುರಿಯನ್ನು ತಿಳಿಸುತ್ತ ಭಕ್ತೋದ್ಧಾರ ಕಾರ್ಯದಲ್ಲಿ ನಿರತರಾದಂತೆ ತಮಗಿರುವ ಮಠದ ಮೇಲ್ವಿಚಾರಣೆಯ ಜವಾಬ್ದಾರಿಯನ್ನು ನಿಷ್ಠೆಯಿಂದಲೂ, ನಿರ್ವಂಚನೆಯಿಂದಲೂ, ದಕ್ಷತೆ ಯಿಂದಲೂ ಕಾಪಾಡುವವರಾದರು ಪೂರ್ವ ಪರಂಪರೆಗೆ ಎಳ್ಳಷ್ಟೂ ಧಕ್ಕೆ ಬಾರದಂತೆ ಉಳಿಸಿಕೊಂಡು ಬಂದರು.



## ೧೩ ನೇ ಅಧ್ಯಾಯ

### ಮಹಾಂತದೇವರ ಮಮತೆಯಲ್ಲಿ ಒಣಗಿದ ಮಲ್ಲಿಗೆಬಳ್ಳಿ ಚಿಗಿತದ್ದು

ಶ್ರೀ ಮಹಾಂತಪ್ಪನವರು ಅರಭಾವಿ ಮಠಕ್ಕೆ ಬಂದಮೇಲೆ ದುರ ದುಂಡೇಶ್ವರಸ್ವಾಮಿಗಳಿಂದ ನೆಡಲ್ಪಟ್ಟ ಮಲ್ಲಿಗೆಯ ಬಳ್ಳಿಯು ಮಠನೋಡಲು ಬಂದ ಹೆಣ್ಣುಮಗಳೊಬ್ಬಳು ತಾನು ಮೈಲಿಗೆಯ ಮಲೀನ ದೇಹದವಳು ಎನ್ನುವದನ್ನು ಅರಿತೋ, ಅರಿಯದಲೋ ಮುಟ್ಟಿದ ಪರಿಣಾಮದಿಂದ ಮಲ್ಲಿಗೆಯ ಕಂಟಿಯದು ಸುಟ್ಟು ಕರಕಾದ ರೀತಿಯಲ್ಲಿ ಒಣಗಿ, ದೇಟು ಮಾತ್ರ ಉಳಿದು, ಇನ್ನೆಂದು ನನ್ನ ಈ ಸ್ಥಿತಿಗೆ ಬಿಡುಗಡೆಯೆಂದು ನೌಸ, ಮೂಕವೇದನೆಯಲ್ಲಿ ಜೀವ ಹಿಡಿದ ಕೊಂಡಿತ್ತು. ಅಪ್ಪನವರ ಆಗಮನವಾದ ಮೇಲೆ ಅವರ ಲಿಂಗಾರ್ಚನೆಯ ಶುದ್ಧ ಜಲಕುಡಿದು ತೃಪ್ತಿಯ ಬದುಕು ಕಂಡು ಅಪ್ಪನವರ ಮಮತಾಪೂರ್ಣ ಶ್ರೀಹಸ್ತ ತಾಕಿ ಮಲ್ಲಿಗೆಯ ಕಂಟಿ ಮತ್ತೆ ನಳನಳಿಸುತ್ತ ಹೊಸ ಹರೆಯದ ಹಚ್ಚಹಸಿರು ಎಲೆಗಳಿಂದಲೂ ಶ್ವೇತ

ವರ್ಣದ ಸಾವಿರಕ್ಕೂ ಮಿಕ್ಕಿದ ಹೂಬಟ್ಟು ಎಲ್ಲರ ಅಚ್ಚುಮೆಚ್ಚಿನ ಹೆಚ್ಚಳವ ಕಂಡುಕೊಂಡಿತು.

ಅಪ್ಪನವರು ಮಲ್ಲಿಗೆಯ ಜೀವನದಲ್ಲಿ ಹೊಸ ಜೀವನದ ಪುಷ್ಪಪರಾಗ ತುಂಬಿದರು. ನೂರಾರು ವರ್ಷ ಬಾಳಿ ನಾಶವಾಗುವ ಸ್ಥಿತಿಯಲ್ಲಿದ್ದ ಬಳ್ಳಿಗೆ ನವ ಚೇತನದ ಸೊಬಗು ತುಂಬಿದರು. ಇಂದಿಗೂ ಆ ಮಲ್ಲಿಗೆಯು ಕಂಟಿ ಅರಭಾವಿ ಮಠದಂಚಿನಲ್ಲಿ ಪೋಷಣೆಗೊಂಡು ನಳನಳಿಸುವಂತೆ ಬಾಳಿಕೊಂಡಿದ್ದು, ದೇವರು ತನಗಿತ್ತ ವಯಸ್ಸಿಗೂ ಮಿಕ್ಕಿ ಬದುಕಿ ಬಾಳಿನಲ್ಲಿ ಭವ್ಯತೆಯನ್ನು ಅನುಭವಿಸುತ್ತಿರುವದು.



## ೧೪ ನೇ ಅಧ್ಯಾಯ

### ಶಿದ್ಧಲಿಂಗಸ್ವಾಮಿಗಳು ಅಪ್ಪನವರನ್ನು ಮಠದ ಅಧಿಕಾರಕ್ಕೊಳಪಡಿಸುವ ಪ್ರಯತ್ನ

ಮಹಾಂತದೇವರ ಕಾರ್ಯ ಕುಶಲತೆಯಿಂದ, ಗುರುಗಳಾದ ಶಿದ್ಧಲಿಂಗ ಸ್ವಾಮಿಗಳು ಬಲು ಆನಂದಗೊಂಡರು. ಸತತವಾಗಿ ಹದಿನಾಲ್ಕು ವರ್ಷಗಳ ಕಾಲ ಮಠದ ಉನ್ನತಿಗಾಗಿ ಶ್ರಮಿಸಿದ ಮಹಾಂತದೇವರ ಬಗ್ಗೆ ಅತಿಯಾದ ಅಭಿಮಾನ ತುಂಬಿಕೊಂಡ ಶಿದ್ಧಲಿಂಗಸ್ವಾಮಿಗಳು ನಮ್ಮ ಕಾರ್ಯ ಇಲ್ಲಿಗೆ ಮುಗಿಯಿತು. ಶಿವನ ಅಪ್ಪಣೆಯಂತೆ ನಾವು ಲಿಂಗೈಕ್ಯರಾಗುವ ಮೊದಲು ಮಹಾಂತದೇವರು ಮಠದ ಅಧಿಕಾರ ಪೀಠವನ್ನು ಅಲಂಕರಿಸುವದಾಗ ಬೇಕೆಂದು ಅಪ್ಪಣೆ ಮಾಡಹತ್ತಿದರು. ಹಟಹಿಡಿದ ಶಿದ್ಧಲಿಂಗಯ್ಯಸ್ವಾಮಿ ಗಳು ಹಲವಾರು ಗುರು ಚರ ಮೂರ್ತಿಗಳ ಸನ್ನಿಧಾನದಲ್ಲಿ ಮಹಾಂತದೇವರು ತಮ್ಮ ಉತ್ತರಾಧಿಕಾರಿ, ಮಠಾಧಿಪತಿಗಳೆಂದು ತಿಳಿಸಿದ್ದು ಆಯಿತು. ಅಲ್ಲದೇ ಪ್ರಮುಖರೆನಿಸಿ ಬರುವ ಕೆಲವಾರು ಭಕ್ತರಲ್ಲಿಯೂ ಮಹಾಂತದೇವರು ಉತ್ತರಾಧಿಕಾರ ವಹಿಸುವಂತೆ ಮನ ಪರಿವರ್ತಿಸುವ ಕಾರ್ಯಮಾಡಲು ಅಪ್ಪಣೆ ಮಾಡಿದರು. ಆದರೆ ಶಿದ್ಧಲಿಂಗ ಸ್ವಾಮಿಗಳ ಪ್ರಯತ್ನ ಸಫಲವಾಗ

ದಾಯಿತು. ಯಾರೇ ಕೇಳಿದರೂ ಏನೇ ಹೇಳಿದರೂ ಮಹಾಂತದೇವರು ಮಾತ್ರ ಮಠದ ಅಧಿಕಾರಿಗಳಾಗಲು ಒಪ್ಪದಾದರು.

ಅಲ್ಲದೇ ಗುರುಗಳಾದ ಸಿದ್ಧಲಿಂಗಸ್ವಾಮಿಗಳಲ್ಲಿ ಬಿನ್ನೈಸಿಕೊಳ್ಳುತ್ತ ಮಠದ ಉತ್ತರಾಧಿಕಾರಿಗಳನ್ನು ಉತ್ತಮ ಗುಣವುಳ್ಳವರು, ಧರ್ಮ ತತ್ವರಕ್ಷೆಯನ್ನು ಕಾಪಾಡುವಂತಹ ಕರ್ತವ್ಯಶಾಲಿಗಳು ಜಾಗ್ರತ ತಪೋಬಲ, ಪೂಜಾ ಬಲ, ನಿಷ್ಠಾಬಲ, ನೀತಿಬಲ ಉಳ್ಳವರನ್ನು ಶೋಧಿಸಿ ತಮಗೆ ಯೋಗ್ಯರೆನಿಸಿದರೆ ಉತ್ತರಾಧಿಕಾರ ಸಮಾರಂಭವನ್ನು ಸಂತೋಷದಿಂದ ಜರುಗಿಸೋಣ ಎಂದು ನುಡಿದರಲ್ಲದೇ ತಾವು ಇಂದಿನಂತೆ ಮುಂದಾದರೂ ಶ್ರೀ ದುರದುಂಡೇಶನ ಕೃಪೆಯಲ್ಲಿ ಆತನ ಕಾರ್ಯಕ್ಷೇತ್ರದಲ್ಲಿ ಮನಮುಟ್ಟಿ ತನುಮನಗಳಿಂದ ದುಡಿಯುತ್ತ, ಮಠದ ಯಾವತ್ತು ಭಾರವನ್ನು ನಿರ್ವಹಿಸಿಕೊಂಡು ಹೋಗುವದಾಗಿ ಒಪ್ಪಿಕೊಂಡರು. ಅಧಿಕಾರ ಮೋಹಮಾತ್ರ ತಮಗೆ ಬೇಡವೆಂದು ಅಧಿಕಾರದಾಸೆಯಲ್ಲಿ ಗುರು ಪರಂಪರೆಗೆ ತಮ್ಮಿಂದ ಅಪಚಾರವಾಗದಿರಲೆಂದು ಆಸೆ ಮಾಡಿದರು. ಆಸೆ ಆಕಾಂಕ್ಷೆಗಳಂತೂ ಅವರ ಸಮೀಪ ಸುಳಿಯದಂತೆ ತಮ್ಮ ಧರ್ಮ, ನೀತಿ, ನೇಮಗಳನ್ನು ಕಾಪಾಡಿಕೊಂಡು ಭಕ್ತರಿಗೂ ಗುರುಗಳಿಗೂ ಹಲವಾರು ಮಠದಲ್ಲಿದ್ದ ವಡನಾಡಿಗಳಿಗೂ ಬೇಕಾದವರಾಗಿ ತಮ್ಮ ಕರ್ತವ್ಯಪಾಲನೆ ಗೈಯುವವರಾಗಿ ನಿಶ್ಚಿಂತರಾಗಿದ್ದರು.

ಬರುಬರುತ್ತ ಅಧಿಕಾರ ಹಿಡಿಯಬೇಕೆಂದು ಭಕ್ತರಿಂದಲೂ, ಗುರುಗಳೆನಿಸಿದ ಸಿದ್ಧಲಿಂಗಸ್ವಾಮಿಗಳಿಂದಲೂ, ಮಠಾಧಿಕಾರಿಗಳಾದ ಹಲವು ಗುರುಚರ ಸ್ವಾಮಿಗಳಿಂದಲೂ ಅಪ್ಪನವರನ್ನು ಒಪ್ಪಿಸಲು ಒತ್ತಾಯದ ಉತ್ತರಗಳು ಬರಹತ್ತಿದವು. ಆದರೆ ಮಹಾಂತದೇವರಿಂದ ಎಲ್ಲರ ಉತ್ತರಕ್ಕೂ ಒಂದೇ ಉತ್ತರವೆಂದೆನಿಸಿ ನಮಗೆ ಅಧಿಕಾರದ ಝುಳ ತಾಕುವದೇ ಬೇಡವೆಂದು ಹೇಳುತ್ತಿದ್ದರು. ಅಪ್ಪನವರ ಮಾತಿನಲ್ಲಿ ಲವಲೇಶವು ಔಪಚಾರಿಕತೆ ಕಂಡು ಬರುತ್ತಿರಲಿಲ್ಲ. ಗುರುಭಕ್ತಿಯಿಂದ, ನಿಷ್ಠೆಯಿಂದ ಮಠದ ಕಾರ್ಯಕ್ಷೇತ್ರದಲ್ಲಿ ದುಡಿಯುವದಷ್ಟೆ ತಮ್ಮ ಇಚ್ಛೆಯೆಂದು ಖಂಡಿತ ನುಡಿಯಲ್ಲಿ ಹೇಳಬಿಡಹತ್ತಿದರು.

ಯಾರ ಮಾತಿಗೂ ಮಣಿಯದ ಅಪ್ಪನವರಲ್ಲಿ ಹಿರಿದಾದ ಗುರು ಭಕ್ತಿಯಿತ್ತೇ ವಿನಃ ಗುರುಸ್ಥಾನವನ್ನು ಆಕ್ರಮಿಸುವ ಇಚ್ಛೆ ಉದ್ಭವಿಸಲಿಲ್ಲ.

ಗುರುಸೇವಾ ಭಾಗ್ಯದಿಂದ ಅವರಲ್ಲಿ ನಿಜತ್ವದ ನೆಲೆ, ವೈರಾಗ್ಯದ ಬೆಳೆ ಶಿವ ಯೋಗ ಸಾಧನೆಯ ಪುಣ್ಯಶೆಲೆ ಶೋಭಾಯಮಾನವಾದವು. ಆದರೂ ಶಿದ್ಧಲಿಂಗಸ್ವಾಮಿಗಳು ತಮ್ಮ ಪ್ರಯತ್ನವನ್ನು ಮುಂದುವರಿಸಿದವರಾಗಿ ಬಂದ ಭಕ್ತರೆದುರು, ಹಿರಿಯ ಮಠಾಧಿಕಾರಿಗಳ ಸನ್ನಿಧಿಯಲ್ಲಿ ಮಹಾಂತದೇವರನ್ನು ಪಡಂಬಡಿಸುವ ಸಾಹಸ ಸಾಗಿಯೇ ಇತ್ತು. ಎಂತಾದರೂ ಗುರುಕೃಪೆ, ಗುರುಕಾರುಣ್ಯದ ಸವಿಗನಸಿನ ಸಾಹಸದಿಂದಾಗಿ ಸಮಾಜ, ಭಕ್ತಶಿಂಥಿಣಿಯು ಮಹಾಂತದೇವರಲ್ಲಿ ಸದ್ಭಾವನೆಯಿಂದ ನಡೆದುಕೊಂಡು ಅಪ್ಪನವರೇ ಶಿದ್ಧಲಿಂಗ ಸ್ವಾಮಿಗಳ ತರುವಾಯ ಮಠಾಧಿಕಾರಿಗಳೆಂದು ತೀರ್ಮಾನಿಸಿಬಿಟ್ಟರು.

ಅಲ್ಲದೇ ಒಮ್ಮೆ ಹಿರಿಯ ಮಠಾಧಿಕಾರಿಗಳು, ಪ್ರಮುಖ ಭಕ್ತ ಬಳಗವು ಅಥಣಿ ಶಿವಯೋಗಿಗಳ ಸನ್ನಿಧಾನಕ್ಕೆ ಬಂದು ಅರಭಾವಿ ಮಠದ ಉತ್ತರಾಧಿಕಾರಿಗಳ ಬಗ್ಗೆ ಪ್ರಸ್ತಾಪಿಸಲು ಶ್ರೀಮುರುಘರಾಜೇಂದ್ರ ಮಹಾಸ್ವಾಮಿಗಳು ಸಹ ಮಹಾಂತದೇವರೇ ಯೋಗ್ಯರೆಂದು ಅಪ್ಪಣೆಮಾಡಿದರು.

ಆದರೆ ಆಶಾರಹಿತರಾದ ಅಪ್ಪನವರು ಅಧಿಕಾರ ಮೋಹಕ್ಕೆ ಒಳಗಾಗ ಲಿಲ್ಲ. ಹೇಳಿದವರ ಕೇಳಿದವರ ಮನಗಳು ದಣಿದವೇ ವಿನಃ ಕಾರ್ಯ ಕೈಗೂಡಲಿಲ್ಲ. ಮುಂದೆ ಅನಿವಾರ್ಯವಾಗಿ ಚಿತ್ರದುರ್ಗ ಜಗದ್ಗುರು ಸನ್ನಿಧಿಯು ಅರಭಾವಿ ಮಠಕ್ಕೆ ಆಗಮಿಸುವದಾಯಿತು. ಈಗೂ ಮಹಾಂತ ದೇವರ ಬಗ್ಗೆ ಜಗದ್ಗುರುಗಳ ಸನ್ನಿಧಿಯಲ್ಲಿ ಅರಿಕೆಯಾಯಿತು. ಶ್ರೀ ಗುರು ಜಯದೇವ ಜಗದ್ಗುರುಗಳು ಸಹಿತ ಉತ್ತರಾಧಿಕಾರದ ಸಲುವಾಗಿ ಮಹಾಂತ ದೇವರನ್ನು ಒಪ್ಪಿಸಲು ಸಾಕಷ್ಟು ಪ್ರಯತ್ನಿಸಿದರು. ಜಗದ್ಗುರುಗಳ ಪ್ರಯತ್ನ ಫಲಕಾರಿಯಾಗುವ ಬದಲು ಮಹಾಂತದೇವರು ಮಹಿಮರ ಹಿರಿ ಹರಕೆ, ಆಶೀರ್ವಾದಗಳ ಸಂಗಮವಾಗಿ ತಮ್ಮ ಬಾಳಿನ ಉಸುರುಸುರಿನಲ್ಲಿ ಶಿವಚಿಂತನೆ, ಗುರುಸೇವಾಭಾಗ್ಯ ಸ್ಥಿರವಾದರೆ ಸಾಕು, ಬೇರಿನ್ನಾವ ಅಧಿಕಾರದ ಆಶೆ ಬೇಡವೆಂದರಲ್ಲದೇ ಗುರುಸೇವೆಯೊಂದೇ ನಮ್ಮ ಸಾಧನೆ, ಶಿವಯೋಗ ಸಾಧನೆಯೇ ಮೂಲ ಗುರಿಯಾಗಿರಲಿ ಎಂದು ತಿಳಿಸಿಬಿಟ್ಟರು.

ಇದೇ ರೀತಿಯಾಗಿ ಅಪ್ಪನವರ ಹೇಳಿಕೆ ಕೇಳಿಕೆಯ ಕಾರ್ಯದಲ್ಲಿ ಎಷ್ಟೋ ದಿವಸಗಳು ಗತಿಸಿ ಅಕಸ್ಮಾತಾಗಿ ಶ್ರೀ ಗುರು ಶಿದ್ಧಲಿಂಗಸ್ವಾಮಿಗಳು

ಲಿಂಗೈಕ್ಯರಾದರು. ಆಗ ಮಹಾಂತದೇವರಿಗೆ ಹೇಳಲಾರದ ದುಃಖಃಘಾತ ವಾಯಿತು. ಮಠದ ಸಂಪೂರ್ಣಭಾರ ಇವರ ಮೇಲೆ ಬಿತ್ತು. ಹೀಗಾಗಿ ಮಹಾಂತದೇವರು ಮೂಕವೇದನೆಯನ್ನು ಅನುಭವಿಸುತ್ತ ಖಿನ್ನ ಮನಸ್ಕ ರಾಗಿ ಶಿವಯೋಗ ಸಾಧನೆಯ ದಾರಿ ದೀವಿಗೆಯಾಗಿ ಬೆಳಕನ್ನಿತ್ತ ಗುರು ಕೃಪಾಮೂರ್ತಿ ಇನ್ನಿಲ್ಲವಾಯಿತಲ್ಲಾ ಎಂದು ವ್ಯಸನಗೊಂಡು ಅನಂತ ವೇದನೆ ಯನ್ನು ಅನುಭವಿಸಹತ್ತಿದರು.

ಆಗ ಚಿತ್ರದುರ್ಗ ಜಗದ್ಗುರು ಸನ್ನಿಧಿಯವರು ಇನ್ನೂ ಅರಭಾವಿಯ ಮಠದಲ್ಲಿ ಉಳಿದುಕೊಂಡಿದ್ದರು. ಜಗದ್ಗುರುಗಳ ಕೃಪಾಶೀರ್ವಾದಕ್ಕಾಗಿಯೂ ಮಹಾಂತದೇವರ ವೇದನೆಯಲ್ಲಿ ಪಾಲ್ಗೊಳ್ಳುವದಕ್ಕಾಗಿಯೂ, ಭಕ್ತ ಬಳಗ ದವರು ಅಳತೆಮೀರಿ ಅರಭಾವಿ ಮಠಕ್ಕೆ ಬರಹತ್ತಿದರು. ಸುತ್ತಲಿನ ಗ್ರಾಮ ವಾಸಿ ಭಕ್ತ ಬಳಗವೆಲ್ಲವೂ ಅರಭಾವಿ ಮಠದಲ್ಲಿ ಸಭೆ ಸೇರಿ ಜಗದ್ಗುರು ಸನ್ನಿಧಿಯವರ ಹಿರಿತನದಲ್ಲಿ ಉತ್ತರಾಧಿಗಳಾಗಲು ಮಹಾಂತದೇವರನ್ನು ಒಪ್ಪಿಸುವ ಸಂಧಾನ ಕೈಕೊಂಡರು. ಭಕ್ತ ಬಳಗದವರಲ್ಲಿ ಒಬ್ಬರಾದ ಯರಗಟ್ಟಿ ದೇಸಾಯಿಣಿಯವರು ಮುಂದೆ ಬಂದು ಅಪ್ಪನವರನ್ನು ಮಠದ ಉತ್ತರಾಧಿಕಾರಕ್ಕೆ ಒಪ್ಪಿಸುವ ಹಟ ತೊಟ್ಟರು. ಆದರೆ ಅಪ್ಪನವರು ಯಾರ ಮಾತಿಗೂ ಒಪ್ಪದಾದರೆ ಹೊರತು ಮೊದಲಿನ ಮಾತನ್ನೇ ಅನುಗ್ರಹಿಸ ಹತ್ತಿದರು.

ಆಗ ದೇಸಾಯಿಣಿಯವರು ಹಟದಿಂದ ಸಾಷ್ಟಾಂಗ ಹಾಕಿ ಅಪ್ಪನವರು ಉತ್ತರಾಧಿಕಾರಕ್ಕೆ ಒಪ್ಪಿ, ಜಗದ್ಗುರುಗಳ ಸನ್ನಿಧಿಯಲ್ಲಿ ವಚನ ಕೊಡುವ ವರಿಗೆ ಮೇಲೇಳಲಾರೆನು. ಅನ್ನ, ನೀರು ಮುಟ್ಟಲಾರೆನು ಎಂದು ಗಟ್ಟಿ ಯಾದರು. ದೇಸಾಯಿಣಿಯವರ ಹಟ ನಿರಂತರ ಒಂದಿನ ಒಪ್ಪತ್ತು ಸಾಗಿ ಬಂತು. ಭಕ್ತ ಬಳಗವು ಅಪ್ಪನವರ ಉತ್ತರಕ್ಕಾಗಿ ಕಾತುರಗೊಂಡು ಕುಳಿತರು. ಕೊನೆಗೊಮ್ಮೆ ಭಕ್ತಿಯ ಪಾಶದಿಂದ ಬಂಧಿತರಾಗಿ ತಮ್ಮ ಅಚಲ ನಿರ್ಧಾರವನ್ನು ಬದಲಿಸಿ ಜಗದ್ಗುರುಗಳ ಸನ್ನಿಧಿಯಲ್ಲಿ ಒಪ್ಪಿಕೊಂಡರು. ಆಗ ಯರಗಟ್ಟಿ ದೇಸಾಯಿಣಿಯವರು ಹಸನ್ಮುಖದಿಂದ ಶಿವನನ್ನು ಸಾಕ್ಷಾತ್ಕರಿಸಿಕೊಂಡ ಉಬ್ಬಿನಲ್ಲಿ ಹರ ಹರ ಮಹಾದೇವ, ಜಯ ಗುರು ಮಹಾಂತೇಶಾ, ಜಯ ಗುರು ದುರದುಂಡಿ ಮಹಾಂತೇಶಾ ಎಂದು

ದಿಕ್ಕತಟಗಳು ಅದುರುವಂದದಿ ಭಕ್ತ ಬಳಗದವರೊಡನೆ ಜಯಕಾರ ಮಾಡಿದರು.

ಬಳಿಕ ನಿಶ್ಚಯಿಸಿದ ಪ್ರಕಾರ ಅತ್ಯಂತ ವೈಭವದಿಂದ ಹರ, ಗುರು ಚರ ಮೂರ್ತಿಗಳೆಲ್ಲರ ಆಗಮನವಾಗಿ ಸಂಭ್ರಮದಿಂದ ಶಿವನ ಕೈಲಾಸ ಸದನವೇನೋ ಎನ್ನುವಂತೆ ಅರಭಾವಿ ಮಠದಲ್ಲಿ ಕಾರ್ಯಕಲಾಪಗಳು ನಡೆದವು. ನಿತ್ಯ ಅನ್ನ ಸಂತರ್ಪಣೆ ಸಾಗಿ ಭಕ್ತರೆಲ್ಲರೂ ಆನಂದದಿಂದ ಸಾವಿರದಾ ಒಂಬೈನೂರಾ ಹನ್ನೊಂದನೆ ಇಸ್ವಿಯಲ್ಲಿ ಅರಭಾವಿ ಮಠದ ಉತ್ತರಾಧಿಕಾರ ಪಟ್ಟವನ್ನು ಮಹಾಂತದೇವರಿಗೆ ಕಟ್ಟಿಸಿದರು. ಈಗ ಮಹಾಂತದೇವರು ಗುರು ಪರಂಪರೆ ಪಟ್ಟಾಧ್ಯಕ್ಷರಷ್ಟೆ ಅಲ್ಲ. ವಿರಕ್ತ ಮಠದ ಅಧಿಕಾರ ವಹಿಸಿ, ಶ್ರೀ ನು. ನಿ. ಪ್ರ. ಸ್ವರೂಪಿ ಸ್ವಾಮಿಗಳಾದರು.



## ೧೫ ನೇ ಅಧ್ಯಾಯ

### ಶ್ರೀ ಮಹಾಂತಸ್ವಾಮಿಗಳಿಂದ ಅರಭಾವಿ ಮಠದ ಉತ್ಕರ್ಷೆ

ಈಗ ಮಹಾಂತಸ್ವಾಮಿಗಳಿಗೆ ಮಠದ ಕಾರ್ಯರೂಪಗಳು ಹೊಸ ವೆನಿಸದಿದ್ದರೂ ಮೊದಲಿನಗಿಂತಲೂ ಇಮ್ಮಡಿ ಮುಮ್ಮಡಿಯಾಗಿ ಮಠದ ಉತ್ತೀರ್ಣತೆಯನ್ನು ಬಯಸಿದವರಾಗಿ ಹಳೆಯಕಾಲದ ಚಿತ್ರವನ್ನು ಎತ್ತಿ ಸಾರುವ ಮಠದ ಜೀರ್ಣೋದ್ಧಾರ ಕಾರ್ಯಕ್ಕೆ ಕೈಹಾಕಿ ಮಠದ ಸುತ್ತಲೂ ಪರಸಿಯನ್ನು ನಿರ್ಮಿಸಿ ಹಳೆತರದ ಕಟ್ಟಡದ ಹಲವಾರು ಭಾಗಗಳನ್ನು ಉತ್ತಮ ಗೊಳಿಸುವ ಕಾರ್ಯದಲ್ಲಿ ಎಡಬಿಡದೆ ವಿಶ್ರಾಂತಿಯನ್ನು ಬಯಸದೆ, ಹೊಸ ರೂಪದ ಮಠವನ್ನಾಗಿ ಮಾಡಿಸುವವರಾಗಿದ್ದಾರೆ. ಅದರೊಡನೆ ನಗಾರಿ (ಮನೆ) ಖಾನೆ ಕಟ್ಟಲ್ಪಟ್ಟಿತು. ಬರುಹೋಗುವ ಕ್ರಿಯಾ ಮೂರ್ತಿಗಳ ಲಿಂಗಪೂಜೆಗೆ, ಪಾದೋದಕ ಪ್ರಸಾದಗಳಿಗೆ ಬೇಕಾಗುವ ಸಕಲ ವ್ಯವಸ್ಥೆಯು ಉತ್ತಮ ರೀತಿಯಲ್ಲಿ ಮಾಡಿಸುವದಾಯಿತು. ನಿತ್ಯ ಇಪ್ಪತ್ನಾಲ್ಕು ಗಂಟೆ ದಾಸೋಹವಂತು ಸಾಗಿರುತ್ತಿತ್ತು. ಯಾವದಕ್ಕೂ ಅಡ್ಡಿ ಆತಂಕ, ಅಡೆತಡೆ

ಗಳು ಬಾರದಂತೆ ನೋಡಿಕೊಳ್ಳುತ್ತಿದ್ದರು. ಒಮ್ಮೆಯಾದರೂ ಧನ ದಾನ್ಯ ಗಳನ್ನು ಸಂಗ್ರಹಿಸುವ ಗೋಜಿಗೆ ಹೋಗಲಿಲ್ಲ. ಯಾರಲ್ಲಿಯೂ ಕೇಳುವ ಪದ್ಧತಿಯು ಇವರಲ್ಲಿ ಇದ್ದಿಲ್ಲವೆಂದು ನಿಚ್ಚಳವಾಗಿ ಹೇಳಬಹುದು. ಹರನ ಕರುಣೆಯಿಂದ, ಸ್ವಾಮಿಗಳ ತಪಃಪ್ರಭಾವದಿಂದ, ಭಕ್ತರು ತಾವಾಗಿ ಇಚ್ಛೆ ಪಟ್ಟು ತಂದು ಒಪ್ಪಿಸುವ ಧನ ದಾನ್ಯಗಳಿಂದ ಸಕಲ ಕಾರ್ಯ, ದಾಸೋಹ ಧರ್ಮ ಸಾಂಗವಾಗಿ, ಸರಳವಾಗಿ ಸಾಗುವದಾಗಿತ್ತು. ಸ್ವಾಮಿಗಳ ಆಡಳಿತಕ್ಕೊಳಪಟ್ಟ ಅರಭಾವಿ ಮಠದಲ್ಲಿ ಒಮ್ಮೆಯಾದರೂ ಇಂತಹ ಕಾರ್ಯಕ್ಕೆ ಅಡ್ಡಿಯಾಯಿತು, ಆತಂಕ ಬಂದಿದೆ ಎನ್ನುವ ಪ್ರಸಂಗವನ್ನೇ ಅರಿಯದ ಸಂಗತಿ. ಆಕಸ್ಮಾತ್ ಯಾರಾದರೂ ಮಹಾಂತಸ್ವಾಮಿಗಳನ್ನು ಸಂಗ್ರಹದ ವಿಚಾರವಾಗಿ ಸಂಪತ್ತಿನ ಗಳಿಕೆಯಿಂದ ತಮ್ಮ ಮುಂದಿನ ಜೀವನ ಉದ್ಧಾರಕ್ಕೋಸ್ಕರವಾಗಿ ಉಳಿಸುವ ಮಾತು ಹೇಳಿದರೆ ಶಿವನು ತನ್ನದಾದ ಕಾರ್ಯವನ್ನು ತಾನೆಲ್ಲಾ ಮಾಡಿಕೊಳ್ಳಲು ಸಮರ್ಥನಿದ್ದಾನೆ, ಯಾವದು ನಿಲ್ಲುವದಿಲ್ಲ. ಯಾವ ಕಾರ್ಯಕಲಾಪಗಳು ನಮ್ಮಿಂದ ಜರುಗಬೇಕಾದರೂ ಶಿವಮಹಾದೇವ ಮಹೇಶ್ವರನು ಪ್ರೇರಕ ಶಕ್ತಿ. ಅವನ ಪ್ರೇರಣೆಯಿಲ್ಲದೇ ಏನು ನಡೆಯಲಾರದು, ಎನ್ನುವ ಭಾವನೆಯನ್ನು ಬಿಟ್ಟರೆ ಮಹಾಂತ ಸ್ವಾಮಿಗಳ ವಿಚಾರದಲ್ಲಿ ಬೇರೊಂದು ವಿಚಾರಕ್ಕೆ ಆಸ್ಪದವಿರಲಿಲ್ಲ.

ಅಪ್ಪನವರ ಕಾರ್ಯ ಕೌಶಲ್ಯದಿಂದಾಗಿ ಮಠದ ಘನತೆ ಮೊದಲಿನ ಕಿಂತಲೂ ಹೆಚ್ಚು ಬೆಳೆಯತೊಡಗಿತು. ಬೆಳಗಾಂವಿ ಭಾಗದ ಆಸಿಸ್ಟಂಟ ಕಮೀಶನರ ಆಗಿದ್ದ ಪಾಲೇಕರ ಎಂಬವರು ಮಹಾಂತಸ್ವಾಮಿಗಳಲ್ಲಿ ಅತ್ಯಂತ ಭಕ್ತಿಯಿಂದ ನಡೆದುಕೊಳ್ಳುವವರಾಗಿದ್ದರೆಂದು ಕೇಳಿಬಲ್ಲೆವು. ಶ್ರೀಪಾಲೇಕರ ಸಾಹೇಬರು ಗುರುಭಕ್ತಿಯ ಮನೋಧರ್ಮದಿಂದ ಸರಕಾರದ ಆಡಳಿತದಲ್ಲಿದ್ದ ಹಲವಾರು ಜಮೀನುಗಳನ್ನು ಮಠದ ಹೆಸರಿಗೆ ಸೇರಿಸಿದವರಾಗಿದ್ದಾರೆ. ಮೊದಲು ತಾವು ಮಾಡುವ ಕಾರ್ಯವನ್ನು ಮಾಡಿ, ಬಳಿಕ ಸ್ವಾಮಿಗಳ ಸನ್ನಿಧಾನದಲ್ಲಿ ತಿಳಿಸುವವರಾಗಲು ಅನಿವಾರ್ಯದಿಂದ ಮಹಾಂತಸ್ವಾಮಿಗಳು ಒಪ್ಪಿಕೊಂಡರೆಂದೂ, ತಾವಾಗಿಯೇ ಭೂಮಿ ಸೀಮೆಗಳ ಆಸೆ ಮಾಡದವ ರೆಂದೂ ತಿಳಿದ ವಿಷಯ.

ಇಷ್ಟಾದರೂ ಸದರ ಜಮೀನುಗಳ ಬಗ್ಗೆ ಕೆಚ್ಚಿನ ಮುತವರ್ಜಿ ವಹಿಸಿ ಒಮ್ಮೆಯಾದರೂ ಅವುಗಳನ್ನು ರಜಿಷ್ಟರ ಮಾಡಿಸಬೇಕು. ತಮ್ಮ ತಾಬಾಕ್ಕೆ ತಕ್ಕೊಳ್ಳಬೇಕು ಎಂದು ಅನಿಸಲಿಲ್ಲ. ಆದರೆ ಭಕ್ತರ ಮನವನ್ನು ಸೂಜಿ ಗಲ್ಲಿನಂತೆ ಸೆಳೆಯುವ ಇವರ ತಪಸ್ಸಿನ ಸಾಮರ್ಥ್ಯದಿಂದ ಅಧಿಕಾರಿಗಳೆನಿಸಿದ ಸಬ್‌ರಜಿಸ್ಟ್ರಾರರು, ಸರ್ಕಲ ಇನಸ್ಪೆಕ್ಟರವರು ತಾವಾಗಿಯೇ ಪದೇ ಪದೇ ಮಠಕ್ಕೆ ಬಂದು ರಜಿಸ್ಟ್ರೇಶನ್ ಮುಂತಾದ ಕಾರ್ಯ ಪೂರೈಸುವವರಾದರು. ಅದೇ ರೀತಿಯಾಗಿ ಗೋಕಾಕ ತಾಲೂಕ ಮಾಮಲೇದಾರರು ಇತರ ಕೆಲವು ಅಧಿಕಾರಿಗಳು ತಾವಾಗಿಯೇ ಪ್ರಯತ್ನಪಟ್ಟು ಅರಭಾವಿ ಮಠಕ್ಕಾಗಿ ಭೂಮಿ ಗಳನ್ನು ಕೊಡಿಸಿದ್ದಾರೆ.

ಅಲ್ಲದೇ ಭಕ್ತ ಮಹನೀಯರನೇಕರು ಮಠಕ್ಕೆ ದಾನರೂಪದಲ್ಲಿ ಭೂಮಿ ಗಳನ್ನು ಕೊಟ್ಟಿದ್ದಾರೆ. ಅವರ ಹೆಸರುಗಳು ನಮಗೆ ತಿಳಿದಷ್ಟು ಮಾತ್ರ ವಿವರಿಸುತ್ತೇನೆ. ಚಚಡಿ ದೇಸಾಯರು, ತೂರಮರಿ ಗೌಡರು, ಸಂಕೇಶ್ವರ ಗೌಡರು, ಕೊಳವಿ ದೇಸಾಯರು, ತೇಣಿಗೆ ದೇಸಾಯರು, ಮುಂಗರವಾಡಿ ಸಂಕನ್ನತಾಯಿಯವರಿಂದಲೂ, ಯರಗಟ್ಟಿ ದೇಸಾಯರಿಂದಲೂ ಇನ್ನೂ ಹಲವಾರು ಭಕ್ತರ ಹಿರಿಗುರುತಿನ ಹೊಲಗಳು ಅರಭಾವಿ ಮಠಕ್ಕೆ ಅನ್ನ ಸಂತರ್ಪಣೆಯ ಕಾರ್ಯಕ್ಕೆ ಸಹಾಯ ಸಲ್ಲಿಸುತ್ತವೆ.



## ೧೬ ನೇ ಅಧ್ಯಾಯ

### ಶಾಖಾಮಠಗಳನ್ನು ಉತ್ತೀರ್ಣಗೊಳಿಸಿದ್ದು.

ಅರಭಾವಿಯ ಶ್ರೀ ದುರದುಂಡೀಶ್ವರ ಮಠದ ಕೆಳಗೆ ಅನೇಕ ಶಾಖಾ ಮಠಗಳಿರುವವು. ಮೂಲ ಮಠದ ಸ್ವಾಮಿಗಳು ಅವುಗಳನ್ನು ಜೀರ್ಣೋ- ದ್ಧಾರ ಗೊಳಿಸಬೇಕೆಂಬ ಸದಿಚ್ಛೆಗೆ ಹೋಗದೇ ಆಡಳಿತ ಸಾಗಿ ಮೂಲ ಮಠದ ಹಾಗೂ ಸ್ವಾಮಿಗಳ ಹೆಸರು ಕೆಡಿಸುವ ಮಟ್ಟಿಗೂ ಅವ್ಯವಸ್ಥೆಯ ನಿಲಯವಾಗಿದ್ದವು. ಇಂತಹ ಸಮಯದಲ್ಲಿ ಪೂಜ್ಯ ಮಹಾಂತಸ್ವಾಮಿಗಳು

ಶಾಖಾ ಮಠಗಳ ಜೀರ್ಣೋದ್ಧಾರ ಕಾರ್ಯ ಕೈಕೊಳ್ಳಲು ನಿರ್ಧರಿಸಿದರು. ಶ್ರೀ ದುರದುಂಡೇಶನ ಹಿರಿಗುರುತು ಸಾರುವ ಶಾಖಾ ಮಠಗಳ ಭವಣೆಯನ್ನು ನಿವಾರಿಸಿ, ಉತ್ತೀರ್ಣತೆಯ ಕಡೆಗೆ ಲಕ್ಷ್ಯಗೊಡಹತ್ತಿದರು. ಅವ್ಯವಸ್ಥೆ ಅಧಿಕಾರದ ಅಂಧತೆ ಆವರಿಸಿ ಹೇಳ ಹೆಸರಿಲ್ಲದೇ ಮಾಯವಾಗುತ್ತಿರುವ ಶಾಖಾಮಠಗಳಿಗೆ ಹೋಗಿ ಅಲ್ಲಿ ಸುವ್ಯವಸ್ಥೆ ನಿರ್ಮಾಣಗೊಳ್ಳುವಂತೆ ಮೇಲ್ವಿಚಾರಕರನ್ನು ನಿಯಮಿಸಿ ಬರಹತ್ತಿದರು. ತಮ್ಮ ಮೂಲ ಮಠದಂತೆ ಶಾಖಾ ಮಠಗಳಾದರೂ ಯಾವಾಗಲೂ ಧರ್ಮಶ್ರದ್ಧೆಯಿಂದ ಸಾಮಾಜಿಕ ಕಾರ್ಯ ಚಟುವಟಿಕೆಗಳಲ್ಲಿ ಭಾಗವಹಿಸಿ ಮುಂದುವರಿಯಬೇಕೆಂದು ಸದಾ ಶ್ರಮಿಸಹತ್ತಿದರು. ಸ್ವಾಮಿಗಳು ತಾವು ಅಧಿಕಾರಕ್ಕೆ ಬಂದು ಹದಿನಾರು ವರ್ಷಗಳು ಸರಿದು ನಿರಂತರವಾಗಿ ಸಾಗಿರುವ ಇವರ ಕಾರ್ಯರಚನೆಯಿಂದಾಗಿ ಅರಭಾವಿಯ ಮಠವು ಪುಣ್ಯಮಯ ಪೂರ್ಣರಾಶಿಯನ್ನೆ ಪಡೆದುಕೊಂಡು ತನ್ನ ಉಜ್ವಲ ಕೀರ್ತಿಯನ್ನು ಬೆಳಗುವಂತಾಯಿತು. ಕೀರ್ತಿ ಗೌರವಗಳ ಶ್ರೀ ಕಳಸದಿಂದ ರಂಜಿಸುವಂತಾಯಿತು.

ಹದಿನಾರು ವರ್ಷಗಳ ಅಖಂಡ ಪರಿಶ್ರಮದ ಪ್ರತಿಫಲವಾಗಿ ಅದೆಷ್ಟೋ ಸುಧಾರಣೆಗಳನ್ನು ಹೊಂದಿ ತನ್ನ ಘನತೆ, ಗೌರವಗಳನ್ನು ಇನ್ನೂ ಹೆಚ್ಚಿಸಿಕೊಂಡ ಅರಭಾವಿ ಪುಣ್ಯಾರಣ್ಯ ಮಠ ಅಪ್ಪನವರಿಂದ ಭವ್ಯತೆಯ ಬದುಕು ಕಾಣುತ್ತಿರುವದು.

ಮಹಾಂತಸ್ವಾಮಿಗಳು ಸಮಗ್ರ ಜೀವನದಲ್ಲಿ ವಿಶ್ರಾಂತಿ ಎನ್ನುವ ಮಾತನ್ನೇ ಅರಿಯದವರು. ಶಾಖಾ ಮಠಗಳ ಸಲುವಾಗಿ, ಭಕ್ತರ ಅಭಿಲಾಷೆಗಳನ್ನು ಸಫಲಗೊಳಿಸುವದರ ಸಲುವಾಗಿ ಎಡಬಿಡದೇ ಸಂಚಾರ ಕಾರ್ಯ ಕೈಕೊಳ್ಳುತ್ತಿದ್ದರು. ಮಹಾಂತಸ್ವಾಮಿಗಳಿಗೆ ಮೊದಲಿನಿಂದಲೂ ಕುದುರೆ ಹತ್ತಿ ಸಂಚಾರಕ್ಕೆ ಹೋಗುವದೆಂದರೆ ಬಲು ಉಬ್ಬು. ನೂರಾರು ಮೈಲುಗಳವರೆಗೆ ತಮ್ಮ ಬ್ರಹ್ಮತೇಜಸ್ಸಿನ ಬಲದಲ್ಲಿ ಕುದುರೆಯನ್ನೇರಿ ಸಂಚಾರ ಮಾಡುತ್ತಿದ್ದರು. ಸಂಚಾರ ಸಮಯದಲ್ಲಿ ತಮ್ಮೊಡನೇ ತಮ್ಮ ಪೂಜಾಸಾಹಿತ್ಯಗಳನ್ನು ಒಯ್ಯುತ್ತಿದ್ದರು.

ಅಪ್ಪನವರು ಸಂಚಾರದಲ್ಲಿ ಭಕ್ತರಿಂದ ಹಣ, ದವಸ ಧಾನ್ಯ ಇನ್ನಿತರ ಯಾವ ವಸ್ತುಗಳನ್ನು ತಾವು ಮುಟ್ಟುತ್ತಿರಲಿಲ್ಲ. ತಮ್ಮ ಸಂಚಾರ ಕರ್ತವ್ಯ

ದಂತೆ ಎಲ್ಲವನ್ನು ಕಾರುಭಾರಿಯಾಗಿ ಬಂದವರೇ ವಹಿಸಿಕೊಳ್ಳುವಂತೆ ಅಪ್ಪಣೆ ಕೊಡುತ್ತಿದ್ದರು. ಅಪ್ಪನವರು ತಮ್ಮ ಉದ್ದೇಶಗಳಾದ ವೀರಶೈವ ತತ್ವ ಬೋಧೆ, ಧರ್ಮದ ಏಳಿಗೆ, ಭಕ್ತರ ರಕ್ಷಣೆ, ಸಮಾಜ ಸುಧಾರಣೆ, ಶಿವಮತದ ಉದ್ಧಾರವೇ ತಮ್ಮ ಹೆಗ್ಗುರಿ ಎಂದು ನುಡಿಯುತ್ತ ಹರಗುರು ಚರಮೂರ್ತಿ ಗಳೆಲ್ಲರೊಡನೆ ಬೆರೆತು ಧರ್ಮದ ತಿರುಳು ತಿಳಿಸಿ ಘನ ಜ್ಞಾನೋಪದೇಶ ಮಾಡಿ ಸುಪ್ರಸನ್ನ ಚಿತ್ತರಾಗಿ ಭಕ್ತರ ಮಲಿನ ಮನವನ್ನು ನಿರ್ಮಲಗೊಳಿಸಿ ತಮ್ಮ ಉಪದೇಶದತ್ತ ಒಲಿದು ಬಾಳುವಂತೆ ಕಾರ್ಯಗೈಯುವ ಕಾರಣ ಪುರುಷ ರಾದರು.

ಭಕ್ತರಿಂದ ಬರುವ ಕಾಣಿಕೆಗಳನ್ನು ಆಹಾರ ಸಾಮಗ್ರಿಗಳನ್ನು ನಿತ್ಯ ದಾಸೋಹಕ್ಕೆ ಉಪಯೋಗಿಸುವ ಪರಿಪಾಟವನ್ನು ಕಾರುಭಾರಿಗಳಾದಿಯಾಗಿ ಯಾವತ್ತು ಸೇವಾಭಾಗಿಗಳಿಗೆ ತಿಳಿಸಿ ಅದರಂತೆ ಸಾಗುವ ಹಾಗೆ ನೋಡಿ ಕೊಳ್ಳುತ್ತಿದ್ದರು. ಒಮ್ಮೆ ಪ್ರವಾಸ ಸುರುವಾದರೆ ಧಾರವಾಡ, ಬೆಳಗಾಂವ, ವಿಜಾಪೂರ, ಕೊಲ್ಹಾಪೂರ, ಸಾಂಗಲಿ, ಮಿರಜ, ಮುಂಬೈಗಳವರೆಗೆ ಹೋಗಿ ಸಕಲ ಭಕ್ತ ಬಾಂಧವರಿಗೆ ದರ್ಶನವಿತ್ತು, ಆಶೀರ್ವಚನಗಳಿಂದ ಸಂತೈಸಿ ಬರುತ್ತಿದ್ದರು. ಕರ್ನಾಟಕ, ಮಹಾರಾಷ್ಟ್ರ ಒಂದೇ ಎರಡೇ ಎಲ್ಲಿ ಹೋದರೂ ಭಕ್ತ ತಿಂಥಿಣಿಯ ಭಕ್ತಿಯ ಪಾಶದಲ್ಲಿ ಬಂಧಿತರಾಗಿ ತಮ್ಮ ಗುರುತರ ಸ್ವಾಮಿತ್ವದ ಸಾಧನೆಯನ್ನು ಸಾರ್ಥಕ ಪಡಿಸಿಕೊಂಡರು.

ಅರಭಾವಿಯ ಪುಣ್ಯಾರಣ್ಯ ಮಠದ ಕಾರ್ಯವನ್ನು ಮೊದಲು ಶಿವ ಲಿಂಗಸ್ವಾಮಿಗಳು ನಂತರ ಸಿದ್ಧಲಿಂಗಸ್ವಾಮಿಗಳು ಅಷ್ಟೊಂದು ಮನಸ್ಸಿನ ಮೇಲೆ ತೆಗೆದುಕೊಳ್ಳದೇ ಮಹಾಂತಸ್ವಾಮಿಗಳು ಸಂಸ್ಕೃತ ಕಲಿಯಬೇಕೆಂದು ಬಂದಾಗ ಅವರ ಕಾರ್ಯಕುಶಲತೆಗೆ ಮೆಚ್ಚಿ ತಮ್ಮ ಮೇಲಿನ ಜವಾಬ್ದಾರಿಯನ್ನು ಶ್ರೀ ಮಹಾಂತಶಿವಯೋಗಿಗಳ ಮೇಲೆ ಹೇರಿ ನಿಶ್ಚಿಂತತೆಯಿಂದ ಲಿಂಗಾನಂದ ದಲ್ಲಿಯು, ಶಿವಯೋಗ ಸಾಧನೆಯಲ್ಲಿಯೂ ಕಾಲ ಕಳೆಯುತ್ತಿದ್ದ ಕಾರಣ ಮಠದ ಸ್ವಾಮಿತ್ವ ಪಟ್ಟದೊರೆತ ಮೇಲೆ ಅಷ್ಟೊಂದು ಕಷ್ಟದಾಯಕ ಎನಿಸ ದಿದ್ದರೂ ಎಡಬಿಡದೇ ಒಂದಿಲ್ಲೊಂದು ಕಾರ್ಯದಲ್ಲಿ ಮಗ್ನರಾಗುವ ಅಪ್ಪನವ ರಿಗೆ ವಿಶ್ರಾಂತಿ ಎನ್ನುವದೇ ದೊರೆಯದಾಯಿತು. ತಮ್ಮ ಗುರುಗಳ ಕೃಪೆ

ಯೊಂದಿದ್ದರೆ ಸಾಕು ಎನ್ನುತ್ತ ಈರ್ವರು ಪುಣ್ಯ ಪುರುಷ ತಪೋನಿಧಿಗಳ ಕೃಪಾಶೀರ್ವಾದ ಪಡೆದು ಬಾಳಿ ಬೆಳೆದ ಅರಭಾವಿ ಶ್ರೀ ದುರದುಂಡೇಶ್ವರ ಮಠದ ವೀರ ವಿರಕ್ತ ವಿರತಿ ಶಿವಯೋಗಿಗಳಾದರು. ಈ ವೀರ ವಿರಕ್ತ ಪ್ರಭುವಿನ ಪ್ರತಿಭಾಯೆಯಲ್ಲಿ ಅರಭಾವಿ ಮಠವು ಅಮರ ಕೀರ್ತಿಯನ್ನು ಗಳಿಸಿಕೊಂಡಂತಾಯಿತು.

## ಅರಭಾವಿ ಮಠದ ಕರ್ತೃಪುರುಷ ಶ್ರೀ ದುರದುಂಡೇಶ್ವರರ ಪುರಾಣ ಪ್ರಕಟನೆ

ಮಹಾಂತಸ್ವಾಮಿಗಳ ಶ್ರಮದ ಸಾರ್ಥಕವಾಗಿ ತೊಂಡಿಕಟ್ಟಿ ಶ್ರೀ ಬಸವ ಕವಿಗಳು ಬರೆದಿಟ್ಟ ಕರಡು ಪ್ರತಿಗಳಲ್ಲಿಯೇ ಉಳಿದುಕೊಂಡಿದ್ದ ಆದಿ ಶ್ರೀ ದುರದುಂಡೇಶ್ವರ ಪುರಾಣವು ಶ್ರೀ ಮಹಾಂತ ಶಿವಯೋಗಿಗಳ ಲಕ್ಷ್ಯ ವನ್ನೇ ಸೆಳೆದುಕೊಂಡಿತು. ಮೇಲಾಗಿ ಶ್ರೀ ದುರದುಂಡೇಶನ ಕೃಪೆಯಿಂದಾಗಿ ಪುರಾಣ ಪುಸ್ತಕವು ಪ್ರಕಟವಾಗುವ ಕಾಲವು ಕೂಡಿಬಂತು. ಅಂತೇ ಮಹಾಂತಸ್ವಾಮಿಗಳ ಭಕ್ತ ಬಳಗದಲ್ಲಿ ನಿಸ್ಸೀಮರೆನಿಸಿದ ವಿರುಪಾಕ್ಷಪ್ಪ ಬೆಂಬಳಗಿ ಶಹಾಪೂರ ಶ್ರೀಮಂತ ಭಗವದ್ಭಕ್ತರು ಪುರಾಣವನ್ನು ಅಚ್ಚು ಗೊಳಿಸಲು ಮುಂದೆ ಬಂದರು. ಶ್ರೀ ಮಹಾಂತಸ್ವಾಮಿಗಳ ಮನದಾಸೆ ಯಂತೆ ಕರಡು ಪ್ರತಿಗಳನ್ನು ಅಂದವಾಗಿ ಮುದ್ರಿಸಿ, ಶ್ರೀ ದುರದುಂಡೇಶನ ಮಹಾತ್ಮೆಯನ್ನು ಭಕ್ತ ಬಳಗ ಅರಿತು ಭಕ್ತಿ ವಿಶ್ವಾಸಗಳಿಂದ ಮಣಿದು ನಡೆದುಕೊಳ್ಳುವಂತಾಯಿತು. ಮಹಾಂತಸ್ವಾಮಿಗಳಿಂದ ಆಗದ ಕಾರ್ಯ ವಿಲ್ಲವೆಂದು ಅರಿತುಕೊಂಡ ಜನತೆ ಮತ್ತಿಷ್ಟು ಉತ್ಸಾಹದಿಂದ, ಭಕ್ತಿ ವಿಶ್ವಾಸಗಳಿಂದ ಸೇವಾಭಾಗಿಗಳಾಗಿ ಜೀವನದ ಕಷ್ಟ ಪರಂಪರೆಯನ್ನು ನಿವಾರಿಸಿಕೊಳ್ಳುತ್ತ ಬಂದರು.

## ಬೀಳುತ್ತಿರುವ ಮಠದ ಮಡಗಿಯನ್ನು ಕೈಯಿಂದ ಎತ್ತಿ ನಿಲ್ಲಿಸಿದ್ದು

ಅರಭಾವಿ ಮಠದ ಮೂಲೆಯೊಂದರಲ್ಲಿ ದನಗಳನ್ನು ಕಟ್ಟುವ ಪರಿಪಾಠ ವಿತ್ತು. ಆದರೆ ಆಗ ಆ ಭಾಗದ ಮಡಗಿ, ತೊಲೆ, ಜಂತಿಗಳು ಮುರಿದು

ಈಗೋ ಇನ್ನೊಂದು ಘಳಿಗೆಗೊ ಬೀಳಬಹುದೆಂದು ಬಾಗಿ ನೇತಾಡುತ್ತಿರಲು ಭಕ್ತರೆಲ್ಲರು ಅದಷ್ಟು ತೀವ್ರ ನಾವೇ ಬಿಚ್ಚಿ ತೆಗೆದುಬಿಡುವದು ಒಳ್ಳೇದೆಂದು ತೀರ್ಮಾನಿಸಿ ಸಿದ್ಧರಾದರು. ಅಲ್ಲಿಗೆ ಹೋಗಿ ತೊಲೆ, ಜಂತಿಗಳನ್ನು ತೆಗೆಯಲು ಅಂಜಿ ಹಿಂಜರಿಯುತ್ತಿದ್ದರು. ಆಗ ಒಂದು ದಿವಸ ಮಹಾಂತ ಸ್ವಾಮಿಗಳು ಕೂಡಿದ ಭಕ್ತರ ಸಮಕ್ಷಮದಲ್ಲಿ ಮುಂದಾಗಿ ಹೋಗಿ ಬೀಳುತ್ತಿರುವ ತೊಲೆಯನ್ನು ಕೈಕೊಟ್ಟು ಜೈ ದುರದುಂಡೇಶಾ ಎಂದು ಹುಮ್ಮಸದಿಂದ ಎತ್ತಿ ತೊಲೆಯನ್ನು ತನ್ನ ಪೂರ್ವಸ್ಥಾನಕ್ಕೆ ಕೂಡ್ರಿಸಿ, ಮತ್ತೆ ಆರು ತಿಂಗಳ ವರೆಗೆ ಸರಿಯದಂತೆ ಮಾಡಿದರು ಇದು ಒಂದು ಸ್ವಾಮಿಗಳ ಅಗಾಧ ಲೀಲೆ ಎಂದರಿತು ಜನತೆ ಆಶ್ಚರ್ಯ ಆನಂದಗಳಿಂದ ಜೈ ಗುರುದೇವ ಮಹಾಂತ ಶಿವಯೋಗೀಶ್ವರಾ, ಜೈ ದುರದುಂಡೇಶ್ವರಾ ಎಂದು ಜಯ ಜಯಕಾರ ಗೈದರು.



## ೧೭ ನೇ ಅಧ್ಯಾಯ

### ಮಹಾಂತಸ್ವಾಮಿಗಳು ಕೋರ್ಟಿಗೆ ಹೋಗುವದನ್ನು ನಿರಾಕರಿಸಿ ನ್ಯಾಯ ಗೆಲಿದದ್ದು

ಅರಭಾವಿ ಮಠಕ್ಕೆ ಮುರಗೋಡದಂತೆ ಅನೇಕ ಶಾಖಾ ಮಠಗಳಿರುವವು. ಆಗ ಯಾವದೋ ಒಂದು ಶಾಖಾಮಠದ ಸಲುವಾಗಿ ಬೈಲಹೊಂಗಲ ಮುನಸೀಫ್ ಕೋರ್ಟಿನಲ್ಲಿ ವ್ಯಾಜ್ಯಬಿತ್ತು. ಆಗ ಹತ್ತಂಗಡಿಯವರು ಬೈಲಹೊಂಗಲ ಕೋರ್ಟಿನ ಮುನಸೀಫರಾಗಿದ್ದರು. ಅವರು ಮಹಾಂತ ಸ್ವಾಮಿಗಳಲ್ಲಿ ಭಕ್ತಿ ಶ್ರದ್ಧಾಭಾವನೆಗಳಿಂದ ನಡೆದುಕೊಳ್ಳುವ ಸದ್ಭಕ್ತರಾಗಿದ್ದರು. ಅಂತೇ ಅವರು ಮಹಾಂತಸ್ವಾಮಿಗಳನ್ನು ಕಾಣಲು ಅರಭಾವಿ ಮಠಕ್ಕೆ ಬಂದು ಶ್ರೀಗಳ ಶ್ರೀ ಚರಣಗಳಿಗೆ ಸಾಷ್ಟಾಂಗ ನಮಸ್ಕಾರ ಗೈದು ಅಪ್ಪಾಅವರೇ ಶಾಖಾ ಮಠದ ವ್ಯಾಜ್ಯದಲ್ಲಿ ತಾವು ಕೋರ್ಟಿನವರೆಗೆ ಬರಬೇಕಾಗುವದು. ಕಾರಣ ಈಗ ತಾವು ನಾನು ಹೇಳಿದಂತೆ ಹುಸಿನುಡಿಯ

ಹೇಳಿಕೆಯನ್ನು ನೀಡಿ ಬಿಟ್ಟರೆ ನಿರ್ಭಯವಾಗಿ ನ್ಯಾಯಸ್ಥಾನದಲ್ಲಿ ತಮ್ಮ ಪಕ್ಷವಹಿಸಿ ನ್ಯಾಯವನ್ನು ಗೆದ್ದು ತಮ್ಮಂತೆ ಕಾರ್ಯಸಾಧಿಸಿ ತಮಗೆ ಹೇಳಿ ಕಳುಹಿಸುತ್ತೇನೆ ಎಂದು ಬಿನ್ನೈಸಿಕೊಂಡರು.

ಆದರೆ ಮಹಾಂತಸ್ವಾಮಿಗಳು ಹತ್ತಂಗಡಿ ಸಾಹೇಬರ ಹೇಳಿಕೆಯಂತೆ ಹುಸಿ ನುಡಿಯಲು ಸಿದ್ಧರಾಗದೇ ಶ್ರೀ ದುರದುಂಡೀಶನ ಕೃಪಾ ಬಲವಿದ್ದರೆ ಶಾಖಾಮಠದ ವ್ಯಾಜ್ಯವು ಯಾವ ತೊಂದರೆ ಇಲ್ಲದೇ ಸರಳ ರೀತಿಯಿಂದ ಬಗೆ ಹರಿಯುವದರಲ್ಲಿ ಸಂಶೇಹವಿಲ್ಲ. ಶ್ರೀ ದುರದುಂಡೀ ಶ್ರೀ ಗುರು ಸಾರ್ವಭೌಮರು ತಮ್ಮದಾದ ವ್ಯಾಜ್ಯವನ್ನು ಅದಾವರೀತಿ ತೀರಿಸಿಕೊಳ್ಳುತ್ತಾರೋ ನೋಡೋಣ. ಆದರೆ ನಾವು ಮಾತ್ರ ಹುಸಿಯನ್ನು ನುಡಿದು ಧರ್ಮಶ್ರದ್ಧೆಗೆ ಭಂಗತರಲಾರೆವು ಎಂದು ನಿಚ್ಚಳವಾಗಿ ಹೇಳಿ ಕಳುಹಿಸಿದರು. ಮುಂದೆ ವ್ಯಾಜ್ಯದ ವೈಖರಿಯೇ ಬೇರೆ ಬಣ್ಣಕ್ಕೆ ತಿರುಗಿ ಎಲ್ಲವೂ ಮಹಾಂತ ಸ್ವಾಮಿಗಳ ಹೇಳಿಕೆಯಂತೆ ಬಗೆಹರಿದು ಸರಳವಾಯಿತು. ವ್ಯಾಜ್ಯ ಮಾಡಿದವರು ತಮ್ಮಷ್ಟಕ್ಕೆ ತಾವೇ ಬಂದು ಮಠವನ್ನು ಸ್ವಾಮಿಗಳ ಅಪ್ಪಣೆಯ ಪ್ರಕಾರ ಶ್ರೀ ದುರದುಂಡೇಶನ ಕೃಪಾ ಛತ್ರದ ನೆರಳಿನಲ್ಲಿ ಬಿಟ್ಟುಕೊಟ್ಟು ಆನುವಂಶಿಕರಾಗಿ ನಡೆದುಕೊಳ್ಳುವ ಮಾತುಕೊಟ್ಟು ಶ್ರೀ ಮಹಾಂತ ಸ್ವಾಮಿಗಳಿಂದ ಭಿಕ್ಷೆಯೆಂದು ಪಡೆದ ಮಠವನ್ನು ಈಗಲೂ ಅರಭಾವಿ ಮಠದ ಶಾಖಾ ಮಠವೆಂದು ಒಪ್ಪಿ ನಡೆದುಕೊಳ್ಳುತ್ತಿರುವರು.



## ೧೮ ನೇ ಅಧ್ಯಾಯ

### ಶಿವಯೋಗಿಗಳ ಮೇಲೆ ಅಪವಾದ ಹೊರಿಸಿದ ಢಾಂಬಿಕ ಭಕ್ತನ ಅವಸಾನ

ಮಠದ ವಾತಾವರಣವನ್ನು ಹದಗೆಡಿಸಿ ಪರೀಕ್ಷಿಸಬೇಕೆಂಬ ಇಚ್ಛೆ ಇಂದಲೋ ಅಥವಾ ತನಗಿದ್ದ ಹಣದಾಹಕ್ಕಾಗಿಯೋ ಅಥವಾ ಸ್ವಾಮಿಗಳ ಸರಳ ಮನೋಧರ್ಮದ ದುರುಪಯೋಗ ಪಡೆದೋ ಗುರುಪಾದಪ್ಪ ಪಾರ್ನಟ್ಟಿ

ಎನ್ನುವವನು ಸ್ವಾಮಿಗಳು ನಮ್ಮಲ್ಲಿ ಸಾಲಮಾಡಿದ್ದಾರೆ. ಕೊಟ್ಟರೆ ಸೈ ಎಂದು ಹಟತೊಟ್ಟು ಮಹಾಂತಸ್ವಾಮಿಗಳೊಡನೆ ವ್ಯಾಜ್ಯ ಹೂಡಿದವನಾಗಿದ್ದಾನೆ. ಅಪ್ಪನವರ ಪರವಾಗಿ ಊರಲ್ಲಿ ಸಾಕಷ್ಟು ಜನರು ತಿಳಿವಳಿಕೆಯ ನುಡಿ ಆಡಿ ಎಚ್ಚರಿಸಿದ್ದಾರೆ. ಶಿರಿಯಾಸೆಯು ಮದಬಂದ ಗುರುಪಾದಪ್ಪ ಯಾರ ಮಾತನ್ನೂ ಲಕ್ಷ್ಯಕ್ಕೆ ತಾರದೇ ಅಪ್ಪನವರ ಮರ್ಯಾದೆ ಕಳೆಯುವ ಪರಿಸ್ಥಿತಿ ತಂದೊಡ್ಡಿದ್ದಾನೆ. ಆಗ ಅಪ್ಪನವರು ಪಾರ್ನಟ್ಟಿ ಗುರುಪಾದಪ್ಪನಿಗೆ ಹಲವಾರು ತರದಿಂದ ಬುದ್ಧಿ ಹೇಳಿದ್ದಾರೆ. ನಾವು ನಿನ್ನಲ್ಲಿ ಸಾಲವನ್ನೆ ಉಳಿಸಿಲ್ಲ. ಸುಮ್ಮ ಸುಮ್ಮನೇ ಇದೆಲ್ಲಿಯ ನ್ಯಾಯವಪ್ಪಾ ಇದು ಎಂದು ತಿಳಿಸಿ ಹೇಳಿದರೂ ಕೇಳದೆ ಕೋರ್ಟಿಗೆ ಹೋಗುವದು, ಪಂಚಾಯತಿ ಕೂಡಿಸುವದು ಹೀಗೆ ದುಂಬಾಲುಬಿದ್ದು ಕಾಡಹತ್ತಲು ಅಪ್ಪನವರ ಮನಸ್ಸಿಗೆ ಆಘಾತವಾಗಿ ಅವನು ಹೇಳಿದಷ್ಟು ಹಣವನ್ನು ಕೊಟ್ಟುಬಿಟ್ಟರು.

ಇನ್ನೇನು ತಪಸ್ವಿಗಳ ಮನ ಘಾಸಿಯಾಯಿತು. ಶಿವಯೋಗಿಗಳ ಮನಸ್ಸಿನ ಮೇಲೆ ಇಲ್ಲದ ಪರಿಣಾಮವಾಯಿತು. ತಪೋನಿಧಿಗಳು ಮನ ನೊಂದು ತಾಪದ ಬಿಸಿಉಸಿರು ಬಿಟ್ಟಿದ್ದಾರೆ.

ಬಳಿಕ ಗುರುಪಾದಪ್ಪನು ಗುರುಗಳನ್ನು ವಂಚಿಸಿ ತನ್ನೂರಾದ ಗೋಕಾಕದತ್ತ ಹೊರಟನು. ಆದರೆ ಸ್ವಾಮಿಗಳ ನೊಂದ ಮನದ ಕೋಪ ಪಾರ್ನಟ್ಟಿ ಭೂಪನನ್ನು ಬೆನ್ನಟ್ಟದೇ ಬಿಡಲಿಲ್ಲ. ಹೊಂಚುಹಾಕಿ ಹಣವನ್ನು ಎತ್ತಿ ಹಾಕಿದ ಸಂತಸದ ಸಾಮ್ರಾಜ್ಯದಲ್ಲಿ ಲೋಲಾಡುತ್ತಿದ್ದ ಗುರುಪಾದಪ್ಪ ಬಂಡಿಯಲ್ಲಿ ಕುಳಿತು ಬರುವವನಾಗಿರಲು ಸರಳ ರೀತಿಯ ಯಾವ ತಗ್ಗು ದಿನ್ನೆಗಳಿಲ್ಲದ ದಾರಿಯಲ್ಲಿ ಧಡಾರನೆ ಉರುಳಿ ಬಿತ್ತು ಅವನ ಬಂಡಿ. ಇನ್ನೇನು ಬಂಡಿಯ ಬುಡದಲ್ಲಿ ಗುರುಪಾದಪ್ಪನು ಬಿದ್ದುಬಿಟ್ಟಿದ್ದಾನೆ. ಎತ್ತುಗಳು ಬಿದ್ದ ಬಂಡಿಯನ್ನು ಹುಮ್ಮಸದಲ್ಲಿ ಎಳೆದು ಮುಂದಾಗಲು ಬುಡದಲ್ಲಿ ಸಿಕ್ಕ ಗುರುಪಾದಪ್ಪನ ಕೈಕಾಲುಗಳ ಮೇಲೆ ಬಂಡಿಯ ಚಕ್ರಗಳೆರಡು ಹಾಯ್ದು ಕೈಕಾಲು ಮುರಿದವು. ಜೀವಂತ ಹೆಣವನ್ನು ಮನೆಗೆ ತರುವಂತೆ ಗುರುಪಾದಪ್ಪನನ್ನು ಮನೆಗೆ ತಂದಿದ್ದಾರೆ.

ಮನೆಗೆ ಬಂದು ಹಾಸಿಗೆಯ ಹೆಣವಾಗಿ ಬಿದ್ದಾಗ ಬುದ್ಧಿ ಬಂತು, ಇದು ಗುರು ಮಹಾಂತಶಿವಯೋಗಿಗಳನ್ನು ವಂಚಿಸಿದ ಪ್ರತಿಫಲವೆಂದು.

ಆದರೇನು ಬಂತು ? ಗಂಡ ಸತ್ತ ಮೇಲೆ ಗಯ್ಯಾಳಿ ಅತ್ತಳು ಅನ್ನುವಂತೆ ಅಪ್ಪನವರ ಕೋಪ ತಾಪಗಳಿಗೆ ಕಾರಣನಾದವನು ಆದರ ಪ್ರತಿಫಲ ಉಣ್ಣಲೇ ಬೇಕು. ಗುರುಪಾದಪ್ಪನಿಗೆ ತಿಳುವಳಿಕೆ ಬಂದು, ಸ್ವಾಮಿಗಳಲ್ಲಿ ಕ್ಷಮೆ ಕೇಳಿ ಕೊಳ್ಳಬೇಕು. ಅವರ ಅಮೃತ ಹಸ್ತ ಸೋಂಕಿದರೆ ನಾನು ಮೊದಲಿನಂತೆ ಆಗಬಹುದೆಂಬ ಆಸೆಯಿಂದ ಅಪ್ಪನವರ ದರ್ಶನಕ್ಕೆ ಹೋಗಬೇಕೆಂದು ಸಾಕಷ್ಟು ಪ್ರಯತ್ನ ಪಟ್ಟನಾದರೂ ಆತನಿಗೆ ಶಿವಯೋಗಿಗಳವರ ದರ್ಶನವೇ ಲಭಿಸಲಿಲ್ಲ. ಗುರುಪಾದಪ್ಪನನ್ನು ಬಂಡಿಯಲ್ಲಿ ಹಾಕಿಕೊಂಡು ಮಠಕ್ಕೆ ಬಂದಾಗೊಮ್ಮೆ ಅಪ್ಪನವರು ಸಂಚಾರಕ್ಕೆ ಹೋಗಿರುತ್ತಿದ್ದರು. ಗುರು ಪಾದಪ್ಪನ ಪ್ರಯತ್ನ ಫಲಿಸಲಿಲ್ಲ. ಆದರೂ ಮಾಡಿದ ಕರ್ಮಫಲವಾಗಿ ಕೈಕಾಲು ಮುರಿದು ಮನೆಮುಳಾಗಿ ಮಡದಿ, ಮಕ್ಕಳೆಲ್ಲರಿಂದ ಛೀ ಥೂ ಎನ್ನುವಷ್ಟು ಬೇಸರದ ಮನುಷ್ಯನಾಗಿ ಪದೇ ಪದೇ ತನ್ನ ಬಾಯಿಂದಲೇ ನಾನು ಮಹಾಂತಸ್ವಾಮಿಗಳನ್ನು ವಂಚಿಸಿದೆ, ಅದಕ್ಕೆ ನನಗೆ ಹೀಗಾಯಿತು ಎಂದು ಹೇಳುತ್ತಿದ್ದನು. ಕೊನೆಗೊಂದು ದಿನ ಅಪ್ಪನವರು ಸಂಚಾರದಲ್ಲಿದ್ದಾ ಗಲೇ ಕೊನೆಯುಸಿರೆಳೆದವನಾಗಿದ್ದಾನೆ.

ಅಪ್ಪನವರು ಗುರುಪಾದಪ್ಪನ ಮರಣ ವಾರ್ತೆಯನ್ನು ಸಂಚಾರದಲ್ಲಿ ಇದ್ದಲ್ಲಿಯೇ ಕೇಳಿ ಮರುಗುತ್ತ ಅಯ್ಯೋ ಪಾಪ ಎಂದು ದುಃಖಿಸಿದರು. ಅವರು ಎಷ್ಟೆಂದರೂ ನಿರ್ಮಲ ಹೃದಯಿಗಳು. ನಿರ್ವಿಕಾರ ಕಾಯರು ಎನಿಸಿ ಮಮತೆ, ವಾತ್ಸಲ್ಯಗಳಿಂದ ಕೂಡಿದ ತಪಸ್ವಿಗಳು ಯಾವಾಗಲೂ ಹೀಗೆ, ತಮಗೆ ಪರರಿಂದ ಎಷ್ಟೇ ಅನ್ಯಾಯವಾಗಿದ್ದರೂ ಅವರಿಗಾಗಿ ಮರುಗುತ್ತಾರೆ. ತಾಪಸಿಗಳನ್ನು ಕೆಣಕಿದವರು ಶ್ರೀಮಂತರಾದರೇನು, ಬಡವರಾದರೇನು ಹಾಳಾಗಲೇಬೇಕು, ಉಳುವಿಲ್ಲ. ಇದನ್ನರಿತ ಗುರುಪಾದಪ್ಪ ನವರ ಮಕ್ಕಳು ಸ್ವಾಮಿಗಳ ಹಣವನ್ನು ಮರಳಿ ಕೊಡಲಿಕ್ಕೆ ಬಂದಿದ್ದಾರೆ. ಆದರೆ ಅಪ್ಪನವರು ಮುಟ್ಟಲಿಲ್ಲ. ಕೊನೆಗೆ ಆ ಹಣವನ್ನು ಒತ್ತಾಯದಿಂದ ದಾಸೋಹಕ್ಕೆ ಕೊಟ್ಟು ಸ್ವಾಮಿಗಳಲ್ಲಿ ತಂದೆಯ ಪರವಾಗಿ ಕ್ಷಮೆಯನ್ನು ಯಾಚಿಸಿ, ಆಶೀರ್ವಾದ ಪಡೆದು ಸುಖಬಾಳಿನ ದಾರಿಯನ್ನು ಕಂಡು ಕೊಂಡಿದ್ದಾರೆ ಪಾರ್ನಟ್ಟೆ ಗುರುಪಾದಪ್ಪನವರ ಮುಂದಿನ ಪೀಳಿಗೆಯವರು. ಇಂತಹ ಹಲವಾರು ಮಹತ್ವಪೂರ್ಣ ಕಾರ್ಯ ಕೈಕೊಂಡು ಶ್ರೀ ಮಹಾಂತ

ಸ್ವಾಮಿಗಳ ಜೀವನದುದ್ದಕ್ಕೂ ಸಾಗಿಬಂದಿರುವ ಶಿವಯೋಗಿಗಳ ಪ್ರಭಾವದಿಂದ ಈಗಲೂ ಪಾರ್ನಟ್ಟಿ ಗುರುಪಾದಪ್ಪನವರ ಮನೆತನದ ಮಕ್ಕಳು, ಮೊಮ್ಮಕ್ಕಳು ಸತ್ಯ ಸಂಧರಾಗಿ, ವಚನ ನಿಷ್ಠರಾಗಿ, ವಂಚನೆ ಮೋಸಗಳನ್ನು ಮರೆತು ಶಿವಯೋಗಿಗಳ ಕೃಪಾಶೀರ್ವಾದದ ನೆರಳಿನಲ್ಲಿ ಬಾಳುತ್ತಿದ್ದಾರೆ. ತಂದೆಯಂತೆ ಮಕ್ಕಳು ಎಂಬ ನುಡಿಗೆ ಹೊರತಾಗಿ ಅಪ್ಪನವರ ಭಕ್ತರಾಗಿ ಅಪ್ಪನವರ ಮಮತೆಯ ನೆರಳು ಪಡೆದ ಮನೆತನ ಮತ್ತೆ ಉದ್ಧಾರವಾಯಿತು.



# ೧೯ ನೇ ಅಧ್ಯಾಯ

## ದುರ್ಗದಲ್ಲಿ ಉಳಿಯದ ಕುರುಬೆಟ್ಟದ ಕುದುರೆ

ಅರಭಾವಿ ಮಠಕ್ಕೆ ಬರುವ ಭಕ್ತ ಬಳಗದಲ್ಲಿ ಅಗ್ರಸ್ಥಾನಪಡೆದ ಕುರುಬೆಟ್ಟದ ದೇಸಾಯರು ಒಮ್ಮೆ ಅರಭಾವಿ ಮಠಕ್ಕೆ ಶ್ರೀ ಮಹಾಂತ ಸ್ವಾಮಿಗಳ ಸನ್ನಿಧಿಗೆ ಬರುವವರಾದರು. ಪೂರ್ವ ಪರಂಪರೆಯಂತೆ ತಮ್ಮ ಮೂಲ ನಿಷ್ಠೆ ನೇಮಗಳನ್ನು ಉಳಿಸಿಕೊಂಡು ಬಾಳಿ ಭವ್ಯತೆಯ ಬದುಕು ಕಂಡ ದೇಸಾಯರು ನಿಷ್ಠಾವಂತ ಭಕ್ತರಾಗಿ ಅಪ್ಪನವರಲ್ಲಿ ಪೂಜ್ಯ ಭಾವನೆಯನ್ನಿಟ್ಟು ನಿಸ್ಸೀಮ ಸೇವಕರೆನಿಸಿದ್ದರು. ದೇಸಾಯರ ಸೇವೆ, ಭಕ್ತಿ, ಸದ್ಭಾವನೆ, ಸದಾಚಾರ ಸಂಪನ್ನತೆಗೆ ಒಲಿದು ಶ್ರೀ ದುರದುಂಡೀಶನು ಸಕಲ ಸೌಭಾಗ್ಯಗಳನ್ನಿತ್ತಿದ್ದನು. ಶ್ರೀಯುತ ದೇಸಾಯರಿಗೆ ಮಹಾಂತ ಶಿವಯೋಗಿಗಳಲ್ಲಿ ಎಲ್ಲಿಲ್ಲದ ಭಕ್ತಿ, ವಿಶ್ವಾಸ ಅಂತೇ ಪ್ರತಿ ಅಮವಾಸ್ಯ ಹಾಗೂ ಪುಣ್ಯ ದಿನಗಳಲ್ಲಿ ಅರಭಾವಿ ಮಠಕ್ಕೆ ಬಂದು ಅಪ್ಪನವರ ದರ್ಶನಾಶೀರ್ವಾದ ಪಡೆದು ಅವರು ಹಾಕಿಕೊಟ್ಟ ಧರ್ಮ ಪರಂಪರೆಯಲ್ಲಿ ಸಾಗಿ ಬಂದವರಾದರು.

ಇಂತಿರ್ಪ ಕುರುಬೆಟ್ಟ ದೇಸಾಯರು ಮಠಕ್ಕೆ ಬಂದಾಗ ಶ್ರೀ ಶಿವಯೋಗಿಗಳ ಪಾದಗಳಿಗೆ ಸಾಷ್ಟಾಂಗ ಹಾಕಿ ಬುದ್ಧಿ ನಾನೊಂದು ಅಶ್ವವನ್ನು

ಜೋಪಾನ ಮಾಡಿದ್ದೇನೆ. ವಾಜೀರಾಜ ಏನೋ ಅಂದವಾಗಿದೆ. ಬಲು ಮುದ್ದಾಗಿದೆ, ಅಷ್ಟೇ ಉನ್ನತವೂ ಆಗಿದೆ. ಆದರೆ ಅದನ್ನು ಮುದ್ದಿನಿಂದ ಸಲುಹಿದ ಕಾರಣದಿಂದಲೋ ಅಥವಾ ಕುದುರೆಯ ನೆಲೆ ಅರಿಯುವದು ಕಠಿಣವೆಂಬ ನುಡಿಯ ಸಾರ್ಥಕತೆಗೋ ಏನೋ ಅಶ್ವ ಬಲು ಎಟ್ಟೆಯಾಗಿದೆ. ಶ್ವೇತ ವರ್ಣಿಯಾದ ಆ ಅಶ್ವವನ್ನು ಜಗಜಟ್ಟಿ ಎನಿಸಿದ ಬಲಶಾಲಿ ಗಟ್ಟಿಗ ಮಹಾಶಯನು ಮಣಿಸಲಾರನೆಂದೇ ನನ್ನ ಭಾವನೆಯಾಗಿದೆ. ನನ್ನಲ್ಲಿರುವ ಪೋಷಕ ವರ್ಗದವರಿಗಂತೂ ಕುದುರೆಯನ್ನು ಹಿಡಿತದಲ್ಲಿಟ್ಟುಕೊಳ್ಳುವದು ನೀಗದ ಕಾರ್ಯವಾಗಿದೆ. ಕಾರಣ ಕೊಬ್ಬಿ ಉಬ್ಬಿ ಬಲಯುತವಾಗಿರುವ ಆ ಕುದುರೆಯನ್ನು........ ಎಂದು ತಡೆ ತಡೆದು ತಡವರಿಸಹತ್ತಿದನು. ಆಗ ಮಹಾಂತಪ್ಪನವರು ದೇಸಾಯರ ಮನದಳವನ್ನು ಅರಿತುಕೊಂಡು ನೋಡ್ರೆಪಾ ಅಂಥಾ ಬಲಶಾಲಿ ಅಶ್ವವು ನಿಮ್ಮಲ್ಲಿ ಸಕಲ ಸ ಖ ಭೋಗಭಾಗ್ಯಗಳನ್ನು ಪಡೆದು, ತಿಂದುಂಡು ಸುಖವಾಗಿ ಬೆಳೆದು ಕೊಬ್ಬಿದೆ, ಅಂದ ಮೇಲೆ ಈ ಮಠದಲ್ಲಿ ಅದೇನು ಸುಖ ಸಂತೋಷಗಳನ್ನು ಕಂಡೀತು. ಕಾರಣ ನಿಮ್ಮಲ್ಲೆ ಹಾಯಾಗಿ ಇರಲಿ ಬಿಡ್ರೆಪ್ಪಾ ಎಂದು ವಾತ್ಸಲ್ಯಭಾವದಿಂದ ಅಪ್ಪಣೆ ಕೊಟ್ಟರು. ಅಪ್ಪನವರ ಅಪ್ಪಣೆ ಒಪ್ಪವಂತಹದಾದರೂ ದೇಸಾಯರು ಸ್ವಾಮಿಗಳಲ್ಲಿ ಭಯ ಭಕ್ತಿಗಳಿಂದ ಅರಿಕೆ ಮಾಡಿಕೊಳ್ಳುತ್ತ, ಬುದ್ಧಿ ಆ ಅಶ್ವವನ್ನು ಬೇಕಾದ ರೀತಿಯಲ್ಲಿ ತಿನಿಸಿ ತೇಗಿಸಬಹುದು. ಆದರೆ ಅದು ನಮ್ಮಂಥ ಸಂಸಾರ ಜೀವಿಗಳ ಉಪಯೋಗಕ್ಕೆ ನಿಲುಕಲಾರದ ಮಹಾ ಅಶ್ವವಾಗಿದೆ. ಅದರ ಬಲ ಪ್ರದರ್ಶನವನ್ನು ನೋಡಿದರೆ ಪುಣ್ಯಾತ್ಮರು, ಮಹಿಮಾ ಶಾಲಿಗಳಾದ ತಮ್ಮ ಸ್ವೊತ್ತಾಗಿ ಉಳಿಯುವಂತಹ ಉತ್ತಮ ಅಶ್ವವೆಂದು ಮನಗಂಡು ಬಿಟ್ಟಿದ್ದೇವೆ. ಯೋಗ್ಯತಾ ಪುರುಷರಾದ ತಮ್ಮಂಥ ಶಿವಯೋಗಿಗಳ ಸೇವೆಗೆ ಮೀಸಲಾಗಿ ಹುಟ್ಟಿದ ಆ ಕುದುರೆಯ ಲಕ್ಷಣಗಳನ್ನು ಗುರುತಿಸಿ ತಮ್ಮ ಪಾದ ಸನ್ನಿಧಿಗೆ ಒಪ್ಪಿಸಬೇಕೆಂದು ಇಚ್ಛೆಯುಳ್ಳವನಾಗಿರುವೆ. ತಾವು ದಯಮಾಡಿ ಈ ತಮ್ಮ ಭಕ್ತನ ಆಶೆಯನ್ನು ಅಲ್ಲಗಳೆಯಬಾರದೆಂದು ಬಿನ್ನೈಸಿಕೊಳ್ಳುತ್ತೇನೆ. ಎಂದು ಮತ್ತೊಮ್ಮೆ ಶ್ರೀ ಸ್ವಾಮಿಗಳ ಪಾದಮುಟ್ಟಿ ನಮಸ್ಕಾರ ಗೈದನು. ಅಲ್ಲದೇ ನಾಳಿಗೇನೆ ಅಶ್ವವನ್ನು ಮಠದ ಲಾಯಕ್ಕೆ ಕಳಿಸುವ ವ್ಯವಸ್ಥೆಮಾಡಲು ಅಪ್ಪಣೆ ಕೊಡಬೇಕೆಂದನು.

ಆಗ ಶಿವಯೋಗಿಗಳು ನಿರುಪಾಯರಾಗಿ ಒಪ್ಪಿಗೆ ನೀಡಿದರು. ಸ್ವಾಮಿಗಳ ಅಪ್ಪಣೆಯ ಪ್ರಕಾರ ಕುರುಬೆಟ್ಟ ದೇಸಾಯರು ತಮ್ಮ ಆಳುಗಳಾದ ಕರಿಯಣ್ಣ, ಭೀಮಣ್ಣ, ಸೋಮಣ್ಣ, ಸತ್ಯಣ್ಣ ನಾಲ್ಕು ಜನ ಪೋಷಕ ಮಹಾಶಯರ ಸಂಗಡ ಕುದುರೆಯನ್ನು ಅರಭಾವಿ ಶ್ರೀ ದುರದುಂಡ ಮಹಾಂತಸ್ವಾಮಿಗಳ ಸನ್ನಿಧಾನಕ್ಕೆ ಕಳುಹಿಸಿದನು. ಸ್ವಾಮಿಗಳ ಅಪ್ಪಣೆಯಂತೆ ದೇಸಾಯರಿಂದ ಕಾಣಿಕೆಯಾಗಿ ಬಂದ ಅಶ್ವವನ್ನು ಮಠದ ಲಾಯದಲ್ಲಿ ಕಟ್ಟಿ, ಪೋಷಕ ಮಹಾಶಯರ ಊಟ ಉಪಚಾರ, ಅವರ ದಾರಿಯ ಖರ್ಚಿಗೆ ಹಣವನ್ನು ಕಾರಭಾರಿಗಳಿಂದ ಕೊಡಿಸಿ, ನಾಲ್ವರನ್ನು ಸಂತೋಷದಿಂದ ಬೀಳ್ಕೊಟ್ಟರು. ಆಗ ಸವಾರರಾಗಿ ಬಂದ ನಾಲ್ಕು ಜನರು ಅಪ್ಪನವರ ಆತ್ಮೀಯ ಭಾವಕ್ಕೆ, ಮಮತೆ, ವಾತ್ಸಲ್ಯಗಳಿಗೆ ಒಳಗಾಗಿ ತಮ್ಮ ತಾಪತ್ರಯ ಜೀವನಕ್ಕೆ ನೆಮ್ಮದಿಯ ಆಶೀರ್ವಾದ ಪಡೆದು ಕುರುಬೆಟ್ಟವನ್ನು ಕುರಿತು ಹೊರಟುಹೋದರು.

ಲಾಯದಲ್ಲಿ ಬಂದು ಉಳಿದುಕೊಂಡ ಆ ಶ್ವೇತವರ್ಣದ ಕುದುರೆ ಎಲ್ಲರ ಮನದಲ್ಲಿ ಅಚ್ಚಳಿಯದೇ ಉಳಿಯುವಂತೆ ಬಲು ಅಂದವಾಗಿ ಶೋಭಿಸುತ್ತಿತ್ತು. ಹಲವಾರು ಹುಂಬತನದ ಸೇವಕರು ತಮ್ಮ ಶಕ್ತಿ ಯುಕ್ತಿಗಳನ್ನು ತೋರಿಸಿಕೊಳ್ಳುವ ಹಿರಿ ಹೆಮ್ಮೆಯಿಂದ ಬಯಲು ಸ್ಥಳದಲ್ಲಿ ಕುದುರೆಯನ್ನು ಹೊಡೆದುಕೊಂಡು ಹೋಗಿ ನಾಲ್ಕಾರು ಜನ ಸೇರಿ ಕುದುರೆಯ ಮೇಲೆ ಸವಾರಿಮಾಡಿ ಪಳಗಿಸಬೇಕೆಂದು ಹವಣಿಸಿ ಸೋಲನ್ನೊಪ್ಪಿದರು. ಅಷ್ಟೇ ಅಲ್ಲ ಎಟ್ಟೆತನದ ಏರಾಟದಲ್ಲಿ ಹಲ್ಲು ಕಳೆದುಕೊಂಡವರೆಷ್ಟೊ, ಕೈಕಾಲು ಮುರಿದುಕೊಂಡು ಮೂಲೆಹಿಡಿದು ಉಪಚಾರ ಹೊಂದಿದವರೆಷ್ಟೊ, ಮೂಗು, ಮಂಡಿ ಕೆತ್ತಿ ರಕ್ತಸೋರಿ ಸೊರಗಿದ ಹುಂಬರೆಷ್ಟೊ, ಹೆದರಿಕೆಯ ಧ್ವನಿಯಿಂದ ಸಮೀಪ ಸುಳಿದರೆ ಉಳಿಯಲಾರೆವೆಂದು ಹೆದರಿಕೊಂಡು ಜ್ವರಬಂದು ಮಲಗಿದವರೆಷ್ಟೊ ಅಂತೂ ಕುದುರೆಯು ಮಠವನ್ನು ಪೊಕ್ಕು ದೊಡ್ಡ ಹಾವಳಿಯನ್ನುಂಟು ಮಾಡಿತು. ಇದರಿಂದ ಸೇವಕರಿಗೆ, ಪರಿಚಾರಕ ವರ್ಗಗಳಿಗೆ ಕುದುರೆಯೊಂದು ತಲೆ ಬೇಸರದ ವಸ್ತುವಾಯಿತು.

ಇಂತಿರ್ಪ ಅಶ್ವದ ಪಾಲನೆಯ ಜವಾಬ್ದಾರಿಗೆ ಯಾವತ್ತರು ಹಿಂಜೆರೆಯ ಹತ್ತಿದರು. ನೀರು, ಕಾಳು, ಹುಲ್ಲು ಮೊದಲಾದ ಆಹಾರವನ್ನು ಲಾಯದಲ್ಲಿ

ಕುದುರೆಯು ಮುಂದೆ ಇಟ್ಟು ಬಂದರೆ ಮುಗಿಯಿತು. ಮೈ ಕೈ ತಿಕ್ಕಿ ಕುದುರೆಯ ನರನಾಡಿಗಳನ್ನು ಸಡಿಲಗೊಳಿಸುವ ಸವಾರನು ಅದನ್ನು ಮುಟ್ಟುವದಕ್ಕೂ ಅಂಜಿ ಹಿಂಜರಿಯುತ್ತಿದನು. ಒಂದು ದಿವಸ ನೀರು ಕುಡಿಸಿಕೊಂಡು ಬರಲು ಹೋದವನು ತನ್ನ ಕರ್ತವ್ಯದಂತೆ ನೀರು ಕುಡಿಸಿಕೊಂಡು ಬಂದಿದ್ದರೆ ಮುಗಿದೆ ಹೋಗಿತ್ತು. ಆದರೆ ತನ್ನ ಹುಂಬತನದ ಕಾರ್ಯ ಪ್ರವೃತ್ತಿಯಲ್ಲಿ ಹತ್ತಿ ಸವಾರಿ ಮಾಡಿ ಹೊಡೆದಟ್ಟಿಕೊಂಡು ಬರುವ ಮನಸ್ಸಿನಿಂದ ಕುದುರೆಯ ಮೇಲೇರಿ ಸಾಗಿ ಮಠವನ್ನು ದಾಟಿ ಹಣಿಹಗ್ಗ ಪ್ರಮಾಣ ದಾಟಿರಬಹುದು, ಆಗ ತೇಜಿರಾಜನು ನಾಗಾಲೋಟದಲ್ಲಿ ರಭಸದಿಂದ ಗಾಳಿಯಂದದಿ ಹಾರುತ್ತ, ದಾರಿ ಸಿಕ್ಕತ್ತ ಹೋಗಿ, ಗುಡ್ಡದ ವಾರಿಯಲ್ಲಿ ಸವಾರಿ ಮಾಡಿದ ಸೇವಕನನ್ನು ಒಗೆದು, ಮರಳಿ ಮಠಕ್ಕೆ ಬಂದು ಲಾಯದ ತನ್ನ ಸ್ಥಾನದಲ್ಲಿ ನಿಶ್ಚಿಂತತೆಯಿಂದ ನಿಂತುಕೊಂಡಿತು.

ಅಂದಿನಿಂದ ಮಹಾಂತಸ್ವಾಮಿಗಳು ಕುದುರೆಯ ಮನದಳವನ್ನು ಅರಿತು ಇನ್ನು ಮೇಲೆ ಈ ತೇಜಿಯನ್ನು ಯಾರೂ ಹತ್ತಕೂಡದು ಎಂದು ಕಟ್ಟಪ್ಪಣೆ ಮಾಡಿದರು. ಮತ್ತು ಕುದುರೆಯ ಗುಣ ಧರ್ಮವನ್ನು ಅರಿಯದೇ ಹತ್ತಬಾರದು ಎಂದೂ ಬೋಧಿಸಿದರು. ಹಾಗೂ ಈ ಕುದುರೆಯ ನಡಾವಳಿಯನ್ನರಿತ ಓರ್ವ ಹಿರಿಯ ಬುದ್ಧಿವಂತ ಸೇವಕ ಮಹಾಶಯನು ಅಪ್ಪನವರಿಗಾಗಿ ಅವರ ಸಂಚಾರ ಕಾರ್ಯಕ್ಕಾಗಿ ಮಣಿದು ನಡೆದುಕೊಳ್ಳುವ ಕುದುರೆಯ ಸದ್ವರ್ತನೆಯಿಂದ ಅದರ ನೆಲೆ ತಿಳಿದುಕೊಂಡನು. ಶ್ರೀ ಗುರು ಶಿವಯೋಗಿಗಳಂತಹ ಪುಣ್ಯ, ಪಾವನ ಚರಿತಾಮರ ಆಸರಕ್ಕೆ ಹುಟ್ಟಿ ಬಂದಿರುವ ಈ ಪಾವನ ತೇಜಿಯನ್ನು ಹತ್ತುವಂತಹ ಕೀಳು ಮನದವರಾದ ನಮಗೆ ಕುದುರೆ ಬುದ್ಧಿ ಕಲಿಸುತ್ತದೆ. ಅಪ್ಪನವರಿಗೆಂದೇ ಮೀಸಲಾಗಿ ಬಂದಿರುವ ವಾಜಿರಾಜನನ್ನು ಕೆಣಕಿದರೆ ನಮಗೆ ಅಪಾಯ ತಪ್ಪಿದ್ದಲ್ಲವೆಂದು ಖಂಡಿತವಾಗಿ ನುಡಿದನು.

ಸೇವಕ ಮಹಾಶಯನ ಮಾತಿನಂತೆ ಕುದುರೆಯು ಅಪ್ಪ ಮಹಾಂತ ಸ್ವಾಮಿಗಳನ್ನು ಪ್ರೀತಿಯಿಂದಲೂ, ವಾತ್ಸಲ್ಯದಿಂದಲೂ ಹೊತ್ತುಕೊಂಡು ನೂರಾರು ಮೈಲುಗಳವರೆಗೆ ಸಂಚಾರಗೈದರು. ಸ್ವಾಮಿಗಳ ಹೊಟ್ಟೆ

ಯಲ್ಲಿಯು ನೀರು ತುಳುಕದಂತೆ ತನ್ನ ವೈಯ್ಯಾರಪೂರ್ಣ ವೈಖರಿಯು ನಡಿಗೆಯಲ್ಲಿ ಸಂತಸದಿಂದ ನೂರಿನ್ನೂರು ಮೈಲು ಹೋಗಿ ಬರುತ್ತಿತ್ತು. ಅಷ್ಟೇನವರೆಂದರೆ ಅಷ್ಟೊಂದು ವಣಿದು ವರ್ಣಿಸುವ ಸ್ವಭಾವದ ಕುದುರೆಯು ನಡಾವಳಿಗಳು ಸೇವಕರಿಗೂ ಮಠದ ಒಡನಾಡಿಯಾಗಿದ್ದ ಹಲವಾರು ಪ್ರಮುಖ ಮಹಾಶಯರಿಗೂ ಆಶ್ಚರ್ಯವನ್ನುಂಟು ಮಾಡುವದಾಯಿತು. ಈ ಶಿರ್ಪ ಸಮಯದಲ್ಲಿ ಒಮ್ಮೆ ಚಿತ್ರದುರ್ಗ ಜಗದ್ಗುರುಗಳ ಸನ್ನಿಧಿಯು ಅರಭಾವಿ ಪುಣ್ಯಾರಣ್ಯ ಮಠಕ್ಕೆ ಆಗಮಿಸಿದರು. ಶ್ರೀ ಜಗದ್ಗುರುಗಳು ತಮ್ಮ ಸೇವಕ ಬಳಗವನ್ನು, ಕುದುರೆಯ ಸ್ವಾರ ಬಳಗವನ್ನು ಮರಿದೇವರಾಗಿ ಎಲ್ಲರನ್ನು ಕರೆದುಕೊಂಡು ಮಹಾಂತಸ್ವಾಮಿಗಳ ಉಜ್ವಲ ಕೀರ್ತಿಯನ್ನು ಕೇಳಿದವರು ಕಣ್ಣಾರೆ ಕಂಡು ಆನಂದಹೊಂದಬೇಕೆಂಬ ಅಭಿಲಾಷೆಯಿಂದ ಅರಭಾವಿಗೆ ಆಗಮಿಸಿದರು.

ಶ್ರೀ ಜಗದ್ಗುರುಗಳ ಬಳಗವೆಂದರೆ ಕೇಳುವದೇನು ಸಕಲ ಬಿರುದು ಬಾವಲಿಗಳೊಡನೆ ಸುವರ್ಣ ಕಿರೀಟಧಾರಣ, ಜರಿಮಡಿಯ ಉಡಿಗೆ ತೊಡಿಗೆ, ಬೆಳ್ಳಿಯ ಛತ್ರ ಚಾಮರಗಳೊಡನೆ ವೈಭವಪೂರ್ಣ ಆಗಮನ ಕಂಡು ಭಕ್ತ ಬಳಗದವರು ನಾವೆಂಥ ಪುಣ್ಯಶಾಲಿಗಳು. ಇಂತಹ ದೊಡ್ಡ ಮಠಾಧೀಶರು ನಮ್ಮ ನಾಡಿನಲ್ಲಿ ಪಾದವಿರಿಸಿ, ನಮ್ಮ ಭೂಮಿ ಪಾವನವಾಯಿತೆಂದು ಹಿರಿ ಹಿರಿ ಹಿಗ್ಗಿದರು. ಇಂತಹ ಅತ್ಯುನ್ನತ ಮಠದ ಜಗದ್ಗುರುಗಳ ಸನ್ನಿಧಿಯನ್ನು ಬರಮಾಡಿಕೊಳ್ಳಲು ಮಹಾಂತಶಿವಯೋಗಿಗಳು ಎಲ್ಲಿಲ್ಲದ ಶ್ರಮವಹಿಸಿ ಅವರ ಸ್ವಾಗತ, ಪೂಜೋತ್ಸವ ಕಾರ್ಯಗಳನ್ನು ಬಲು ವಿಜೃಂಭಣೆಯಿಂದ ನೆರವೇರಿಸಿದರು. ಮಹಾಂತಸ್ವಾಮಿಗಳ ಮಹಾಕಾರ್ಯ ಸಾಧನೆಗೆ ಜಗದ್ಗುರುಗಳು ಸಹ ಬೆರಗಾದರು. ಕೂಡಿದ ಸಾವಿರಾರು ಭಕ್ತ ಬಳಗವು ಇದೆಲ್ಲವೂ ನಮ್ಮ ಮಹಾಂತಶಿವಯೋಗಿಗಳ ಪುಣ್ಯದಿಂದ ಲಭಿಸಿದ ಪುಣ್ಯ ಪ್ರಸಂಗವೆಂದು ಶಿವಯೋಗಿಗಳ ಗುಣ ಗಾಯನದಲ್ಲಿ ಹಾಡಿ ಕುಣಿದರು.

ಒಂದು ದಿನ ಜಗದ್ಗುರುಗಳ ಸ್ವಾರಬಳಗವು ಮಠವನ್ನು, ಮಠದ ವೈಭವವನ್ನು ನೋಡುತ್ತ ಸುತ್ತಲು ತಿರುಗಾಡಿಕೊಂಡು ಬಲಬದಿಯಲ್ಲಿದ್ದ ಕುದುರೆ ಕಟ್ಟುವ ಲಾಯದತ್ತ ಬಂದು ಸೆಡುವಿನ ಶ್ವೇತವರ್ಣದ ಅಶ್ವವನ್ನು

ಕಂಡು ಅಚ್ಚರಿಪಟ್ಟರು. ಅರಗಿಸಿದ ಅರೆಗಾಳುಗಳನ್ನು ದವಡೆಯಲ್ಲಿ ಹಿಡಿದು ಮೆಲುಕಾಡಿಸುತ್ತ ಠೀವಿಯಿಂದ ನಿಂತು ನೋಟಕರ ಮನದಲ್ಲಿ ತನ್ನ ಬಗ್ಗೆ ಅಭಿಮಾನ, ಆಶ್ಚರ್ಯಗಳು ಉದ್ಭವಿಸುವಂತೆ ಅಂದವಾಗಿ ಬಲು ಮುದ್ದಾಗಿ ಕಾಣುತ್ತಿರುವದು. ರಥಿಕ ಮಹಾಶಯರು ಕುದುರೆಯ ಅಂದಚಂದಕ್ಕೂ ಅದರ ನಡವಿನ ಠೀವಿಗೂ ಮಾರು ಹೋಗದಿರಲಿಲ್ಲ. ಆದರಲ್ಲಿ ರಥಿಕ ಮಹಾಶಯನೊಬ್ಬ ಕುದುರೆಯ ಲಕ್ಷಣಗಳನ್ನು ಗುರ್ತಿಸಿ ಸ್ವೇತವಿದು ಭಾಗ್ಯಶಾಲಿಗಳನ್ನು ಮಾತ್ರ ಹೊತ್ತುಕೊಂಡು ತನ್ನ ಕರ್ತವ್ಯ ಪೂರೈಸುವಂತಹದು. ಸರ್ವ ಶುಭಲಕ್ಷಣಗಳಿಂದ ಕೂಡಿದ ಈ ತೇಜಿರಾಜನು ನಮ್ಮ ಚಿತ್ರದುರ್ಗದಂತಹ ದೊಡ್ಡ ಮಠದ ಒಡೆತನದಲ್ಲಿ ಇರಲಿಕ್ಕೆ ಬಲು ಯೋಗ್ಯವಾದುದೆಂದು ತೀರ್ಮಾನಿಸಿ ಶ್ರೀ ಶಿವಯೋಗಿ ಮಹಾಂತಸ್ವಾಮಿಗಳ ಸನ್ನಿಧಾನಕ್ಕೆ ತೆರಳಿ ಕುದುರೆಯು ನಮ್ಮ ಚಿತ್ರದುರ್ಗ ಜಗದ್ಗುರುಗಳ ಮಠಕ್ಕೆ ಯೋಗ್ಯವೆನಿಸುವದು ಕಾರಣ ಇಂತಹ ಉತ್ತಮ ಅಶ್ವವನ್ನು ನಾವು ಬಯಸಿದ್ದೇವೆ ಎಂದರು.

ಆಗ ಮಹಾಂತಸ್ವಾಮಿಗಳು ಕುದುರೆಯ ಹೊಗಳಿಕೆಯನ್ನು ಕೇಳಿ ನಸುನಕ್ಕು, ಸೂಕ್ಷ್ಮದೃಷ್ಟಿಯಿಂದ ಎಲ್ಲವನ್ನು ಅರಿತುಕೊಂಡವರಾಗಿ, ಅಯ್ಯಾ ಕುದುರೆ ಇದು ನಿಮ್ಮ ಪಾಲಿಗೆ ಕಹಿ ಫಲವಾಗಿ ಪರಿಣಮಿಸುವದು. ಕುದುರೆಯನ್ನು ತಮಗೆ ಕೊಡಬಾರದೆಂಬ ಇಚ್ಛೆಯು ನಮಗಿಲ್ಲ. ಇದಕ್ಕು ಮಿಕ್ಕಿ ಕಹಿಯನ್ನು ಅನುಭವಿಸುವ ಇಚ್ಛೆಯಿದ್ದರೆ ಇಲ್ಲೆನ್ನಲಾರೆವು ಎಂದು ತಿಳಿಸಿದರು.

ರಥಿಕರ ಹಟವಾದಿತನದಿಂದಾಗಿ ಜಗದ್ಗುರುಗಳ ಸನ್ನಿಧಿಯು ಅಶ್ವವನ್ನು ತೆಗೆದುಕೊಂಡು ಚಿತ್ರದುರ್ಗದತ್ತ ಪ್ರಯಾಣ ಬೆಳೆಸಿದರು. ಜಗದ್ಗುರುಗಳು ಹಾಗು ರಥಿಕರು ಪ್ರಯಾಣದಲ್ಲಿ ಸಾಗಿ ಹೊರಟಿರಲು ಕುರುಬೆಟ್ಟ ಕುದುರೆಯನ್ನು ಹತ್ತಿದ ರಥಿಕ ಮಹಾಶಯನು ತನ್ನ ಸೊಕ್ಕಿನ ಛಾಟಿಯನ್ನು ಒಂದೇ ಒಂದು ಸಲ ಬೀಸಿ ಅಶ್ವವನ್ನು ಥಳಿಸಲು ಅಶ್ವರಾಜನು ರಥಿಕನನ್ನು ಹೊತ್ತುಕೊಂಡು ವಾಯುವೇಗದಲ್ಲಿ ಸಂಚಾರಗೈದು ಮುಂಬರುವ ಹಳ್ಳದ ಬದಿಯಲ್ಲಿ ಒಗೆದು, ಮರಳಿ ಅರಭಾವಿಯನ್ನು ಕುರಿತು ಹೊರಟು ಬರುವ

ವಾಯಿತು. ಜಗದ್ಗುರು ಹಾಗು ಪರಿವಾರವು ಚಿತ್ರದುರ್ಗವನ್ನು ತಲುಪಿದರು. ಶಿವಯೋಗಿಗಳ ಕುದುರೆ ಹತ್ತಿದ ಸ್ವಾರ ಮಹಾಶಯನು ಹಳ್ಳದ ಬದಿಯಲ್ಲಿ ಬಿದ್ದುಕೊಂಡನು.

ಇತ್ತ ಮರಳಿ ಅರಭಾವಿಗೆ ಬಂದ ಅಶ್ವವನ್ನು ಕಂಡು ಮಹಾಂತ ಸ್ವಾಮಿಗಳಿಗೆ ಖೇದವೂ, ಆಶ್ಚರ್ಯವೂ ಆಗದಿರಲಿಲ್ಲ. ಬಳಿಕ ಜಂಗಮಾರ್ಯ ತಪಸ್ವಿಗಳಿಗೆ ಅರ್ಪಿತವಾಗಿದೆ ಎಂದ ಮೇಲೆ ತಿರುಗಿ ಪರಾಂಭರಿಸುವದು ತಪ್ಪು ಎಂಬ ಭಾವನೆಯಿಂದ ಕುದುರೆಯನ್ನು ಸಂತೈಸುತ್ತ, ಬೆನ್ನು ಚಪ್ಪರಿಸಿ ತೇಜಿವರಾ ನಮ್ಮ ಅಭಿಮಾನದ ಕುರುಹಾಗಿ ನೀನು ಚಿತ್ರದುರ್ಗವನ್ನು ಸೇರಲೇಬೇಕೆಂದು ಒತ್ತಾಯದಿಂದ ನುಡಿಯಲು, ಸ್ವಾಮಿಗಳ ಹೇಳಿಕೆಯಂತೆ ಮನಸ್ಸಿಲ್ಲದ ಮನಸ್ಸಿನಿಂದ ತನ್ನ ಅಶ್ರುಧಾರೆಯಿಂದ ಸ್ವಾಮಿಗಳ ಶ್ರೀ ಪಾದಗಳನ್ನು ತೊಳೆದು ಚಿತ್ರದುರ್ಗದ ಮಠಕ್ಕೆ ಹೊರಟು ಹೋಯಿತು.

ಇತ್ತ ಚಿತ್ರದುರ್ಗ ಜಗದ್ಗುರುಗಳು ರಥಿಕ ಬಾರದಿರಲು ವ್ಯಸನಗೊಂಡರು. ಅಷ್ಟರಲ್ಲಿ ಅರಭಾವಿ ಸವಾರನು ಕುದುರೆಯನ್ನು ಚಿತ್ರದುರ್ಗ ಮಠದ ಜಗದ್ಗುರುಗಳ ಸನ್ನಿಧಾನದಲ್ಲಿ ತಂದು ನಿಲ್ಲಿಸಿದನು. ಆಗ ಜಗದ್ಗುರುಗಳು ತಮ್ಮ ರಥಿಕನಿಲ್ಲದೇ ಕುದುರೆ ಬಂದಿರುವ ಸಕಲ ವಿಷಯವನ್ನು ಅರಿತು ಹಯವ ಹತ್ತಿ ಹೊರಟ ಸ್ವಾರನ ಸ್ಥಿತಿ ಹಳ್ಳದ ಬದಿಯಲ್ಲಿ ಏನಾಯಿತೋ ಎಂದು ಉದಾಸೀನರಾಗಿ ಶ್ರೀ ಮಹಾಂತೇಶರ ಮೆಚ್ಚಿನ ಹಯವನ್ನು ಅಪೇಕ್ಷೆಪಟ್ಟು ಅನರ್ಥ ಉಂಟಾಯಿತೆಂದು ಹಳಹಳಿಸಿದರಲ್ಲದೇ. ಒತ್ತಾಯದಿಂದ ಕಾಮಿಸಿ (ಪ್ರೇಮಿಸಿ) ಪಡೆದುಕೊಂಡ ಪ್ರತಿಫಲ ರಥಿಕನಿಗಾಯಿತೆಂದು ಮಿಡುಕಿದರಲ್ಲದೇ ಚಿಂತಿಸಿ ಫಲವಿಲ್ಲವೆಂದು ತೇಜಿರಾಜನನ್ನು ಹೊಡೆದುಕೊಂಡು ಬಂದಿರುವ ಅರಭಾವಿ ಮಠದ ಚರನನ್ನು ಉತ್ತಮ ರೀತಿಯಿಂದ ಕಂಡದ್ದಲ್ಲದೇ, ಸರ್ವ ವಿಷಯಗಳನ್ನು ಮಹಾಂತ ಸ್ವಾಮಿಗಳಿಗೆ ಪತ್ರ ಮುಖೇನ ತಿಳಿಪಡಿಸಿ, ಅರಭಾವಿ ಈಶ ಮಹೇಶರ ಅಶ್ವರಾಜನು ಚಿತ್ರದುರ್ಗದಿಂದ ಮರಳಿ ಸನ್ಮಾನಹೊಂದಿ ತನ್ನ ಪುಣ್ಯತಾನ ಅರಭಾವಿ ಮಠಕ್ಕೆ ಬಂದಿತು.

ಆಗ ಮಹಾಂತಸ್ವಾಮಿಗಳು ಜಂಗಮಾರ್ಯನ ಸ್ತೋತ್ರಗಳೆಂದು ಅರ್ಪಿಸಿದ ಮೇಲೆ ಹಯವನ್ನು ತಿರುಗಿ ಕಾಮಿಸುವದೆಂದರೆ ತಪ್ಪು ಎಂದು ಗ್ರಹಿಸಿಕೊಂಡು ಜಂಗಮಾರ್ಪಿತ ತೇಜಿ ಜಂಗಮಾರ್ಯರಿಗೆ ಸಲ್ಲಲೆಂದು ಶೀಮಾರ್ನಿಸಿ ಕೊಪ್ಪಳ ಗವಿಮಠಾಧೀಶ ಜಂಗಮೇಶ ಸ್ವಾಮಿಗಳ ಸನ್ನಿಧಿಗೆ ಕಳುಹಿದರು.



## ೨೦ ನೇ ಅಧ್ಯಾಯ

### ಮರಿದೇವರನ್ನು ಹುಡುಕುವ ಸಾಹಸ

ಶ್ರೀ ಗುರು ಮಹಾಂತಸ್ವಾಮಿಗಳು ತಮ್ಮ ಐವತ್ತೆಂಟನೇ ವಯಸ್ಸಿನಲ್ಲಿ ತಮ್ಮ ಮನದಾಸೆಯಂತೆ ಮತ್ತೊಂದು ಮಹತ್ಕಾರ್ಯ ಮಾಡಲು ಹೊರಳಿದರು. ಅಂದರೆ ತಮ್ಮ ಮಠದ ಉತ್ತರಾಧಿಕಾರಿಯನ್ನು ನೇಮಿಸಿದರೆ ಸಂಪೂರ್ಣ ಧರ್ಮಕಾರ್ಯ, ಸಮಾಜ ಕಾರ್ಯಗಳು ಹಿಂದಿನಂತೆ ಎಂದೆಂದು ಸಾಂಗವಾಗಿ ಸಾಗಲು ಅನುಕೂಲವಾಗುವದೆಂದು ಶೀಮಾರ್ನಿಸಿಕೊಂಡು ತಮ್ಮ ಮನದ ಇಂಗಿತವನ್ನು ಹಲವಾರು ಮಠಾಧೀಶರಿಗೆ ಅರುಹಿ, ಈಗಲೇ ಉತ್ತರಾಧಿಕಾರಿ ಮರಿದೇವರನ್ನು ಗೊತ್ತುಪಡಿಸಿ ಕರೆತರುವದು ವಿಹಿತವೆಂದು ನುಡಿಯುತ್ತಿದ್ದರು. ಅಲ್ಲದೇ ಇಲ್ಲಿಯವರೆಗೆ ತಮ್ಮ ಗುರುಗಳು ಉಳಿಸಿಕೊಂಡು ಬಂದಿರುವ ಮಠದ ಪರಂಪರೆಯನ್ನು ಕಾಯ್ದುಕೊಂಡು ಹೋಗಬೇಕಾದದ್ದು ತಮ್ಮ ಕರ್ತವ್ಯವೆಂದು ಹೇಳಹತ್ತಿದರು.

ಶ್ರೀ ಮಹಾಂತಪ್ಪಗಳಿಗಿರುವ ಉತ್ಕೃಷ್ಟ ಅಭಿಲಾಷೆಯೆಂದರೆ ಧರ್ಮದ ಏಳಿಗೆ. ಅದಕ್ಕೆ ಯಶ ದೊರೆಯಬೇಕಾದರೆ ಮರಿದೇವರ ಆಗಮನ ಅವಶ್ಯವೆಂದು ಮರಿದೇವರ ಶೋಧನೆಗೆ ತೊಡಗಿದರು. ಹಾಗು ಹಲವಾರು ಭಕ್ತವೃಂದಕ್ಕೆ ತಮ್ಮ ವಿಚಾರವನ್ನು ತಿಳಿಸಿದರು. ಅದರಲ್ಲಿ ಹಲವಾರು ಜನರು ತಮ್ಮ ಸ್ಥಾನದಲ್ಲಿ ಈಗಲೆ ಮರಿದೇವರ ಪ್ರವೇಶ ಬೇಡವೆಂದು ಬಿನ್ನೈಸಿಕೊಳ್ಳಹತ್ತಿದರು. ಆದರೆ ಅಪ್ಪನವರು ಭಕ್ತರ ಮನದಳವನ್ನು ಸೂಕ್ಷ್ಮ

ರೀತಿಯಿಂದ ಪರಿವರ್ತಿಸಿ ತಮ್ಮ ವಿಚಾರವು ಒಂದು ದೃಷ್ಟಿಯಿಂದ ಸೂಕ್ತ ವೆನ್ನುವಂತೆ ಮಾಡಿದರು.

ಇಂತಿರ್ಪ ಸಮಯದಲ್ಲಿ ತಿರ್ಥಿಯವರಾದ ಶಿವಾನಂದ ದೇವರು ವೈದಿರಗಿಮಠ ಇವರು ಕಲಬುರ್ಗಿ ಜಿಲ್ಹೆಗೊಳಪಟ್ಟ ಯಾದಗಿರಿ ಶಂಕರ ಸಂಸ್ಕೃತ ಕಾಲೇಜದಲ್ಲಿ ಸಂಸ್ಕೃತ ಅಭ್ಯಾಸ ಮಾಡುತ್ತಿದ್ದರು. ಶಿವಾನಂದ ದೇವರಿಗೂ ಮಂಟಮುರಿ ಚನ್ನಬಸವಶಾಸ್ತ್ರಿಗಳಿಗೂ ವಿಶೇಷ ಪರಿಚಯವಿದ್ದ ಪ್ರಯುಕ್ತ ಚನ್ನಬಸವಶಾಸ್ತ್ರಿಗಳು ಶಿವಯೋಗಿಗಳ ಸನ್ನಿಧಿಗೆ ಬಂದಾಗ ತಮಗೆ ಪರಿಚಯವಿದ್ದ ಶಿವಾನಂದ ದೇವರ ಬಗ್ಗೆ ಪರಾಂಬರಿಸಿ ಮಾತನಾಡಿ ಶಿವಾನಂದ ದೇವರು ಅರಭಾವಿ ಮಠಕ್ಕೆ ತಮ್ಮ ತರುವಾಯ ಉತ್ತರಾಧಿಕಾರಿ ಯಾಗಲು ಸರ್ವ ರೀತಿಯಿಂದಲೂ ಯೋಗ್ಯರೆಂದು ಅವರ ಬಗ್ಗೆ ತಮಗಿದ್ದ ವಿಶ್ವಾಸ, ಗುಣ, ಗೌರವಗಳನ್ನು ವ್ಯಕ್ತಪಡಿಸಿದರು. ಆದರೂ ಅದೇಕೋ ಅಪ್ಪನವರು ಆಲೋಚನಾಪರರಾಗಿ, ಕೊನೆಗೊಮ್ಮೆ ಶ್ರೀ ದುರದುಂಡೇಶನ ಇಚ್ಛೆ ಎಂದು ಹಲವಾರು ಭಕ್ತರನ್ನು, ಗುರು, ಚರ ವೃಂದವನ್ನು ಕರೆಯಿಸಿ ತಮ್ಮ ನಿರ್ಧಾರವನ್ನರುಹಿದರು.



# ೨೧ ನೇ ಅಧ್ಯಾಯ

## ಶ್ರೀ ಶಿವಾನಂದ ಮರಿದೇವರಿಗೆ ಅಧಿಕಾರ ವಹಿಸಿಕೊಟ್ಟದ್ದು

ಹಲವರೊಡನೆ ಈ ವಿಷಯ ಪ್ರಸ್ತಾಪಿಸಿದರು. ಆದರೆ ಮೇಲಿಂದ ಮೇಲೆ ಶಿವಾನಂದ ದೇವರನ್ನು ಮರಿದೇವರಾಗಿ ಸೇವೆಗೆ ತೆಗೆದುಕೊಳ್ಳುವ ಒತ್ತಾಯದ ಉತ್ತರ ಬರಹತ್ತಿದವು. ಒಂದು ದಿನ ಶಿವಾನಂದ ದೇವರು ಸ್ವಾಮಿಗಳ ದರ್ಶನ ಆಶೀರ್ವಾದಕ್ಕಾಗಿ ಬಂದರು. ಶಿವಾನಂದ ವಟುಗಳು ಕನ್ನಡ ಹಾಗು ಸಂಸ್ಕೃತ ವಿದ್ವಾಂಸರಲ್ಲಿ ಕಲಿತು ಪಂಡಿತರೆನಿಸಿದವರು. ಶಿವಯೋಗಿಗಳು

ವಟುಗಳ ವಿದ್ಯಾ ಬುದ್ಧಿಗಳಿಗೆ ಮಾರುಹೋಗಿ ತಮ್ಮ ಸೇವೆಯಲ್ಲಿ ಉಳಿಸಿ ಕೊಂಡರು.

ಶಿವಾನಂದ ವಟುವರ್‍ಯರು ಸೇವಾ ಕಾರ್ಯದಲ್ಲಿ ಉಳಿದುಕೊಂಡ ಕೆಲವೇ ದಿವಸಗಳಲ್ಲಿ ಹಲಕೆಲವು ಗುರು ಚರ ಬಳಗದವರಿಂದಲೂ, ಭಕ್ತ ಮಹಾಶಯ ರಿಂದಲೂ ಶಿವಾನಂದ ಮರಿದೇವರಿಗೆ ಅಧಿಕಾರ ಕೊಡುವಂತೆ ಮಹಾಂತ ಸ್ವಾಮಿಗಳಿಗೆ ಬಿನ್ನಹಗಳು ಬರಹತ್ತಿದವು. ಮೊದಲೇ ಈ ಅಧಿಕಾರ ಮೋಹದಿಂದ ದೂರಾಗುವ ಅಭಿಲಾಷೆಯಲ್ಲಿದ್ದ ಅಪ್ಪನವರು ಯಾವ ಆಸೆ ಆಕಾಂಕ್ಷೆಗಳಿಗೆ ಒಳಗಾಗದೇ ಸ್ವಸಂತೋಷದಿಂದ ಒಪ್ಪಿಗೆ ನೀಡಿದರು.

ಯಾವ ಆಸೆ ಅಧಿಕಾರ ಪಾಶದಿಂದ ಮುಕ್ತರಾಗಿ, ಲಿಂಗಪೂಜಾ ಲೋಲರಾಗಿ ಶಿವಯೋಗ ಸಾಧನೆಯಲ್ಲಿ ಕಾಲ ಕಳೆಯಬೇಕೆಂದು ಬಯ ಸಿದ್ದರೋ ಅದು ತನ್ನಿಂದ ತಾನೇ ಕೂಡಿ ಬಂದಿರುವಾಗ ಆನಂದದಿಂದ ಮಠಕ್ಕೆ ಬೇಕಾದ ಹಲಕೆಲವು ಭಕ್ತರನ್ನು, ಗುರು ಚರ ಮೂರ್ತಿಗಳನ್ನು ಕರೆಯಿಸಿ, ವಿಧಾನೋಕ್ತವಾಗಿ ಹತ್ತೊಂಭತ್ತುನೂರಾ ಇಪ್ಪತ್ತೇಳನೇ ಇಸ್ವಿ ಯಲ್ಲಿ ಪಟ್ಟಾಧಿಕಾರ ಸಮಾರಂಭವನ್ನು ಜರುಗಿಸಿದರು. ಇದರಿಂದ ಕೆಲವು ಭಕ್ತರಿಗೆ ತೀವ್ರ ಆಘಾತವಾಯಿತು. ಆದರೆ ಶಿವಯೋಗಿಗಳ ಅಪ್ಪಣೆಯ ಪ್ರಕಾರ ಸಾಗಬೇಕಾದ ಸಮಾರಂಭವು ಸಕಲ ಸುಸಜ್ಜಿತ ವ್ಯವಸ್ಥೆಯಲ್ಲಿ ಮುಕ್ತಾಯಗೊಂಡು, ಶಿವಾನಂದ ಮರಿದೇವರು ಆರಭಾವಿ ಶ್ರೀ ದುರದುಂಡೇ ಶ್ವರ ಮಠದ ಅಧಿಕಾರ ಪಿಡಿದು ಶಿವಾನಂದಸ್ವಾಮಿಗಳಾದರು. ಶಿವಯೋಗಿ ಗಳು ಮಾತ್ರ ತಮ್ಮ ಮನದಭಿಲಾಷೆಯಂತೆ ಶಿವಸಾಕ್ಷಾತ್ಕಾರ ಕಾರ್ಯಗಳಾದ ತ್ರಿಕಾಲ ಲಿಂಗಾರ್ಚನೆ, ತಪೋನಿಷ್ಠಾನಗಳಿಗೆ ಅನುಕೂಲವಾಯಿತೆಂಬ ಆನಂದದಿಂದ ಕಾಲ ಕಳೆಯಹತ್ತಿದರು.



# ೨೨ ನೇ ಅಧ್ಯಾಯ

## ಅಪ್ಪನವರು ಅರಭಾವಿ ಮಠವನ್ನು ತ್ಯಜಿಸಿ ಹಳ್ಳದ ಗದ್ದುಗೆಯ ಬಳಿಯಲ್ಲಿ ಉಳಿದುಕೊಂಡದ್ದು

ಶಿವಾನಂದ ಸ್ವಾಮಿಗಳಿಗೆ ಅರಭಾವಿ ಶ್ರೀ ದುರದುಂಡೀಶ್ವರ ಮಠದ ಪಟ್ಟಾಧಿಕಾರವಾದ ಸ್ವಲ್ಪೇ ದಿನಗಳಲ್ಲಿ ಮಠದ ಪದ್ಧತಿಯ ಪ್ರಕಾರ ಸಂಚಾರ ಕೈಕೊಳ್ಳುವ ಪ್ರಸಂಗ ಬಂತು. ಆಗ ಮಹಾಂತಸ್ವಾಮಿಗಳು ಸಕಲ ಸಿದ್ಧತೆಗಳೊಡನೆ ಸಂಚಾರ ಕೈಕೊಂಡರು. ಆದರೆ ಈಗ ಅವರು ಮಠದ ಅಧಿಕಾರಿಗಳಲ್ಲ ಹಾಗು ಸಂಚಾರದ ಕ್ರಮವು ಅವರಿಗೆ ಉಚಿತವಲ್ಲದ ಕಾರ್ಯವೆಂಬ ಪಿಸುಮಾತುಗಳು ಮಹಾಂತಸ್ವಾಮಿಗಳ ಕರ್ಣಪಟಲಗಳ ಮೇಲೆ ಬಂದದ್ದಲ್ಲದೆ ಶಿವಾನಂದ ಸ್ವಾಮಿಗಳು ಹಟ ತೊಟ್ಟವರಂತೆ ಯೋಗಿ ಕೊಳ್ಳದಲ್ಲಿ ಅನುಷ್ಠಾನಕ್ಕೆ ಹೊರಡುವ ಸಿದ್ಧತೆ ಮಾಡಿದರು. ಇದರಿಂದ ಮಹಾಂತಸ್ವಾಮಿಗಳಿಗೆ ಬಹಳ ವೇದನೆಯಾಯಿತು. ವ್ಯವಸ್ಥಿತ ರೀತಿಯಲ್ಲಿ ನಡೆದ ಮಠದ ಪರಿಸ್ಥಿತಿ ಹದಗೆಡಬಾರದು ಎಂಬ ಸದಿಚ್ಛೆಯಿಂದ ತಾವು ಮಠದಲ್ಲಿ ಉಳಿದುಕೊಂಡು ಶಿವಾನಂದ ಸ್ವಾಮಿಗಳನ್ನು ಸಂಚಾರಕ್ಕೆ ಕಳುಹಿಸುವ ವ್ಯವಸ್ಥೆ ಮಾಡಿದರು.

ಆದರೆ ಸಂಚಾರಕ್ಕೆ ತೆರಳಿದ ಶಿವಾನಂದ ಸ್ವಾಮಿಗಳು ಭಕ್ತ ಬಾಂಧವರಿಗೆ ಹಾಗು ಹಲವಾರು ಶಾಖಾ ಮಠಗಳ ವ್ಯವಸ್ಥಾಪಕರಿಗೆ ಅಷ್ಟೊಂದು ಪ್ರಿಯವಾಗಲಿಲ್ಲ. ಭಕ್ತಾದಿಗಳಿಂದ ಪುರಸ್ಕಾರ ದೊರೆಯದೇ ಸಂಚಾರ ಸಫಲಗೊಳ್ಳದೇ ತಮ್ಮ ಸಂಚಾರವನ್ನು ಮಧ್ಯದಲ್ಲಿಯೇ ನಿಲ್ಲಿಸಿ, ಮರಳಿ ಅರಭಾವಿ ಮಠಕ್ಕೆ ಆಗಮಿಸಿ, ಮಹಾಂತಸ್ವಾಮಿಗಳಿಗೆ ಸಕಲ ವೃತ್ತಾಂತವನ್ನು ನಿವೇದಿಸಿಕೊಂಡು ತಮ್ಮಿಂದ ಸಂಚಾರಕಾರ್ಯ ಯಶಸ್ವಿಯಾಗಲಾರದೆಂದು ತಿಳಿಸಿದರು. ಆಗ ಅಪ್ಪನವರು ಅನಿವಾರ್ಯವೆಂದು ಮತ್ತೆ ಸಕಲ ಸರಂಜಾಮು ಸಿದ್ಧತೆಗಳಿಂದ ಶಿವಾನಂದಸ್ವಾಮಿಗಳ ಸಂಗಡ ಸಂಚಾರ ಕೈಕೊಂಡರು. ಪ್ರತಿಯೊಂದು ಗ್ರಾಮಗಳಲ್ಲಿ, ಮಠ ಮಾನ್ಯದ ವ್ಯವಸ್ಥಾಪಕರಿಗೆ ಗ್ರಾಮ ಪ್ರಮುಖರಿಗೆ, ನಿಷ್ಠಾವಂತ ಭಕ್ತ ಮಹಾಶಯರಿಗೆ ಶಿವಾನಂದಸ್ವಾಮಿಗಳ

ಪರಿಚಯು ಮಾಡಿಕೊಡುತ್ತ ನಮ್ಮೊಡನೆ ಯಾವ ರೀತಿ ಸಹಕಾರ, ಭಕ್ತಿ, ಶ್ರದ್ಧೆಗಳಿಂದ ವರ್ತಿಸುತ್ತಿರುವಿರೋ ಅದೇ ರೀತಿ ಶಿವಾನಂದಸ್ವಾಮಿಗಳೊಡನೆ ನಡೆದುಕೊಂಡು ಶ್ರೀ ದುರದುಂಡೇಶನ ಕೃಪೆಗೆ ಪಾತ್ರರಾಗಬೇಕೆಂದು ಹಲ ವಾರು ತರಹದ ಹಿತಬೋಧೆಗಳನ್ನು ನೀಡಿ ಶಿವಾನಂದಸ್ವಾಮಿಗಳಿಗೆ ಯಾವ ಯಾವ ತರದ ತೊಂದರೆ ಬಾರದಂತೆ ವ್ಯವಸ್ಥೆ ಮಾಡಿದರು. ಆತ್ಮೀಯ ಗುಣನಿಧಿ ಎನಿಸಿದ ಅಪ್ಪನವರ ನಿರ್ಮಲ, ನಿರ್ವಿಕಾರ, ಮನೋದಾರ್ಢ್ಯತೆಗೆ ಭಕ್ತ ಬಳಗವು ಬೆರಗಾಗಿ, ತಮ್ಮಂತೆ ಪರರ ಬಗೆದೊಡೆ ಕೈಲಾಸ ಬಿನ್ನಹ ದೊರೆಯದಿರದೆಂಬ ಪಾಠ ಕಲಿಯುವವರಾದರು. ಅಲ್ಲದೇ ಅನೇಕ ಪ್ರಮುಖ ಭಕ್ತರಿಗೆ ಆತ್ಮೀಯತೆಯಿಂದ ಮುಂದೆ ಕರೆದು ಇನ್ನು ಮೇಲೆ ಇವರೇ ನಿಮ್ಮೆಲ್ಲರ ಮೆಚ್ಚಿನ ಸ್ವಾಮಿಗಳು, ಇವರಲ್ಲಿ ನಿಮ್ಮ ಭಕ್ತಿ, ವಿಶ್ವಾಸಗಳು ಅನಂತವಾಗಿ, ಅಖಂಡವಾಗಿ ಮುಂದುವರೆಯುವಂತೆ ನಡೆದುಕೊಳ್ಳಿರಿ ಎಂದು ಭಕ್ತರಲ್ಲಿ ಶಿವಾನಂದಸ್ವಾಮಿಗಳ ಬಗ್ಗೆ ಭಕ್ತಿಯ ಬೀಜವನ್ನು ಬಿತ್ತಿ, ಸಂಚಾರ ವನ್ನು ಸುಗಮ ರೀತಿಯಿಂದ ಮುಗಿಸಿಕೊಂಡು ಮರಳಿ ಬರುವಾಗ ಮಾರ್ಗದಲ್ಲಿ ಅನೇಕ ಭಕ್ತ ಬಳಗವು ಅಪ್ಪನವರ ದರ್ಶನ ದೊರೆಯುವದು, ಆಶೀರ್ವಾದ ಸಿಕ್ಕುವದು ಎಂಬ ಇಚ್ಛೆಯಿಂದ ಗೂಗಿ ಕೊಳ್ಳದಲ್ಲಿ ಕಾಯ್ದು ಕೊಂಡಿದ್ದರು. ಮಹಾಂತಸ್ವಾಮಿಗಳು ಶಿವಾನಂದಸ್ವಾಮಿಗಳೊಡನೆ ಗೂಗಿ ಕೊಳ್ಳಕ್ಕೆ ಬಂದು ಭಕ್ತರೆಲ್ಲರನ್ನು ಆಶೀರ್ವದಿಸಿ ಕಳುಹಿಸಿದರು. ಮತ್ತು ಶಿವಾನಂದಸ್ವಾಮಿಗಳು ಸಕಲ ಸನ್ನಾಹದೊಂದಿಗೆ ಅರಭಾವಿ ಮೂಲ ಮಠಕ್ಕೆ ದಯಮಾಡಿಸುವದಾಗಲೆಂದು ತಿಳುಹಿಸಿ, ತಾವು ಮಹಾದೇವನ ಇಚ್ಛಾ ತೃಪ್ತಿಗಾಗಿ ಮೂಲ ದುರದುಂಡೀಶ್ವರ ತಪಸ್ವಿಗಳ ಕರ್ತೃ ಗದ್ದುಗೆಯನ್ನು ಸ್ಥಾಪಿಸಿದ ಹಳ್ಳದ ಗದ್ದುಗೆಯ ಬಳಿಗೆ ದಯಮಾಡಿಸುವವರಾದರು.

ಈ ಹಳ್ಳದ ಗದ್ದುಗೆಯ ಸ್ಥಳವು ಅರಭಾವಿಯಿಂದ ಮೂರು ನಾಲ್ಕು ಮೈಲುಗಳಾಚೆಯಲ್ಲಿ ಒಂದು ನಿರ್ಜನ ಪ್ರದೇಶ. ಮೂಲ ದುರದುಂಡೀಶ್ವರರು ಅನುಷ್ಠಾನ ಗೈದು ತಪಸ್ಸಿದ್ಧಿಯನ್ನು ಪಡೆದುಕೊಂಡ ಜಾಗ್ರತ ಸ್ಥಳವೆನಿಸಿದ ಕಾರಣದಿಂದಲೂ ಹಳ್ಳದ ಬಳಿಯಲ್ಲಿ ಸುತ್ತಲೂ ಕಾಡು ಮೇಡುಗಳಿಂದ ಕೂಡಿ ಅನಾರೋಗ್ಯದ ಬೀಡೇನೊ ಎನ್ನುವ ತೆರದಿ ರೂಪಗೊಂಡಂತಹ ಸ್ಥಳ

ಹಲ್ಲಿ ಮಹಾಂತಸ್ವಾಮಿಗಳು ಕರ್ತೃಪುರುಷ ದುರದುಂಡೀಶನ ಸನ್ನಿಧಾನದಲ್ಲಿ ಲಿಂಗಪೂಜಾಲೋಲರಾಗಿ ತಪೋನುಷ್ಠಾನಗಳಲ್ಲಿ ಕಾಲ ಕಳೆಯಹತ್ತಿದರು.

ಇತ್ತ ಅರಭಾವಿ ಮಠದಲ್ಲಿ ಮಹಾಂತಸ್ವಾಮಿಗಳು ಇರುವದಿಲ್ಲವೆಂದು ಅರಿತು ಭಕ್ತ ಬಳಗವು ಹಳ್ಳದ ಗದ್ದುಗೆಯನ್ನು ಕುರಿತು ಶ್ರದ್ಧಾಭಕ್ತಿಯಲ್ಲಿ ಚಿರಿತು ಅಪ್ಪನವರ ದರ್ಶನಾಶೀರ್ವಾದಗಳ ಅಪೇಕ್ಷೆಯಲ್ಲಿ ಧಾವಿಸಿ ಬರ ಹತ್ತಿದರು. ಒಮ್ಮೆ ಬೈಲಹೊಂಗಲ ಹಾಗು ಗುರುಬೆಟ್ಟದ ದೇಸಾಯರು, ಮುರಗೋಡದವರಾದ ಬಾಳಪ್ಪ ವೊರಬದ ಮತ್ತಿತರ ಅಧಿಕಾರಿಗಳನೇಕರು, ಹಲವಾರು ಗ್ರಾಮ ಪ್ರಮುಖರು ಅಪ್ಪನವರ ಇರುವನ್ನು ಅರಿತು ಹಳ್ಳದ ಗದ್ದುಗೆಯ ಬಳಿ ಬಂದು, ಬುದ್ಧಿ ಇಂಥಹ ನಿರ್ಜನ ನಿಬಿಡ ಅರಣ್ಯದಲ್ಲಿ ಹಾಗು ಅನಾರೋಗ್ಯದ ಮೂಲ ಸ್ಥಳವೆನಿಸುವ ಇಲ್ಲಿ ತಾವು ವಾಸಗೈದಿರುವದು ಉಚಿತವಲ್ಲವೆಂದು ಸಾಷ್ಟಾಂಗ ಹಾಕಿ ಬಿನ್ನೈಸಿಕೊಂಡರಲ್ಲದೇ ತಮ್ಮ ಮೂಲ ಅರಭಾವಿ ಮಠದ ದುರುದುಂಡೀಶ್ವರರ ಅಧೀನಕ್ಕೊಳಪಟ್ಟ ಶಾಖಾಮಠವು ತಮಗಾಗಿ ಕಾದಿವೆ ಅಲ್ಲಿಗಾದರೂ ದಯಮಾಡಿಸುವ ಮನಸ್ಸು ಮಾಡ ಬೇಕೆಂದು ಹಟಹಿಡಿದರು.

ಆಗ ಅಪ್ಪನವರು ಸಕಲರನ್ನು ಸಂತೈಸುತ್ತ ಎಲ್ಲಿದ್ದರೇನು ಎಲ್ಲವೂ ಗುರು ದುರುದುಂಡೀಶನ ಕೃಪೆರಪ್ಪಾ ನಮ್ಮ ಲಿಂಗಪೂಜಾ ಅನುಷ್ಠಾನ ತಪೋನಿಷ್ಠೆಗಳಿಗೆ ಇದೇ ಸ್ಥಳ ಯೋಗ್ಯವೆಂದು ಅರಿಸಿಕೊಂಡಿದ್ದೇವೆ ಚಿಂತಿಸ ಬೇಡಿರೆಂದು ನಿರ್ಧಾರದಿಂದ ನುಡಿಯಹತ್ತಿದರು. ಆಗ ಮುರುಗೋಡದವ ರಾದ ಬಾಳಪ್ಪ ವೊರಬದ ಇವರು ಅಪ್ಪನವರಲ್ಲಿದ್ದ ಭಕ್ತಿಯ ಹಿರಿಗುರುತು ಎನ್ನುವಂತೆ ಬುದ್ಧಿ ಕಾಡುಪ್ರಾಣಿಗಳ ವಾಸಸ್ಥಾನ, ನಿರ್ಜನ ಪ್ರದೇಶ, ಕಾರ್ಗತ್ತಲೆಯ ಈ ಭಯಾನಕ ಸ್ಥಳದಲ್ಲಿ ಉಳಿದುಕೊಳ್ಳುವದು ಉಚಿತವಲ್ಲ. ಮುರುಗೋಡ ಶಾಖಾಮಠವಾದರೂ ಶ್ರೀ ದುರುದುಂಡೀಶನ ವರಪ್ರಸಾದ ವಲ್ಲವೇ. ಕಾರಣ ಅಲ್ಲಿಗೆ ತಾವು ದಯಮಾಡಿಸುವ ಒಪ್ಪಿಗೆ ನೀಡುವವರೆಗೆ ಏಳಲಾರೆವೆಂದು ಯಾವತ್ತು ಭಕ್ತರು ಸಾಷ್ಟಾಂಗ ನಮಸ್ಕಾರ ಹಾಕಿದರು.

ಆಗ ಸ್ವಾಮಿಗಳಿಗೆ ಭಕ್ತರ ಇಚ್ಛೆಯನ್ನು ಮೀರುವದು ದುಸ್ತರ ವಾಯಿತು. ಅನಿವಾರ್ಯವೆಂದು ಮುರುಗೋಡಕ್ಕೆ ದಯಮಾಡಿಸಲು ಒಪ್ಪಿದ

ರಾದರೂ ಈಗ ಮಠದ ಅಧಿಕಾರಿಗಳಾಗಿರುವ ಶಿವಾನಂದ ಸ್ವಾಮಿಗಳು ಮುರುಗೋಡ ಶಾಖಾ ಮಠದಲ್ಲಿ ತಮಗೆ ಉಳಿದುಕೊಳ್ಳಲು ಅಪ್ಪಣೆ ಕೊಟ್ಟರೆ ಮಾತ್ರ ದಯಮಾಡಿಸಲು ಸಾಧ್ಯವೆಂದರು.

ಬಳಿಕ ಯಾವತ್ತು ಭಕ್ತರು ಕೂಡಿ ಅರಭಾವಿಗೆ ಆಗಮಿಸಿ ಶಿವಾನಂದ ಸ್ವಾಮಿಗಳ ದರ್ಶನ ಪಡೆದು, ಅಪ್ಪನವರು ಮುರುಗೋಡ ಶಾಖಾ ಮಠಕ್ಕೆ ದಯಮಾಡಿಸಿ ಉಳಿದುಕೊಳ್ಳುವ ವಿಷಯವನ್ನು ಅರಿಕೆ ಮಾಡಿಕೊಂಡರು. ಆದರೆ ಶಿವಾನಂದಸ್ವಾಮಿಗಳು ಯಾವ ಪ್ರತೀಕಾರದ ನುಡಿಯನ್ನು ತಿಳಿಸದೇ ಒಂದೇ ಮಾತಿಗೆ ಆಗಬಹುದೆಂದು ಅಪ್ಪಣೆ ಕೊಟ್ಟರು. ಅವರ ಅಪ್ಪಣೆಯು ಪ್ರಕಾರ ಮೊರಬದ ಬಾಳಪ್ಪನವರು ಇನ್ನು ಅನೇಕ ಭಕ್ತ ಪ್ರಮುಖರು ಅಪ್ಪನವರನ್ನು ಮುರುಗೋಡ ಶಾಖಾ ಮಠಕ್ಕೆ ಕರೆದುಕೊಂಡು ಹೊರಟರು.

ಅಂತೂ ಅರಭಾವಿಯು ಅರುವಿನ ಕಣ್ಣು, ಪುಣ್ಯ ಪ್ರಕಾಶ ಮುರುಗೋಡ ಮಹಾ ಜನತೆಯು ಸೊತ್ತಾದವು. ನಿರ್ಣಯಿಸಿದ ಪ್ರಕಾರ ಮುರುಗೋಡ ಜನತೆಯು ಹಾಗೂ ಹಲವಾರು ಭಕ್ತರ ಭಕ್ತಿರಜ್ಜುವಿನಲ್ಲಿ ಬಂಧಿತರಾಗಿ ಶಿವಯೋಗಿ ಸಾಮ್ರಾಟರೆನಿಸಿದ ಮಹಾಂತಸ್ವಾಮಿಗಳು ಮುರುಗೋಡದ ಮುರುಕು ಶಾಖಾ ಮಠದತ್ತ ದಯಮಾಡಿಸಿದರು. ಶಿವಯೋಗಿಗಳು ಎಲ್ಲಿದ್ದರೇನು ಅವರು ತುಳಿದ ನೆಲ ಪಾವನ. ಜನಿಸಿದ ಭೂಮಿ ಪುಣ್ಯ ಭೂಮಿ, ಮಮತೆಯು ಮಾತುಗಾರಿಕೆಯಲ್ಲಿ ಸಹ ಅವರ ಮಹಿಮೆ ಅಡಕ ವಾಗಿರುವದನ್ನು ಜನತೆ ಅರಿತುಕೊಂಡಿತು.



## ೨೩ ನೇ ಅಧ್ಯಾಯ

### ಮುರುಗೋಡ ಶಾಖಾ ಮಠಕ್ಕೆ ಆಗಮಿಸಿದ್ದು

ಶಿವನ ಇಚ್ಛೆಯಂತೆ ಆಗುವದೆಲ್ಲವೂ ಆಗಲೇಬೇಕೆಂಬ ತತ್ವವನ್ನು ಅನುಸರಿಸುತ್ತಿದ್ದ ಶಿವಯೋಗಿಗಳು ಶಿವಾನಂದಸ್ವಾಮಿಗಳ ಒಪ್ಪಿಗೆಯಂತೆ ಹಾಗೂ ಮುರುಗೋಡ ಮಹಾಜನರ ಅಭಿಲಾಷೆಯಂತೆ ಹಳ್ಳದ ಗದ್ದುಗೆ

ಯಲ್ಲಿರುವ ತಮ್ಮ ತೀರ್ಮಾನವನ್ನು ಬದಲಿಸಿ, ಇಸ್ವಿ ಸನ್ ಹತ್ತೊಂಭತ್ತ ನೂರಾ ಇಪ್ಪತ್ತೆಂಟರಲ್ಲಿ ಮುರುಗೋಡದ ಶಾಖಾ ಮಠಕ್ಕೆ ಆಗಮಿಸಿದರು. ಭಕ್ತರ ಆಶೆಯಂತೆ ಮುರುಗೋಡಕ್ಕೆ ದಯಮಾಡಿಸಿದ ಮಹಾಂತಸ್ವಾಮಿಗಳ ಜೀವನದ ರೂಪ ರೇಷೆಗಳು ಬದಲಾದವು. ಶಿವಯೋಗಿವರೇಣ್ಯರು ಬ್ರಹ್ಮ ತೇಜಸ್ಸಿನ ಸಂಪೂರ್ಣ ಸೊತ್ತನ್ನು ಪಡೆದುಕೊಂಡವರು,ತ್ರಿಕಾಲ ಲಿಂಗಾರ್ಚನೆ ಶೈವ ಶಿವಮತ ತತ್ವಸಂಪನ್ನರು. ವೀರಶೈವ ಧರ್ಮ ಜಾಗ್ರತಿಯ ಕಾರ್ಯ ತತ್ಪರರು, ಏನೇ ಬರಲಿ, ಏನೇ ಜರುಗಲಿ ಶಿವ ಮಹೇಶ್ವರನಿಗೆ ಅರ್ಪಿತವೆಂದು ಸರ್ವಾರ್ಪಣ ಭಾವದಿಂದ ಕಾಲ ಕಳೆಯತೊಡಗಿದ್ದರು.

ಮಹಾಂತಸ್ವಾಮಿಗಳಿಗೆ ಲಿಂಗಪೂಜೆಯೊಂದೇ ಮುಖ್ಯ ಕರ್ತವ್ಯವೆನಿಸಿ ಅವರ ಕ್ರಿಯಾಚರಣೆಯಾಗಿತ್ತು. ಅವರು ಎಲ್ಲಿದ್ದರೂ ಆ ಕಾರ್ಯ ಮಾತ್ರ ಸಂಪೂರ್ಣ ಯಶಸ್ವಿಯಾಗಿ ಸಾಂಗಗೊಳ್ಳಲೆಂದು ಆಶಿಸುತ್ತಿದ್ದರೆ ವಿನಃ ಬೇರಾವ ಆಸೆ ಆಕಾಂಕ್ಷೆಗಳಿಗೆ ಒಳಗಾದವರಲ್ಲ. ಬೇರೊಂದನ್ನು ಬಯಸಿ ದವರು ಅಲ್ಲ. ಭವ್ಯವಾದ ಉನ್ನತವಾದ ಅರಭಾವಿ ಮಠದಲ್ಲಿದ್ದಾಗ್ಯೂ ಕೆ ಅಷ್ಟೇ, ಹಳ್ಳದ ಗದ್ದುಗೆಯಂಥಾ ಬೈಲು ಪ್ರದೇಶದಲ್ಲಿದ್ದಾಗ್ಯೂ ಕೆ ಅಷ್ಟೆ, ಈಗ ಮುರುಕು ಮಠವಾದ ಮುರುಗೋಡ ಶಾಖಾ ಮಠಕ್ಕೆ ಬಂದಾಗ್ಯೂ ಕೆ ಅಷ್ಟೆ. ಎಂಥ ಸ್ಥಳವಾದರೇನು, ಎಲ್ಲಿದ್ದರೇನು ಅನುಕೂಲ ಅನಾನುಕೂಲ ಯಾವದಕ್ಕೂ ಸೊಪ್ಪು ಹಾಕದೇ ನಿರ್ಲಿಪ್ತ ಮನೋಧರ್ಮದಿಂದ ಮುರು ಗೋಡ ಮಹಾ ಜನತೆಯ ಮನದಲ್ಲಿ ಭಕ್ತಿಯ ಬೀಜವನ್ನೂರಿ ಶಿವತತ್ವದ ಮಳೆಗರಿದು ಸುಸ್ವಭಾವ, ಸುಸಂಸ್ಕೃತಗಳೆಂಬ ಗೊಬ್ಬರವನ್ನುಣಿಸಿ, ಶಿವ ಮಹಾದೇವ ಮಹೇಶ್ವರನನ್ನು ಗುರುತಿಸುವಷ್ಟು ಪುಷ್ಟವಾದ ಭಕ್ತ ಬಳಗದ ಬೆಳೆಯನ್ನು ಕಾಣುವವರಾದರು. ಭಕ್ತರ ಮನವನ್ನು ಗೆದೆಯಬೇಕೆಂದು ಹೆಣಗಿದವರಲ್ಲ. ತಮ್ಮ ಹೆಚ್ಚಳವನ್ನು ಹೆಚ್ಚಿಸಿಕೊಳ್ಳುವ ಸ್ವಾರ್ಥದಾಸೆ ಯವರಲ್ಲ. ಎಲ್ಲವೂ ಲಿಂಗನಿಷ್ಠೆ, ಶಿವಯೋಗ ಸಾಮರ್ಥ್ಯದಲ್ಲಿ ಸಾಂಗವಾಗಿ ಸಾಗಿರಬೇಕೆಂದು ಬೇರೆ ಹೇಳುವಂತಿಲ್ಲ. ಅಪ್ಪನವರ ಜೀವನ ಈ ರೀತಿ ಯಾಗಿ ಮುರುಗೋಡ ಮುರುಕು ಮಠದಲ್ಲಿ ಮುಂದುವರೆಯಿತು.

ಚಿಕ್ಕ ಮಠದ ಅನಾನುಕೂಲತೆಯ ಬಗೆಗಾಗಲಿ, ತಮಗಿದ್ದ ಹಿಂದಿನ ಭವ್ಯ ವಿಶಾಲ ಮಠದ ನೆನಪಾಗಲಿ ಶಿವಯೋಗಿಗಳಲ್ಲಿ ಒಂದಿನವು ಸುಳಿಯು

ಲಿಲ್ಲ. ಬಂದ ಭಕ್ತರು ಒಂದೊಂದು ಸಾರೆ ಅಪ್ಪನವರ ಸಮ್ಮುಖದಲ್ಲಿ ಮಠ ಸಣ್ಣದಾಗುವದು, ತಮಗೆ ಅನಾನುಕೂಲವೆನಿಸುವದು ಎಂದು ಅರಿಕೆ ಮಾಡಿಕೊಂಡರೆ ಮಹಾಂತಸ್ವಾಮಿಗಳ ಶ್ರೀಮುಖದಿಂದ ಹೊರಡುವ ಸಮಾಧಾನದ ಉತ್ತರವೆಂದರೆ ನಮ್ಮ ಲಿಂಗ ಪೂಜೆಗೆ ಇದೇ ಸ್ಥಳ ಯೋಗ್ಯವಾಗಿದೆರಪ್ಪಾ ಚಿಂತಿಸುವ ಕಾರಣವಿಲ್ಲ. ಶಿವನ ಪ್ರೇರಣೆಯು ಪ್ರಕಾರ ನಮಗೆ ಎಲ್ಲವೂ ಸರಳವಾಗಿದೆ, ಸುಂದರವಾಗಿದೆ ಎಂದು ಹೇಳುವದಷ್ಟೆ ಹೊರತು ಆಶೆ ಹೆಚ್ಚಿ ಭಕ್ತರ ಮೇಲೆ ಇಲ್ಲದ ಭಾರ ಹೇರಿ ತಮ್ಮ ಸೌಖ್ಯ ಜೀವನದ ದಾರಿ ಹುಡುಕಿದವರಲ್ಲ. ಪೂಜಾ ಕೋಣೆಯಂತೂ ತಮಗೆ ಬಲು ಮೆಚ್ಚುವಂಥಾದ್ದು ಎಂದು ಹೆಮ್ಮೆಯ ಉದ್ಗಾರ ತೆಗೆಯುತ್ತಿದ್ದರು.

ಮುರುಗೋಡಕ್ಕೆ ಬಂದಮೇಲಂತೂ ಅಪ್ಪನವರ ಪೂಜಾ ವಿಧಾನಗಳಿಗೆ ಮತ್ತಷ್ಟು ಅನುಕೂಲವಾಯಿತು. ದಿನ ನಿತ್ಯ ಬೆಳಗಿನ ನಾಲ್ಕು ಘಂಟೆಗೆ ಎದ್ದು ಪ್ರಾತಃರ್ವಿಧಿಗಳನ್ನು ತೀರಿಸಿಕೊಂಡು ಲಿಂಗಪೂಜೆಗೆ ಏಕಾಂತದಲ್ಲಿ ಕುಳಿತುಕೊಳ್ಳುತ್ತಿದ್ದರು. ಬೆಳಗಿನ ಏಳು ಘಂಟೆಯುವರೆಗೆ ಪೂಜೆ ಮುಂದೆ ಒಂಭತ್ತು ಘಂಟೆಯುವರೆಗೆ ಸಹಸ್ರಗಣ ಪರಾಯಣ ಹನ್ನೊಂದು ಘಂಟೆಯುವರೆಗೆ ಶಿವಾನುಭವ ಮತ್ತೆ ಹನ್ನೆರಡರಿಂದ ಎರಡು ತಾಸುಗಳ ಕಾಲ ಸ್ನಾನ, ಪೂಜೆ, ಪಾದೋದಕ ಪ್ರಸಾದ, ಸಾಯಂಕಾಲ ಆರು ಘಂಟೆಯುವರೆಗೆ ಬಂದ ಭಕ್ತರಿಗೆ ದರ್ಶನಕೊಡುವದು, ಅವರ ಬೇಕು ಬೇಡೆಲ್ಲವನ್ನು ವಿಚಾರಿಸುತ್ತ ಅವರವರ ಇಚ್ಛೆಯು ಪ್ರಕಾರ ಆಶೀರ್ವಾದ ಕರುಣಿಸುವದು. ಮತ್ತೆ ಸಂಜೆಯು ಎಂಟು ಘಂಟೆಯುವರೆಗೆ, ನಂತರ ರಾತ್ರಿ ಹನ್ನೊಂದು ಘಂಟೆಯುವರೆಗೆ ಸ್ನಾನ, ಪೂಜೆ, ಪಾದೋದಕ ಪ್ರಸಾದಗಳು. ಹೀಗೆ ದಿನ ನಿತ್ಯ ತಪ್ಪದೇ ಕ್ರಿಯಾಚರಣೆ ಸಾಂಗವಾಗಿ ಜರುಗುವದಾಯಿತು.

ಅಪ್ಪನವರು ಮಠಕ್ಕೆ ಬಂದು ಪಾದವಿಟ್ಟ ದಿನದಿಂದ ಮುರುಗೋಡ ಮುರುಕು, ಹಾಳು ಮಠ ಪುಣ್ಯದ ತಾನವಾಯಿತು. ದಿನ ನಿತ್ಯ ದಾಸೋಹ ಕಾರ್ಯ ಸಾಗಿಯೇ ಇರುತ್ತಿತ್ತು. ಪೂಜಾರ ಗೌರವ್ವ ಎಂಬ ತಾಯಿ ನಿತ್ಯವೂ ಮಡಿಯಿಂದ ಅಡಿಗೆಯನ್ನು ಸಿದ್ಧಪಡಿಸಿ ಸ್ವಾಮಿಗಳಿಗೆ ಅರ್ಪಿತವೆಂದು ಕಳಿಸುವ ಪರಿಪಾಠವಿಟ್ಟುಕೊಂಡಿದ್ದಳು. ಅದರಂತೆ ಇನ್ನೂ

ಹಲವಾರು ಭಕ್ತ ಬಾಂಧವರು ತಮ್ಮ ತಮ್ಮ ಶಕ್ತ್ಯಾನುಸಾರ ದಿನಕ್ಕೊಬ್ಬರಂತೆ ಪ್ರಸಾದ ಕಳಿಸುವ ವ್ಯವಸ್ಥೆಯಾಯಿತು.

ಶ್ರೀ ವಾಲಿ ಬಸವಣ್ಣೆಪ್ಪನವರು, ವಾಲಿ ಗುರುಲಿಂಗಪ್ಪನವರು, ಎಸ್. ಎಸ್. ಶೆಟ್ಟರ, ಶಂಕ್ರಯ್ಯಸ್ವಾಮಿಗಳು, ಮಲ್ಲಯ್ಯನವರು, ರಾಚಯ್ಯ ಸ್ವಾಮಿಗಳು ಮುಪ್ಪಯ್ಯನಮಠ, ವಿರುಪಾಕ್ಷಪ್ಪನವರು ಕುಬಸದ, ಬಾಳಪ್ಪ ನವರು ಹುಕ್ಕೇರಿ ಮೊದಲಾದ ಮಹನೀಯರು ಸ್ವಾಮಿಗಳಿಗೆ ಪ್ರಸಾದ ವೆಂದು ಕಳಿಸುವ ಪದ್ಧತಿಯನ್ನು ಅನುಸರಿಸಿಕೊಂಡು ಬರುವವರಾದರು. ಈ ಪದ್ಧತಿಯು ಈಗಲೂ ತಪ್ಪಿಲ್ಲ

ಮಹಾಂತಸ್ವಾಮಿಗಳು ಅದೇ ಮೊದಲು ಮುರಗೋಡ ಮಠಕ್ಕೆ ದಯಮಾಡಿಸಿದಾಗ ಅವರ ನೆಚ್ಚಿನ ಶಿಷ್ಯರಾದ ಸಿದ್ಧಲಿಂಗಯ್ಯ ಎಂಬುವವರು ಊರಲ್ಲಿ ಹಿಟ್ಟಿನ ಭಿಕ್ಷೆಗೆ ಹೋಗಿಬರುತ್ತಿದ್ದರು. ಅವರು ತರುವ ಹಿಟ್ಟು ನಿತ್ಯ ದಾಸೋಹಕ್ಕೆ ಉಪಯೋಗಿಸಿ, ದಾಸೋಹ ಧರ್ಮವನ್ನು ಕಾಪಾಡಿ ಕೊಂಡು ಅಪ್ಪನವರು ಪರಹಿತಾಪೇಕ್ಷೆಯುಳ್ಳವರಾದರು. ಅಪ್ಪನವರ ಜೀವನದ ಹತ್ತು ವರ್ಷಗಳು ಒಂದು ತೆರನಾದರೆ, ಹದಿನೈದು ವರ್ಷಗಳು ಇನ್ನೊಂದು ತೆರನಾಗಿ, ಇಪ್ಪತ್ತು ವರ್ಷಗಳು ಮತ್ತೊಂದು ತೆರನಾಗಿ ಮಾರ್ಪಟ್ಟು ಮುಂದುವರೆದವು.

ಮುರುಗೋಡ ಮುರುಕು, ಹಾಳು ಮಠವಲ್ಲಿ ಉಳಿದ ಅಪ್ಪನವರು ತಮ್ಮ ನಿತ್ಯ ಕರ್ತವ್ಯ ಕ್ರಿಯಾಚರಣೆ, ಲಿಂಗನಿಷ್ಠೆ, ಯೋಗಸಾಧನೆ, ಶಿವ ಯೋಗ ಸಾಮರ್ಥ್ಯದ ಸಮರ್ಥನೆಯನ್ನು ಮರೆಯದಲೇ ಪಾಲಿಸಿ ಮುರು ಗೋಡ ಜನತೆಗಷ್ಟೇ ಅಲ್ಲ ಕರ್ನಾಟಕ ಇತಿಹಾಸದಲ್ಲಿಯೇ ಧರ್ಮಜಾಗ್ರ ತಿಯ ಹೊಂಬೆಳಕು ಚೆಲ್ಲಿದ ಮಹಾತ್ಮರಾಗಿದ್ದಾರೆ. ಶಿವಯೋಗಿ ಸಾಮ್ರಾಟರಾಗಿದ್ದಾರೆ, ಗುರು ವಿರಕ್ತ ಮಠಗಳೆರಡರ ಸ್ವಾಮಿ ಸಾರ್ವಭೌಮ ರಾಗಿದ್ದಾರೆ. ಆದ್ದರಿಂದ ಬರುಬರುತ್ತ ಮುರುಗೋಡ ಮಠಕ್ಕೆ ಭಕ್ತಜನತೆ ಬರುವದು ಹೆಚ್ಚಾಗುತ್ತ ಸಮಾರಂಭ, ಸಭೆ, ಸಮ್ಮೇಲನಗಳು ಎಡಬಿಡದೇ ಸಾಗಿ ಪುರಾಣ, ಪ್ರವಚನ, ಕೀರ್ತನೆ, ಸಂಗೀತ ಕಛೇರಿ, ಶಿವಾನುಭವ ಗೋಷ್ಠಿಯಲ್ಲಿ ಮಕ್ಕಳಾದಿಯಾಗಿ ಮುದುಕರು ಸಹ ಹುರುಪು ಹುಮ್ಮಸ ಗಳಲ್ಲಿ ಕಾರ್ಯಪ್ರವರ್ತರಾಗಿದ್ದಾರೆ.

ಸಭೆ ಸಮ್ಮೆಲನಗಳು, ಕೀರ್ತನ, ಪ್ರವಚನ, ಪುರಾಣ ಪುಣ್ಯ ಕಾರ್ಯಗಳು ದಿನೇ ದಿನೇ ವೃದ್ಧಿಗೊಂಡು ಮುರುಗೋಡ ಪಾಳು ಬಿದ್ದ ಸಣ್ಣ ಮಠ ಸಾಲದಾಯಿತು. ಒಂದೊಂದು ಸಮಯ ನಿಲ್ಲುವದಕ್ಕೂ ಸ್ಥಳ ಸಿಗದಷ್ಟು ಜನಸಂದಣಿ ಸೇರುತ್ತ ಬಹಳ ತೊಂದರೆಯಾಗಹತ್ತಿತ್ತು.

ಇಷ್ಟು ಸನ್ ೧೯೨೪ರಿಂದ ಅಂದರೆ ಮಹಾಂತಸ್ವಾಮಿಗಳು ಆರಭಾವಿ ಮಠದ ಸಮೀಪದಲ್ಲಿದ್ದ ಹಳ್ಳದಗದ್ದುಗೆಯಿಂದ ಮುರುಗೋಡ ಮಠಕ್ಕೆ ಬಂದಾಗಿನಿಂದ ೧೯೫೭ರ ವರೆಗೆ ಸತತವಾಗಿ ಇಪ್ಪತ್ತಮೂರು ವರುಷಗಳ ಕಾಲ ಹೊಸದಾಗಿ ಭವ್ಯವಾದ ಮಠ ಕಟ್ಟಿಸಬೇಕೆಂದು ಭಕ್ತರು ತವಕಿಸುತ್ತಿದ್ದವರು ಸಮಯ ಸಿಕ್ಕಾಗೊಮ್ಮೆ ಅಪ್ಪನವರಲ್ಲಿ ಬಿನ್ನೈಸಿಕೊಳ್ಳುವದು ನಡೆದೇ ಇತ್ತು.

ಆದರೆ ಅಪ್ಪನವರು ನಮಗೇಕೆ ಬೇಕರೆಪ್ಪಾ ಭವ್ಯವಾದ ಮಠ. ನಮ್ಮ ಶಿವಪೂಜೆಗೆ ಈ ಚಿಕ್ಕ ಮಠವೇ ಸಾಕು ಎಂದು ಹೇಳುತ್ತಿದ್ದರು.

ಇತ್ತ ಭಕ್ತರು ನೋಡಿದರೆ ಭವ್ಯವಾದ ರೀತಿಯಲ್ಲಿ ಈಗಿರುವ ಚಿಕ್ಕ ಮಠವನ್ನು ಬಿಚ್ಚಿ ಕಟ್ಟಿಸಬೇಕೆಂದು ನಾ ಮುಂದೆ, ನೀ ಮುಂದೆ ಎಂದು ಅಪ್ಪನವರ ಅಪ್ಪಣೆಗಾಗಿ ಕಾಯುವವರಾಗಿದ್ದಾರೆ. ಆದರೆ ಕಾಲ ಕೂಡಿ ಬರಬೇಕಲ್ಲಾ.

ಭಕ್ತರಾದರೂ ತಮ್ಮ ತಮ್ಮಲ್ಲಿ ವಿಚಾರಮಾಡುತ್ತ ವೈಭವಪೂರ್ಣವಾದ ಪೂರ್ವ ಪರಂಪರೆಯ ಆರಭಾವಿಯ ಮೂಲ ಮಠವನ್ನೇ ಮರೆತು ಲಿಂಗಪೂಜೆಯೊಂದೇ ತಮ್ಮ ಮೂಲ ಗುರಿಯೆಂದು ತಿಳಿದು ಬಂದಿರುವ ಸ್ವಾಮಿಗಳು ಆಸೆಯುವರಲ್ಲ ಹೀಗಿರುವಾಗ ನಮ್ಮ ಈ ವ್ಯಾಮೋಹ ಸಾಗದೆಂದು ಅಪ್ಪನವರ ಅಪ್ಪಣೆಯ ದಾರಿ ಕಾಯುವವರಾದರು.

ಹೀಗಿರುವಾಗ ಪ್ರತಿ ವರ್ಷದಂತೆ, ಸ್ವಾಮಿಗಳು ಹಾಕಿಕೊಟ್ಟ ಪರಿಪಾಠದಂತೆ ಪುರಾಣ, ಪ್ರವಚನಗಳು ನಡೆದುಬಂದಿವೆ. ನಾನಾ ಭಾಗದ ವಿದ್ವಾಂಸರು, ಪಂಡಿತ ಶಿರೋಮಣಿಗಳು, ಪುರಾಣ ಪ್ರವಚನಕಾರರು ಆಗಮಿಸಿದ್ದಾರೆ. ಪಂಡಿತೋತ್ತಮರಲ್ಲಿ ಅಗ್ರಸ್ಥಾನ ಪಡೆದ ವೈದ್ಯ ಭೂಷಣ ಶ್ರೀ ಶರಣ

ಬಸವೇಶ್ವರ ಪುರಾಣ ಬರೆದ ಪಂಡಿತ ಶ್ರೀ ಕಲ್ಲಿನಾಥ ಶಾಸ್ತ್ರಿಗಳು, ಕವಿಗಳಲ್ಲಿ ರತ್ನಪ್ರಾಯ ಎನಿಸಿದ ಕವಿ ಕಲಾನಿಧಿಗಳು ಪುರಾಣ ಹೇಳುವದಕ್ಕಾಗಿ ಬಂದಿದ್ದಾರೆ. ಅವರ ವಾಕ್‌ವೈಖರಿಯಿಂದ ಬರುವ ರಸವತ್ತಾದ ಪುರಾಣವನ್ನು ಕೇಳಿ ಮನಸಾನಂದ ಹೊಂದಬಯಸಿ ಬಂದ ಜನಸಂದಣಿಯನ್ನು ಕಂಡರೆ ಅಚ್ಚರಿಯಾಗದಿರದು. ಕಾಲು ಇಡಲಿಕ್ಕೆ ಸ್ಥಳ ಸಿಗದ ರೀತಿಯಲ್ಲಿ ಭಕ್ತ ಬಳಗ ಸೇರಿದೆ. ಮಠದ ಹೊರಗು ಒಳಗು ಸುತ್ತಲು ಎದುರುಗಡೆಯ ಹಲವಾರು ಮನೆಗಳ ಮಾಳಿಗೆಯ ಮೇಲೂ ಜನ ಕಿಕ್ಕಿರಿದು ಕೂಡಿದೆ. ಇಂಥಹ ಸಮಯದಲ್ಲಿ ಶ್ರೀ ಕಲ್ಲಿನಾಥಶಾಸ್ತ್ರಿ ಕವಿಪುಂಗವರು ಭಕ್ತರ ಮನದಾಳದಲ್ಲಿ ಸುಪ್ತಾವಸ್ಥೆಯಲ್ಲಿದ್ದ ಹೊಸ ಮತ್ತು ಭವ್ಯವಾದ ಮಠ ಕಟ್ಟಿಸುವ ಆಸೆಗೆ ಪುಟಕೊಟ್ಟಂತೆ ತಮ್ಮ ಅಸ್ಖಲಿತವಾಣಿಯಿಂದ ಭಕ್ತರನ್ನು ಎಚ್ಚರಿಸುವವರಾಗಿದ್ದಾರೆ. ಶ್ರೀ ಕಲ್ಲಿನಾಥ ಶಾಸ್ತ್ರಿಗಳವರ ಸ್ಪಷ್ಟವಾಣಿಯಿಂದ ಭಕ್ತರಿಗೆ ಹುರುಪು ತುಂಬಿದಂತಾಗಿ ಮಠ ಕಟ್ಟಿಸುವ ತಮ್ಮ ಸಾಹಸ ಪ್ರಯತ್ನಕ್ಕೆ ನಾಂದಿಯಾದಂತಾಯಿತು.

ಆದರೆ ಅಪ್ಪನವರ ಅಪ್ಪಣೆ ದೊರೆಯಬೇಕಲ್ಲ, ಪ್ರಸಂಗವಶಾತ್ ಈ ವಿಷಯ ತೆಗೆಯಬೇಕು, ಅಪ್ಪನವರಲ್ಲಿ ಬಿನ್ನೈಸಿಕೊಳ್ಳಬೇಕೆಂದು ಕಾಯುತ್ತಿರಲು ಮುಂದೆ ಕೆಲವು ದಿನಗಳ ತರುವಾಯ ಮಹಾಂತಸ್ವಾಮಿಗಳು ಯಮನಕಮರಡಿ ಭಕ್ತರೊಬ್ಬರ ಬಿನ್ನಹದ ಮೇರೆಗೆ ದಯಮಾಡಿಸುವವರಾದರು.

ಇದೇ ಸಮಯವನ್ನು ಎದುರುನೋಡುತ್ತಿದ್ದ ಹಲವಾರು ಭಕ್ತರು ಮಠದ ಗೋಡೆಯ ಕೆಲಭಾಗವನ್ನು ನೆಪಮಾತ್ರಕ್ಕೆ ಕೆಡವಿ ಯಮಕನಮರಡಿಗೆ ಹೋಗಿ ಬಿದ್ದಿರುವ ಗೋಡೆಯನ್ನು ಕಟ್ಟಿಸುವದಕ್ಕೆ ಅಪ್ಪಣೆಯನ್ನು ದಯಪಾಲಿಸುವದಾಗ ಬೇಕೆಂದು ಬಿನ್ನೈಸಿಕೊಂಡರು.

ಆಗ ಸ್ವಾಮಿಗಳು ಗೋಡೆಯನ್ನು ಕಟ್ಟಿಸಲು ಒಪ್ಪಿಗೆಯನ್ನಿತ್ತರೆ ವಿನಹ ಸಂಪೂರ್ಣ ಮಠದ ರೂಪ ರೇಷೆಗಳನ್ನು ಬದಲಿಸುವದಕ್ಕಲ್ಲ.

ಆದರೂ ಅಪ್ಪನವರು ಯಮಕನಮರಡಿಯಿಂದ ಪೂಜಾನುಷ್ಠಾನ ಮುಗಿಸಿಕೊಂಡು ಮರಳಿ ಬರುವಷ್ಟರಲ್ಲಿ ಹುರುಪುಗೊಂಡ ಭಕ್ತರೆಲ್ಲರೂ ಸೇರಿ

ಬಿದ್ದ ಒಂದು ಗೋಡೆಯೊಡನೆ ಸಂಪೂರ್ಣ ಹಳೆಯ ಮಠವನ್ನು ಬಿಚ್ಚಿಸಿ ವಿಸ್ತಾರವಾದ, ಭವ್ಯವಾದ, ಸುಂದರ ಮಠ ಕಟ್ಟಿಸಲು ಸನ್ನಾಹ ಸಿದ್ಧಗೊಳಿಸಿ ಸನ್ನದ್ಧರಾದ ಭಕ್ತರ ಉತ್ಸಹ ಆಶೆ ಆಕಾಂಕ್ಷೆಗಳ ಮುಂದೆ ಅಪ್ಪನವರು ತೆಪ್ಪಗಾಗಿ ಒಪ್ಪಿಗೆಯ ಆಶೀರ್ವಾದವೆಂದು ಮೌನವಾಗಿ ಉಳಿದುಕೊಂಡರು. ಭಕ್ತರ ಭಕ್ತಿಯ ಪಾಶದಲ್ಲಿ ಬಂಧಿತರಾದ ಅಪ್ಪನವರಿಗೆ ಈಗ ಏನು ಹೇಳುವದಕ್ಕೂ ಸಾಧ್ಯವಾಗಲಿಲ್ಲ ನಿಮ್ಮಿಚ್ಛೆಯಂತೆ ಮಾಡಿರಿಪ್ಪಾ ಶಿವನಿಚ್ಛೆಯೇ ಹೀಗಿರುವಾಗ ನಿಮ್ಮೆಲ್ಲರ ಆಶೆಗೆ ನಾವೇಕೆ ಅಡ್ಡ ಬರುವದು ಎಂದು ನುಡಿದು ಸುಮ್ಮನಾದರು.

ಭಕ್ತರಿಗೆ ಇಷ್ಟೇ ಬೇಕಾಗಿತ್ತು, ಹುರುಪು ಹುಮ್ಮಸ ತುಂಬಿದವರಾಗಿ ಮಠ ಕಟ್ಟಿಸಲು ಸಿದ್ಧರಾಗಿದ್ದಾರೆ. ಆದರೆ ಮಠವನ್ನು ಯಾವ ರೀತಿಯ ಮಾದರಿಯಲ್ಲಿ ಕಟ್ಟಿಸಬೇಕೆನ್ನುವ ಪ್ರಶ್ನೆ ಬಂದಾಗ ಅಳ್ನಾವರದ ಗೌಡರು ಮಠಕ್ಕೆ ಬೇಕಾಗುವಷ್ಟು ಕಟ್ಟಿಗೆಯನ್ನು ಕೊಡಿಸುವ ಮಾತು ಕೊಟ್ಟರು. ಹಲವಾರು ಜನರು ಇಚ್ಛಾನುಸಾರವಾಗಿ ಸಹಾಯ-ಸಹಕಾರಗಳನ್ನು ತೋರುವವರಾದರು. ಹೊಸ ಮಾದರಿಯ ವಿಸ್ತಾರವಾದ ಭವ್ಯ ಸುಂದರ ಮಠ ಕಟ್ಟಬೇಕೆಂದು ಸರ್ವಾನುಮತದಿಂದ ತೀರ್ಮಾನವಾಗಿ ಕಲ್ಲು, ಗಚ್ಚು, ಸಿಮೆಂಟು, ಕಬ್ಬಿಣದಿಂದ ಕೂಡಿದ ಶ್ರೇಷ್ಠ ಮಠವಾಗಲೆಂದು ಹಾರೈಸಿ ಸಿದ್ಧತೆ ನಡೆಯಿಸುವವರಾದರು. ಯೋಜನೆಯ ಪ್ರಕಾರ ಯಾರೋ ಸಿಮೆಂಟ ಕೊಡಿಸಿದರು, ಯಾರೋ ಕಬ್ಬಿಣ ತಂದರು, ಮತ್ತಾರೋ ಕಲ್ಲಿನ ದಾಸ್ತಾನು ಮಾಡಿಸಿದರು. ಆದರೆ, ಮೊದಲಿನ ಮಠದ ಸ್ಥಳ ಸಣ್ಣದಾಗುವದು, ವಿಶಾಲ ವಿಸ್ತಾರವಾದ ಮಠ ಕಟ್ಟುವದು ಹೇಗೆ ಎಂದು ಆಲೋಚಿಸುತ್ತಿರಲು, ಮಠದ ಸುತ್ತಲಿನ ಸ್ಥಳದ ಮಾಲಿಕರೆನಿಸಿದ ವೀರಭದ್ರಪ್ಪ ದೇಸಾಯಿ ಇವರು ತಮ್ಮ ಸ್ಥಳವನ್ನು ಮಠಕ್ಕೆ ದಾನ ರೂಪದಲ್ಲಿ ಬಿಟ್ಟುಕೊಟ್ಟರು. ಮಠದ ಸೇವಾ ಭಾಗ್ಯ ನಮ್ಮದಾಗಲಿ ಎಂಬ ಉದಾತ್ತ ಭಾವನೆಯಿಂದ ಮುರುಗೋಡದ ಮಹಾ ಜನತೆ ಹರುಷದಿಂದ ಏನೆಲ್ಲವನ್ನು ಅರ್ಪಿಸಲು, ಸೇವೆ ಮಾಡಲು ಸಿದ್ಧರಾಗಿ ಮುಂದೆ ಬಂದರು. ಮಠದ ಸುತ್ತಲಿನ ಭಕ್ತರು ತಮ್ಮ ತಮ್ಮ ಸ್ಥಳಗಳನ್ನು ದಾನರೂಪದಲ್ಲಿ ಸೇರಿಸಿಬಿಟ್ಟರು.

ಗಾಣಿಗರ ಗಂಗಪ್ಪ ತನ್ನ ಎರಡು ಕೋಣಗಳನ್ನು, ಎರಡು ಆಳುಗಳನ್ನು ಕಟ್ಟಡಕ್ಕೆ ಬೇಕಾಗುವ ಗಚ್ಚು ಸಿದ್ಧಪಡಿಸಲು ಸತತ ಐದು ವರುಷಗಳ ಪರಿಯಂತರ ಬಿಟ್ಟುಬಿಟ್ಟಿದ್ದನು. ಭಕ್ತ ಸಮೂಹವೆಲ್ಲ ಹೀಗೆ ಒಬ್ಬೊಬ್ಬರು ಒಂದೊಂದು ಕಾರ್ಯಕ್ಷೇತ್ರದಲ್ಲಿ ದುಡಿಯುತ್ತ ಕಟ್ಟಡ ರೂಪುಗೊಳ್ಳುತ್ತಿರು ವಾಗ ಅಪ್ಪನವರು ಬಂದು ನೋಡುತ್ತ ಎಲ್ಲವೂ ಶಿವನ ಇಚ್ಛೆ ಎಂದು ಹಸನ್ಮುಖದಿಂದ ಆಶೀರ್ವಾದ ನೀಡುವವರಾದರು.

ಸುತ್ತಲಿನ ಕಟ್ಟಡವೆಲ್ಲವೂ ನಿರ್ಮಾಣವಾಗಿದೆ, ಇನ್ನು ಕಟ್ಟಡದ ಮೇಲ್ ಹೊದಿಕೆಯು ಕಾಂಕ್ರೀಟ್ ಹಾಕುವ ಕಾರ್ಯಮಾತ್ರ ಉಳಿದಿದೆ. ಭಕ್ತರೆಲ್ಲರು ಹುರುಪು ಹುಮ್ಮಸದಿಂದ ಮಾಳಿಗೆ ಹಾಕಬೇಕೆಂದು ಮೂರು ನೂರು ಚೀಲ ಸಿಮೆಂಟ ಕಲಸಿ ಸಿದ್ಧಗೊಳಿಸಿದ್ದಾರೆ. ಅಷ್ಟರಲ್ಲಿ ಆಕಾಶ ಅದುರುವಂದದಿ ಗುಡುಗು, ಸಿಡಿಲು, ಕೋಲ್ಮಿಂಚುಗಳಿಂದ ಕೂಡಿದ ಕರಿಯ ಮೋಡ ಕಾಣಿಸಿಕೊಂಡು ಭಕ್ತ ಬಳಗವನ್ನು ಗಾಭರಿಗೊಳಿಸಿದೆ, ಅಷ್ಟೇ ಅಲ್ಲ ಮೂರು ನೂರು ಚೀಲ ಸಿಮೆಂಟ ಹಾಳಾಗುವದಲ್ಲಾ ಎಂಬ ಭಯವನ್ನು ಹುಟ್ಟಿಸಿ ಮಳೆರಾಯ ತನ್ನ ಕರಾಳಛಾಯೆ ಚಿಮ್ಮಿ ರೂಪಗೊಂಡನು.



## ೨೪ ನೇ ಅಧ್ಯಾಯ

### ಸ್ವಾಮಿಗಳ ತೇಜೋಬಲದ ಮುಂದೆ ಬೆದರಿದನು ಮಳೆರಾಯ

ಇಂತಿರ್ಪ ಸಮಯದಲ್ಲಿ ಮಹಾಂತಸ್ವಾಮಿಗಳು ಲಿಂಗಪೂಜೆಗೆ ಕುಳಿತು ಕೊಂಡಿದ್ದಾರೆ. ಭಕ್ತಸಮೂಹ ಭಯಮಿಶ್ರಿತರಾಗಿ ಕಾರ್ಯದಲ್ಲಿ ಹಿಂಜರಿ ಯುತ್ತಿದ್ದಾರೆ. ಸ್ವಲ್ಪ ಸಮಯದಲ್ಲಿ ಅಪ್ಪನವರು ಲಿಂಗಾರ್ಚನೆ ಮುಗಿಸಿ ಕೊಂಡು ಹೊರಗೆ ಬಂದು ಭಕ್ತರ ಮನದ ದುಗುಡವನ್ನು ಗುರ್ತಿಸಿದರು.

ಭಕ್ತ ಬಳಗವೆಲ್ಲ ಮಳೆ ಬಂದರೆ ಹೇಳತೀರದಷ್ಟು ಹಾನಿಯಾಗುವದೆಂಬ ಹೆದರಿಕೆಯಿಂದ ಅಪ್ಪನವರ ಪಾದಕ್ಕೆ ಸ ಷ್ಟಾಂಗ ಹಾಕಿ ಬಂದಿರುವ ತೊಂದರೆ

ಯನ್ನು ಅರಿಕೆ ಮಾಡಿಕೊಳ್ಳುವವರಾಗಿದ್ದಾರೆ. ಸ್ವಾಮಿಗಳಾದರೂ ಮೋಡದತ್ತ ಮುಖ ಮೇಲೆತ್ತಿ ನೋಡುತ್ತ ನಿಂತವರಾಗಿದ್ದರು.

ಇನ್ನೇನು ಕ್ಷಣಕಾಲದಲ್ಲಿ ಮಳೆರಾಯನ ಆಗಮನ ಇಳೆಯಲ್ಲಿ ಖಂಡಿತ. ಕಲಸಿದ ಸಿಮೆಂಟಿಗೆ ಉಳುವಿಲ್ಲವೆಂದು ಭಕ್ತರೆಲ್ಲರು ಉಸುರುಗರೆದು ನೋಡುತ್ತಿದ್ದಾರೆ. ಆದರೆ, ಮಳೆ ಬಾರದಿರಲೆಂದು ಹಾರೈಸುವಂತಿಲ್ಲ. ಯಾಕಂದರೆ ಬಿತ್ತನೆಯ ಕಾರ್ಯ ಸುರುವಾಗುವ ಕಾಲವಿದು, ಮಳೆ ಬಂದರೆ ಮಠಕ್ಕಾಗಿ ಸಿದ್ಧಪಡಿಸಿದ ಸಿಮೆಂಟ ಹಾಳಾಗುವದು. ಬಾರದಿದ್ದರೆ ಬಿತ್ತಿಗೆಯ ಕಾರ್ಯಕ್ಕೆ ತಡೆಯುಂಟಾಗುವದು. ಅಂತೂ ಧರ್ಮಸಂಕಟದ ಪ್ರಸಂಗ ಇದು. ಈ ಪ್ರಸಂಗದಲ್ಲಿ ಶಿವಯೋಗಿವರೇಣ್ಯರೇ ಏನು ಮಾಡುತ್ತಾರೋ ಮಾಡಲೆಂದು ಚಿಂತೆಯ ಚಿತೆಯಲ್ಲಿ ಬೆಂದು ಬಸವಳಿದವರಾಗಿದ್ದಾರೆ ಭಕ್ತ ಬಳಗವೆಲ್ಲರು. ಆಗ ಅಪ್ಪನವರು ಭಕ್ತರ ಈ ದುಗುಡವನ್ನು ಅರಿತವರಾಗಿ ಏನ್ರೆಪ್ಪಾ ನಮ್ಮ ಮಠದ ಸಲುವಾಗಿ ಮಳೆ ಬೇಡಾ ಅಂದರೆ ನಡೆದೀತೆ ? ಒಕ್ಕಲಿಗಾ ಭೂಮಿತಾಯಿಯ ಉಡಿ ತುಂಬುವ ಆಶೆಯಲ್ಲಿರುವ ಸಮಯವಲ್ಲವೇ ಇದು. ನೀವಂತೂ ಆಶೆ ಪಟ್ಟು ಕಾರ್ಯರಂಗದಲ್ಲಿ ಇಳಿದು ಬಿಟ್ಟಿದ್ದೀರಿ, ಶಿವಶಂಕರನ ಕರುಣೆ ಇದ್ದಂತಾಗುವದು ಮುಂದಿನ ನಿಮ್ಮ ಕರ್ತವ್ಯ ಮಾಡಿರೆಂದು ಹೇಳಿದ್ದಲ್ಲದೇ ಶಿವನು ತನ್ನ ಕಾರ್ಯವನ್ನು ತನಗೆ ತಿಳಿದಂತೆ ಪೂರೈಸಿಕೊಳ್ಳಲೆಂದು ಹೇಳಿ ಅಪ್ಪಣೆ ಕೊಟ್ಟಿದಷ್ಟೇ ತಡ. ಭಕ್ತ ಬಳಗವೆಲ್ಲ ಯಾವ ಗುಡುಗು, ಸಿಡಿಲು, ಮಿಂಚು, ಮಳೆರಾಯನ ಸಂಚು ಲಕ್ಷ್ಯಕ್ಕೆ ತಾರದೇ ಹರ ಹರ ಮಹಾದೇವ ಎಂದು ದೇವ ದುಂದುಭಿಯಂತೆ ಧ್ವನಿ ತೆಗೆದು ಜಯ ಜಯಕಾರಗೈಯುತ್ತ ಮತ್ತಷ್ಟು ಉತ್ಸಾಹಭರಿತರಾಗಿ ಮಾಳಿಗೆ ಹಾಕುವ ಕಾರ್ಯ ಮಾಡುತ್ತಿದ್ದಾರೆ, ಶಿವಯೋಗಿ ಸಾಮ್ರಾಟರು ಅಲ್ಲಿಯೇ ನಿಂತಿದ್ದಾರೆ. ವರುಣದೇವನು ತನ್ನ ಕರ್ತವ್ಯ ಪಾಲನೆಯಲ್ಲಿ ಧಾರಾಕಾರವಾಗಿ ಸುರಿಯುತ್ತಿದ್ದಾನೆ. ಆದರೆ ಎಲ್ಲಿ ? ಊರು ಬಿಟ್ಟು ಮಠದ ಸ್ಥಳ ಬಿಟ್ಟು ಮೈಲಾಚೆಯ ಸುತ್ತಲೂ; ಮಳೆರಾಯನ ಹೊಡೆತಕ್ಕೆ ಹೊಲ ಗದ್ದೆಗಳು ತುಂಬಿ ಹೊಳೆಯಾಗಿ ಹರಿಯುತ್ತಿವೆ, ಗುಡ್ಡ ಗಿರಿ ಕೊಳ್ಳಗಳಿಂದ ಹೊರಸೂಸಿ ಬರುವ ಆ ನೀರಿನ ರಾಶಿಯನ್ನು ಕಂಡ ಭಕ್ತರು ನಮ್ಮ

ಜೀವನದ ಇತಿಹಾಸದಲ್ಲಿಯೇ ಇಂಥ ದೊಡ್ಡ ಮಳೆ ಬಿದ್ದ ಪ್ರಸಂಗವನ್ನು ಕಂಡಿಲ್ಲವೆಂದು ಆಚ್ಚರಿಯನ್ನು ವ್ಯಕ್ತಪಡಿಸಿದರು.

ಈಗ ಮಾಳಿಗೆಯ ಕೆಲಸ ಮುಗಿಯಿತು, ಭಕ್ತರೆಲ್ಲರು ತಮ್ಮ ಕರ್ತವ್ಯ ದಲ್ಲಿ ಗೆದ್ದವರಾಗಿ ಸಂತಸದ ಉಸುರು ಬಿಡುತ್ತ ಇಳಿದು ಬರುವವರಾಗಿದ್ದಾರೆ. ಆದರೆ ಹಾಕಿದ ಮಾಳಿಗೆ ಗಟ್ಟಿಯಾಗುವದಕ್ಕೆ ನೀರು ಕಟ್ಟುವ ಕಾರ್ಯಕ್ಕೆ ಭಕ್ತರು ಸನ್ನದ್ಧರಾಗುವ ಸಮಯಕ್ಕೆ ಸರಿಯಾಗಿ ವರುಣದೇವ ತನ್ನಸೇವೆ ಸಲ್ಲಿಸುವಂದದಿ ನೆರೆದ ಭಕ್ತರೆಲ್ಲರೂ ನೋಡುತ್ತಿರುವಂತೆ ಒಂದು ಸಣ್ಣಮಳೆ ಸೆಳಕು ಮಠದ ಮೇಲೆ, ಅಂದರೆ ಸಿಮೆಂಟಿಸಿಂದ ಸಿದ್ಧವಾದ ಮಾಳಿಗೆಯ ಮೇಲೆ ಬಂದು ನೀರು ಕಟ್ಟಿದ ತೆರದಿ ಬಂದು ನಿಂತು ಭಕ್ತರ ಕರ್ತವ್ಯವನ್ನು ಪೂರ್ಣಗೊಳಿಸಿತು.

ಇದನ್ನೆಲ್ಲ ಕಂಡ ಭಕ್ತರು ಆಶ್ಚರ್ಯ ಸಂತಸಗಳನ್ನು ವ್ಯಕ್ತಪಡಿಸುತ್ತಿರುವಾಗ ಮಹಾಂತಸ್ವಾಮಿಗಳು ನಸುನಗುತ್ತ ಎಲ್ಲರನ್ನು ಆಶೀರ್ವದಿಸಿ ಶಿವನು ನಿಮ್ಮ ಭಕ್ತಿಗೆ ಮೆಚ್ಚಿಕೊಂಡಿದ್ದಾನೆ ಎಂದು ಹೇಳಿ ಮತ್ತೆ ಪೂಜೆಗೆ ತೆರಳಿದ್ದಾರೆ. ಎಲ್ಲಿ ಕೇಳಿದರೂ ಮುರಗೋಡ ಹಾಗು ಸುತ್ತಲಿನ ಹಲವಾರು ಹಳ್ಳಿಗಳಲ್ಲಿ ಈ ಘಟನೆ ಮನೆ ಮಾತಾಯಿತು. ಕಟ್ಟು ಕತೆಯ ಕಲ್ಪನೆಯ ಪ್ರಸಂಗವಲ್ಲ ಇದು. ಶಿವಯೋಗಿಗಳ ಪವಾಡವೆಂದೇ ಹೇಳಬೇಕು. ಈಗಲೂ ಈ ಪ್ರಸಂಗ ದಲ್ಲಿ ಭಾಗಿಗಳಾಗಿದ್ದ ಭಕ್ತರು ಹರುಷ ಹುಮ್ಮಸದಿಂದ ಉತ್ಸಾಹಗೊಂಡು ಹೇಳುತ್ತಾರೆ.

ವಿಶಾಲವಾದ ಮಠವು ೧೯೫೧ ರಲ್ಲಿ ಎರಡಂತಸ್ತಿನಲ್ಲಿ ಸಿದ್ಧವಾಗಿ ಷಟಸ್ಥಲ ತತ್ವವನ್ನು ಸೂಚಿಸುವಂತೆ ಆರು ಕಮಾನುಗಳು ಸಿದ್ಧವಾಗಿ ಪ್ರತಿಯೊಂದು ಕಮಾನಿನಲ್ಲಿ ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ, ವಿಭೂತಿ, ರುದ್ರಾಕ್ಷಿ, ಮಂತ್ರ, ಹೀಗೆ ಆರು ಕಮಾನುಗಳಲ್ಲಿ ಕೆತ್ತಿ ತಯಾರಿಸಿದ್ದಾರೆ.

ಈ ರೀತಿಯಾಗಿ ಹೊಸ ಮಠವು ಸಿದ್ಧವಾದ ಬಳಿಕ ಬಲಭಾಗದ ಮೂಲೆಯಲ್ಲಿ ಮಹಾಂತಸ್ವಾಮಿಗಳು ತಮ್ಮ ಗದ್ದುಗೆಯ ಸ್ಥಾನ ನಿರ್ಮಿಸಲಿಕ್ಕೆ

ತಿಳಿಸಿದರು. ಅಲ್ಲದೇ ಸಮಾಧಿಯ ಸ್ಥಳವನ್ನು ಖಾಲಿ ಬಿಡಬಾರದೆಂಬ ಸದಿಚ್ಛೆಯಿಂದ ಅಲ್ಲಿ ಒಂದು ಟೆಂಗಿನಕಾಯಿ ಇಡುವಂತೆ ಅಪ್ಪನವರ ಅಪ್ಪಣೆ ಯಾಯಿತು. ಟೆಂಗಿನಕಾಯಿ ಇಟ್ಟು ಸಮಾಧಿಯ ಮೇಲೆ ಬಂಡೆಗಲ್ಲನ್ನಿಟ್ಟು ಸಿಮೆಂಟಿನಿಂದ ಬಂದು ಮಾಡಿಸಿದರು.

ಮುಂದೆ ಕೆಲವು ವರುಷಗಳು ಸರಿದು ಚೌಕೀ ಮಠದ ಮಡಿವಾಳ ಸ್ವಾಮಿಗಳ ಆಗಮನವಾಗಿ ಅವರು ಸಮಾಧಿಯ ಸ್ಥಳದಲ್ಲಿ ಅನುಷ್ಠಾನ ಮಾಡ ಬೇಕೆಂದು ತಮ್ಮ ಅಭಿಲಾಷೆಯನ್ನು ವ್ಯಕ್ತ ಪಡಿಸಲು ಮಹಾಂತಸ್ವಾಮಿಗಳ ಅಪ್ಪಣೆಯ ಮೇರೆಗೆ ವಡ್ಡರಿಂದ ಕಲ್ಲು ತೆಗೆಯಿಸಿ ಅವರ ಆಸೆಗೆ ಮಾರ್ಗಮಾಡಿ ಕೊಟ್ಟರು. ಒಳಗೆ ನೋಡುತ್ತಾರೆ ಗಾಳಿ ಬೆಳಕುಗಳಿಗೆ ಪ್ರವೇಶವಿಲ್ಲದೆ ಮುಚ್ಚಲ್ಪಟ್ಟ ಸ್ಥಳದಲ್ಲಿಟ್ಟ ಟೆಂಗಿನಕಾಯಿ ಎಷ್ಟೋ ವರುಷ ಗತಿಸಿದ ಮೇಲೆ ಈಗಲೂ ಮೊಳಕೆ ಒಡೆದು ಚಿಗಿತು ನಳನಳಿಸುವಂತಿರುವದನ್ನು ಕಂಡು ಎಲ್ಲರಿಗೂ ಆನಂದವಾಯಿತು. ಆನಂದಗೊಂಡವರಲ್ಲಿ ಒಬ್ಬರಾದ ಮಡಿವಾಳ ಸ್ವಾಮಿಗಳು ಹನ್ನೊಂಡು ದಿನಗಳ ಪರಿಯಂತರ ಅನುಷ್ಠಾನ ರುದ್ರಾಭಿಷೇಕ ಮುಂತಾದ ಕ್ರಿಯಾಚರಣೆಯನ್ನು ಮುಗಿಸಿದವರಾಗಿದ್ದಾರೆ.

ಹೊಸರೂಪ, ಹೊಸ ಕಳೆಯಿಂದ ನಿರ್ಮಾಣಗೊಂಡ ನೂತನ ಕಟ್ಟಡದ ಉದ್ಘಾಟನೆಯಾಗಬೇಕೆಂಬ ಬಲವಾದ ಇಚ್ಛೆಯಿಂದ ಭಕ್ತ ಮಹಾಶಯರು ಹತ್ತೊಂಭತ್ತುನೂರಾ ಐವತ್ತಾರನೆ ಇಸ್ವಿ ಎಪ್ರೀಲ ತಿಂಗಳ ಇಪ್ಪತ್ತೊಂದನೆ ತಾರೀಖಿನ ದಿವಸ ಚಿತ್ರಕಲ್ಲ ಜಗದ್ಗುರು ಜಯವಿಭವ ಮುರುಘರಾಜೇಂದ್ರ ಮಹಾಸ್ವಾಮಿಗಳವರ ದಿವ್ಯ ನೇತೃತ್ವದಲ್ಲಿ ಉದ್ಘಾಟನಾ ಸಮಾರಂಭ ನೆರವೇರಿಸಿ ಲಕ್ಷಾಂತರಕ್ಕೂ ಮಿಕ್ಕಿಸೇರಿದ ಜನಸಮೂಹಕ್ಕೆ ಅನ್ನಸಂತರ್ಪಣೆಯ ಕಾರ್ಯ ಯಶಸ್ವಿಯಾಗಿ ನಡೆಯಿತು. ನ ಭೂತೋ ನ ಭವಿಷ್ಯತಿ ಎನ್ನು ವಂತೆ ಮಹೋತ್ಸವ ಕಾರ್ಯ ನೆರವೇರಿತು.

ನಾನಾ ಭಾಗಗಳಿಂದ ಗುರುಮೂರ್ತಿಗಳು, ಚರಮೂರ್ತಿಗಳು ದಯ ಮಾಡಿಸಿ ಮುರುಗೋಡ ಮಠವನ್ನು ದ್ವಿತೀಯ ಕಲ್ಯಾಣಪಟ್ಟಣವೇನೋ ಅನ್ನುವಂತೆ ಮಾಡಿದರು. ಕಲ್ಯಾಣದ ಕೀರ್ತಿ ಮುಕುಟವನ್ನೇ ಹೊತ್ತು ತಂದಷ್ಟು ಉನ್ನತ ಉತ್ಕೃಷ್ಟ ಸತ್ಯ ಚಿತ್ರವನ್ನು ಮುರುಗೋಡ ಮಠದಲ್ಲಿ

ಶಾಣುವಂತಿಕ್ತು ಅಂದಿನ ಮಹೋತ್ಸವ ಪ್ರಸಂಗ. ಪುಣ್ಯ ಪುರುಷರ ಪಾದ ಧೂಳಿಯಿಂದ ಪಾವನಗೊಂಡ ಮುರುಗೋಡ ಗ್ರಾಮದ ಅಂದಿನ ವೈಭವವನ್ನು ಕಂಡ ಭಕ್ತರು ನಿಜವಾಗಿ ಪುನೀತರಾದರು, ಪಾವನರಾದರು. ಅಪ್ಪನವರ ಅಮರಾಶೀರ್ವಾದ ಪಡೆದು ಇಹ ಪರಗಳಲ್ಲಿ ಸೌಖ್ಯಾನಂದ ಹೊಂದಿ ಜೀವಿಸು ವವರಾದರು.



## ೨೫ ನೇ ಅಧ್ಯಾಯ

### ಮರಣ ಶಯ್ಯೆಯಲ್ಲಿದ್ದ ಗೋಮಾತೆ ಬದುಕಿದಳು

ಮುರುಗೋಡ ಮಠಕ್ಕೆ ಅಪ್ಪನವರ ಸನ್ನಿಧಿಗೆ ಆಕಳು, ಹೋರಿಕರುಗಳು ದಾನರೂಪದಲ್ಲಿ ಬರುತ್ತಿದ್ದವೆಂದು ಈ ಮೊದಲೇ ಗೊತ್ತಾದ ವಿಷಯವೇ ಸರಿ.

ಅದರಲ್ಲಿ ಕೆಲವು ಆಕಳುಗಳನ್ನು ಮಠದಲ್ಲಿಯೇ ನಿಶ್ಚಿತ ಸ್ಥಳದಲ್ಲಿ ಕಟ್ಟಿ ಸಾಕಿ ಸಲುಹುತ್ತಿದ್ದರು. ಕೆಲವುಗಳನ್ನು ಸೊಗಲ ಶ್ರೀಕ್ಷೇತ್ರದಲ್ಲಿ ಬಿಟ್ಟಿದ್ದರು. ಇನ್ನೂ ಹಲ ಕೆಲವು ಆಕಳು ದಾನವಾಗಿ ಬಂದು, ದಾನವಾಗಿಯೇ ಹಲವು ಪುಣ್ಯವಂತರಿಗೆ ಕಾಣಿಕೆಯಾಗಿ ಹೋಗುತ್ತಿದ್ದವು ಗೋವುಗಳು.

ಶ್ರೀ ಮಹಾಂತಸ್ವಾಮಿಗಳು ಮೂಕ ಪ್ರಾಣಿಗಳ ಮೇಲೆ ಅದರಲ್ಲಿ ಆಕಳುಗಳ ಮೇಲೆ ಎಲ್ಲಿಲ್ಲದ ಪ್ರೀತಿಯುಳ್ಳವರು. ದಿನನಿತ್ಯ ಅವುಗಳ ಬೆನ್ನ ಮೇಲೆ ಕೈಯಾಡಿಸಿ ತಾವೇ ಸ್ವಂತ ಮೇವು ಹಾಕಿ ಬಂದಾಗ ಅವರಿಗೆ ಸಮಾಧಾನ. ಒಂದು ದಿವಸ ಅಪ್ಪನವರ ದರ್ಶನ ಲಭಿಸದಿದ್ದರೆ ಒಂದೆ ಸವನೆ ಅಂಬಾ ಅಂಬಾ ಎಂದು ಅರಚಿಕೊಳ್ಳುತ್ತಿದ್ದವು.

ಇಂತಿರ್ಪ ಸಮಯದಲ್ಲಿ ಒಂದು ದಿವಸ ಸ್ವಾಮಿಗಳು ಲಿಂಗಪೂಜೆ ಯಲ್ಲಿದ್ದಾರೆ, ಸಹಸ್ರಗಣ ಪಾರಾಯಣ ಸಾಗಿದೆ, ದೇವನೊಲುಮೆಯ ಧ್ಯಾನ ತಲ್ಲೀನತೆಯಲ್ಲಿ ಲೀನರಾಗಿದ್ದಾರೆ. ಎರಡು ದಿವಸದಿಂದ ಹತ್ತಿದ ಜಿಟ ಜಿಟ

ಮಳೆಯ ಪ್ರಭಾವಕ್ಕೊಳಗಾಗಿ ಆಕಳು ಕಟ್ಟಿದ ಛಾವಣಿಯ ಮೇಲ್ ಮಾಳಿಗೆ ಕುಸಿದು ಕುಪ್ಪಳಿಸಿ ಗೋವಿನ ಮೇಲೆ ಬಿದ್ದು ಬಿಟ್ಟಿದೆ. ತೊಲೆ ಜಂತಿಗಳೆಲ್ಲ ಪೂರ್ತಿ ಆಕಳದ ಮೇಲೆ ತಮ್ಮ ಒಜ್ಜೆ ಹಾಕಿ ನಿಂತಿವೆ. ಆಕಳು ಅಂಬಾ ಅಂಬಾ ಎಂದು ಆರ್ತನಾದ ಗೈಯುತ್ತಿವೆ. ಇನ್ನೂ ಮಾಳಿಗೆ ಬೀಳುವ ಸ್ಥಿತಿ ಕಾಣುತ್ತಿದೆ.. ಹೀಗಿರುವಾಗ ಒಬ್ಬರಿಗೂ ಅತ್ತ ಹೋಗುವ ಧೈರ್ಯವಾಗಲಿ ಆಕಳನ್ನು ಕುತ್ತಿನಿಂದ ಬಿಡುಗಡಿಸುವ ಸಾಹಸವಾಗಲಿ ಸಾಗಲಿಲ್ಲ. ಪರಿಸ್ಥಿತಿ ಯನ್ನರಿತ ಅಪ್ಪನವರು ಆಗಲೇ ಲಿಂಗಪೂಜೆ ಮುಗಿಸಿಕೊಂಡು ಬಂದು ಮುಂದಾಗಿ ಹೋಗಿ ಕೈಯುಲ್ಲಿದ್ದ ಬೆತ್ತದಿಂದ ಜಯ ದುರುದುಂಡೀಶಾ ಎಂದು ತೊಲೆ ಜಂತಿಗೆ ತಾಕಿಸಲು, ಆಕಳ ಮೇಲಿದ್ದ ತೊಲೆ ಜಂತಿಗಳು ತಮ್ಮಷ್ಟಕ್ಕೆ ತಾವೇ ಸರಿದವು. ಆಕಳು ಮರಣಾಂತಿಕ ಕುತ್ತಿನಿಂದ ಪಾರಾಗಿ ಅಪ್ಪನವರತ್ತ ಧಾವಿಸಿ ಬಂದು ಬಿಟ್ಟಿತು. ನಿಂತು ನೋಡಿದವರು ಕ್ಷಣಕಾಲ ಮೂಕರಾದರು ಬೆರಗಾಗಿ ಬೆರಳು ಕಚ್ಚಿದರು ಮತ್ತು ಆಚ್ಚರಿಗೊಂಡು ನಭೋಮಂಡಲ ಧಿಮಿ ಧಿಮಿಸುವಂತೆ ಜಯ ಗುರು ಮಹಾಂತೇಶ ಮಹಿಮಾಶಾಲಿ ದುರುಗೋಡಹ ಈಶ ಎಂದು ಜಯಕಾರ ಧ್ವನಿ ಮೊಳಗಿತು.



## ೨೬ ನೇ ಅಧ್ಯಾಯ

### ಮಡುವಿನಲ್ಲಿ ಮುಳುಗಿದ ಲಿಂಗ ದೊರಕಿಸಿದ್ದು

ಬೆಳಗಾಂವ ಜಿಲ್ಹೆಯ ಬೈಲಹೊಂಗಲ ತಾಲೂಕ ಪೈಕಿ ಹಿರಾ ಚಿಕ್ಕ ಹಳ್ಳಿ ಸಂಗೊಳ್ಳಿ, ಹಳ್ಳಿ ಸಣ್ಣದಾದರೂ ನಿಷ್ಠೆ ನೇಮದಲ್ಲಿ ನಿಷ್ಠಾವಂತರೆನಿಸಿದ ಆಚಾರವಂತರ ಆಗರ, ತಾಯಿಯೊಡಲ ಋಣ ಮುಟ್ಟಿಸುವಂಥಹ ಕರ್ತವ್ಯ ನಿಷ್ಠರ ತಾನ ಆ ಸಂಗೊಳ್ಳಿ. ರಕ್ತಗುಣವೇ ವ್ಯೆಯುತ್ತಿ ಬಂದಿರುವದೇನೋ ಅನ್ನುವಂತೆ ನಾಡ ರಕ್ಷಣೆಗಾಗಿ ಸ್ವಾತಂತ್ರ್ಯ ಸಾರಿ ತಾಯ್ನಾಡ ರಕ್ಷಣೆಯಲ್ಲಿ ಗಲ್ಲುಕಂಬ ಪಿಡಿದ ಶೂರ ರಾಯಣ್ಣನಂಥವರ ತಾಯೊಡಲು ಈ ಸಂಗೊಳ್ಳಿ.

ಈ ಗ್ರಾಮ ನಿವಾಸಿಗಳಾದ ಆನೆ ಮರದ ಮುರುಗಯ್ಯನವರ ವರಪುತ್ರ ಚರಂತಯ್ಯರು ಗೆಳೆಯರ ಬಳಗದೊಡನೆ ಊರ ಮುಂದಿನ ಮಲಪಹಾರಿಯ

ಮಡುವಿನಲ್ಲಿ ಧುಮುಕಿ ಮೋಜಿನಲ್ಲಿ ಮೈ ತೊಳೆಯಲೆಂದು ಸಾಗಿರಲು ಗೆಳೆಯರ ಕೂಟ ಇನ್ನೇನು ಕೇಳುವದು ಮಡುವಿನಲ್ಲಿ ಮುಳುಗಿ ಏಳುವದು ಮೇಲೆ ದಡದಲ್ಲಿ ಹತ್ತಿ ತಿರುಗಿ ಮಡುವಿನಲ್ಲಿ ಹಾರುವದು ಎಡಬಿಡದೇ ಸಾಗಿತ್ತು. ಹೊತ್ತು ನೆತ್ತಿಯ ಮೇಲೆ ಬಂದು ಪಶ್ಚಿಮದತ್ತ ಸೂರ್ಯದೇವ ನಡೆದಿದ್ದರೂ ಅದಾವದರ ಅರುವಿಲ್ಲದೇ ಸಾಗಿತ್ತು ನೀರಿನೊಡನೆ ಚೆಲ್ಲಾಟ. ಈ ಉಬ್ಬಿನಲ್ಲಿ ಹೊಟ್ಟೆ ಹಸಿಯಿತೆಂಬ ಪರಿವಿಲ್ಲ, ಮೈ ನೋವಾದೀತು ಎನ್ನುವ ಅಳುಕಿಲ್ಲ. ಗೆಳೆಯರೆಲ್ಲರು ನಾ ಮುಂದೆ ನೀ ಮುಂದೆ ಎನ್ನುತ್ತ ಮಡುವಿನಲ್ಲಿ ಹಾರಿದ್ದೆ ಹಾರಿದ್ದು, ಗಂಗೆಯೊಡನೆ ಚೆಲ್ಲಾಟ ಸಾಗಿದ್ದೆ ಸಾಗಿದ್ದು. ಹೀಗಿರುವಾಗ ಗಂಗಾ ಮಾತೆ ಮಲಪ್ರಭೆಗೆ ಸಿಟ್ಟು ಬಂತೇನೋ, ತನ್ನೊಡಲಲ್ಲ ಹಾರಿದ ಕುಮಾರ ಚರಂತಯ್ಯನ ಕೊರಳಲ್ಲಿದ್ದ ಲಿಂಗವನ್ನು ಕಸಿದುಕೊಂಡು ನೀರಿನ ತಳದಲ್ಲಿ ಬಚ್ಚಿಟ್ಟುಕೊಂಡಳು. ಮತ್ತೊಮ್ಮೆ ಮೇಲೆ ಹತ್ತಿ ಮೈ ಮುರಿದು ಮತ್ತೆ ನೀರಿನಲ್ಲಿ ಹಾರಬೇಕು ಎಂದು ತವಕ ಪಡುತ್ತಿರುವಾಗ ಚರಂತಯ್ಯನ ದೃಷ್ಟಿ ಕೊರಳಲ್ಲಿ ನೇತುಬಿದ್ದ ಲಿಂಗದತ್ತ ಹರಿಯಿತು. ಆದರೆ ಲಿಂಗಯ್ಯ ಮಾಯವಾಗಿರುವದು ಗೊತ್ತಾಗಿ ಗಾಭರಿಯೂ ಆಯಿತು.

ಮಿತ್ರ ಬಳಗದೊಡನೆ ಮಡುವಿನ ತಳಕಂಡು ಹುಡುಕುತ್ತ ಹೊತ್ತು ಗಳೆದರೆ ಏನೂ ಉಪಯೋಗವಾಗಲಿಲ್ಲ.

ಕೊರಳಲ್ಲಿ ಲಿಂಗವಿಲ್ಲದೇ ಮನೆಗೆ ಹೋಗುವದೆಂತು ? ತಂದೆಯವರು ಮೊದಲೆ ಕ್ರಿಯಾಶೀಲ ಜಂಗಮರು ಲಿಂಗವಿಲ್ಲದ ದೇಹಿಯನ್ನೆ ಮುಟ್ಟ ಬಾರದೆಂಬ ತತ್ವದವರು. ಮಗನೂ ಅಷ್ಟೇ, ಲಿಂಗವನ್ನು ಕಳೆದುಕೊಂಡು ಜಂಗಮರ ಮಕ್ಕಳು ನಾವು ಬದುಕಿದ್ದೇನು ಫಲ ಎನ್ನುವಷ್ಟು ಲಿಂಗಪ್ರೇಮಿ. ಹಾಗಾದರೆ ಲಿಂಗ ದೊರಕಿಸುವ ಬಗೆಯಂತು ಮತ್ತಷ್ಟು ಪ್ರಯತ್ನಿಸಿ ನೋಡ ಬೇಕೆಂದು ಗೆಳೆಯರೆಲ್ಲರೂ ಸೇರಿ ಮಲಪಹಾರಿಯ ಆ ಮಡುವಿನಲ್ಲಿ ಮತ್ತು ಮತ್ತು ಧುಮುಕಿ ಹುಡುಕಿ ಸೋತು ಉಪಾಯವಿಲ್ಲದಾಯಿತೆಂದು ತಮ್ಮ ತಮ್ಮ ಮನೆಗಳತ್ತ ಸಾಗಿದರು. ಇತ್ತ ಚರಂತಯ್ಯ ಅದೇ ವ್ಯಸನದಲ್ಲಿ ಸಪ್ಪೇ ಮುಖದಿಂದ ದಡದಲ್ಲಿ ವಿಚಾರ ಮಾಡುತ್ತ ತಿರುಗಿ ಲಿಂಗಯ್ಯನನ್ನು ದೊರಕಿಸುವ ಉಪಾಯವನ್ನು ಹುಡುಕುತ್ತಿದ್ದಾನೆ. ಅವನ ಬಾಲ ಬುದ್ಧಿಗೆ ಹೊಳೆಯದಾಯಿತು ಲಿಂಗ ದೊರೆಯುವ ಸರಳ ಉಪಾಯ.

ಮನೆಯತ್ತ ಬಂದ ಬಾಲಕರು ಮುರುಗಯ್ಯನವರನ್ನು ಕಂಡು ಲಿಂಗ ಮಡುವಿನಲ್ಲಿ ಬಿದ್ದುಹೋದ ಸಂಗತಿಯನ್ನರುಹಿ ಚರಂತಯ್ಯ ನದಿಯ ಬಳಿಯಲ್ಲಿ ಅಳುತ್ತ ನಿಂತಿರುವ ವಿಷಯವನ್ನು ತಿಳಿಸಿ ತಮ್ಮ ತಮ್ಮ ಮನೆಗಳಿಗೆ ಸಾಗಿದರು.

ಆಗ ಮುರುಗಯ್ಯನವರು ಚಿಂತೆ ವ್ಯಸನಗಳಲ್ಲಿ ಸಿಲುಕಿ ತಾವೂ ಹೊಳೆಯತ್ತ ಸಾಗಿದ್ದಾರೆ. ನೆರೆದ ಹಲವಾರು ಹುದ್ದರಿಗಳನ್ನು ಕರೆದುಕೊಂಡು ಹೊಳೆಯ ಸಮೀಪ ಬಂದು ಚರಂತಯ್ಯನಿಗೆ ಮನಸ್ಸಿಲ್ಲದ ಮನಸ್ಸಿನಿಂದ ಸಮಾಧಾನ ಹೇಳಿ ಉಪಾಯಗಾಣದೇ ಇನ್ನೂ ಆಲೋಚಿಸುತ್ತಿರಲು ಹೊಳೆಯಿತು ಕಳೆದ ಲಿಂಗ ದೊರಕಿಸುವ ಉಪಾಯ. ಜಂಗಮರಾದ ಮುರುಗಯ್ಯನವರು ಹೊಳೆಯನ್ನು ದಾಟಿ ಮಾಟಾಗಿ ಕಟ್ಟಿದ ದುರುದುಂಡೀಶರ ಪೀಠದೆದುರು ಕುಳಿತು, ನನ್ನೊಡೆಯಾ ದುರುದುಂಡಿ ಮಹಾಂತೇಶಾ ಆಟವಾಡುತ್ತಿರುವ ಮಕ್ಕಳನ್ನು ಈ ರೀತಿ ಪರೀಕ್ಷೆಗೆ ನಿಲ್ಲಿಸಿದೆಯಾ ತಂದೆ. ಮಕ್ಕಳಾಟದ ಮೋಹದಿಂದ ಬೇಸರಗೊಂಡು, ಅಗಲಿಸಿದೆಯಾ ನಿನ್ನಾತ್ಮ ತೇಜವೆನಿಸಿದ ಲಿಂಗಮೂರ್ತಿಯನ್ನು. ಜಂಗಮರು ನಾವು ಲಿಂಗಯ್ಯನ ಆಸರವಿಲ್ಲದೇ ಬದುಕಲುಂಟೇ ಈ ಜಗದಿ. ಸ್ಥಾನ ಮಾನ ಕಾಪಾಡುವ ಕರುಣಾನಿಧಿ ಮಹಾಂತೇಶ, ದುರುದುಂಡೀಶ ಪ್ರೀತ,ನನ್ನಪ್ಪ ಮಹಾಂತೇಶ ಸಾಕುಮಾಡೈ ತಂದೆ.ಇನ್ನೆಂದೂ ಲಿಂಗಮೂರ್ತಿಗೆ ಅಪಚಾರವಾಗದಂತೆ ನೋಡಿಕೊಳ್ಳಲು ಚರಂತಯ್ಯನಿಗೆ ಎಚ್ಚರಿಸುತ್ತೇನೆ ಹೀಗೆಂದು ಒಂದೇ ಸವನೆ ಬೇಡಿಕೊಳ್ಳುತ್ತಿರಲು, ಮಹಾಂತಸ್ವಾಮಿಗಳು ಪೀಠದಲ್ಲಿ ಕಾಣಿಸಿಕೊಂಡು ಅಯ್ಯಾ, ಜಂಗಮಾಗ್ರ್ಯ ಮುರುಗಯ್ಯನೆ ಲಿಂಗನಿಷ್ಠೆಯು ತಾನ ತಪ್ಪಿ ಕೊರಳಲ್ಲಿರಬೇಕಾದ ಲಿಂಗಮೂರ್ತಿ ಹೃದಯಗರ್ಭದ ಮೇಲ್ ಹೊದಿಕೆಯನ್ನಲಂಕರಿಸಬೇಕಿದ್ದ ಲಿಂಗದೇವರು ಸ್ಥಾನಪಲ್ಲಟ ಹೊಂದಿ ಚರಂತಯ್ಯನ ಬಗಲಲ್ಲಿಯು ಸ್ಥಾನ ಮಾನಗಳನ್ನು ಕಳೆದುಕೊಂಡಿದ್ದರ ಪರಿಣಾಮದಿಂದ ಹೀಗಾಗಿರಬೇಕು. ಹೋಗಿರಯ್ಯ ಮಡುವಿನ ತಳದಲ್ಲಿ ಇನ್ನಷ್ಟು ಹುಡುಕಲಿಕ್ಕೆ ಹೇಳಿರಿ ನಿಮ್ಮ ಮಗರಾಯನಿಗೆ. ದುರುದುಂಡೀಶನ ಒಲುಮೆ ನಿಮಗಿದೆ. ಆತನ ಆಜ್ಞಾನುಸಾರ ಇನ್ನಷ್ಟು ಪ್ರಯತ್ನ ಮಾಡಿರಿ ಲಿಂಗ ದೊರೆಯುವದು ಖಂಡಿತವೆಂದು ಹೇಳಿದಂತಾಯಿತಂತೆ.

ಆಗ ಮುರುಗಯ್ಯನವರು ಮಹಾಂತಾ ನಿಜವಾಗಿ ನೀನು ಕರುಣಾಕರ ಮೂರ್ತಿ ನನ್ನಪ್ಪ ಎಂದು ಉಗುಬಗೆಯಿಂದ ಹೊಳೆಯುತ್ತ ಬಂದು ಹುಡುಗರನೇಕರಿಗೆ ದುರುದುಂಡೀ ಮಹಾಂತೇಶರ ಆಜ್ಞೆಯಂತೆ ಇನ್ನಷ್ಟು ಮಡುವಿನಲ್ಲಿ ಇಳಿದು ಲಿಂಗ ಶೋಧನೆ ಮಾಡಿರೆಂದರು.

ಆಗ ಅನೇಕ ಬಾಲಕರು ದಡದ ಮೇಲಿಂದ ದುರುದುಂಡಿ ಮಹಾಂತೇಶ ಎಂದು ಜಯಧ್ವನಿಯೊಡನೆ ಹಾರಿ ಹುಡುಕಲು, ನೀರಿನ ಆಳದ ತಳದಲ್ಲಿ ಅವಿತುಕೊಂಡಿದ್ದ ಲಿಂಗಮೂರ್ತಿ ಸರಳವಾಗಿ ಚರಂತಯ್ಯನ ಕೈಗೆ ದೊರಕಿದ್ದಾನೆ. ಚರಂತಯ್ಯನಾದರೂ ಲಿಂಗದೊರೆತ ಆನಂದದಲ್ಲಿ ತಂದೆಯೊಡನೆ, ಗೆಳೆಯರ ಬಳಗದೊಡನೆ ಜಯ ಗುರುದೇವ ದುರುದುಂಡೀಶ ಜಯ ಗುರುದೇವ ದುರುದುಂಡೀ ಮಹಾಂತೇಶ, ಜಯ ಜಯ ಜಗದಾದಿ ಸ್ವಾಮಿ ಜಗತ್ಪಿತ ಮಹಾಂತೇಶ ಎಂದು ಒಂದೇ ಸಮನೇ ಜಯ ಜಯಕಾರ ಮಾಡುವವನಾಗಿದ್ದಾನೆ.

ಲಿಂಗ ಚರಿತೆಯನ್ನು ಕೇಳಿ ಮಾನವ ಸಹಜ ಅಚ್ಚರಿ ಮೂಡಿತು ಕೂಡಿದ ಭಕ್ತ ಬಳಗಕ್ಕೆ. ಆದರೆ ಅಪ್ಪನವರು ನಿಶ್ಚಲ ಭಕ್ತಿಯಿಂದ ನಿರ್ಮಲ ಮನದಿ ನಂಬಿ ಕರೆದರೆ ಭಕ್ತನ ಕರೆಗೆ ಓಗೊಟ್ಟು ಬಾರದಿರನೇ ನಮ್ಮ ಶ್ರೀ ದುರುದುಂಡೀ ಮಹೇಶ್ವರ ಎಂದು ಸಂತಸದ ಉದ್ಗಾರ ತೆಗೆದು ಮುರುಗಯ್ಯನವರ ಭಕ್ತಿ ನಂಬಿಕೆ ವಿಶ್ವಾಸಗಳಲ್ಲಿ ಸೆರೆಯಾದ ಗುರು ದುರುದುಂಡೀಶನ ಕೃಪೆ ಇದು ಎಂದು ಹೇಳಿ ತಮ್ಮ ಹೆಚ್ಚಳವನ್ನೇ ಮರೆಮಾಚಿದ ಮಹಿಮಾಶಾಲಿ ಮಹಾಂತ ಸ್ವಾಮಿಗಳು, ಅನಂತ ಲೀಲಾ ಪುರುಷರು.



## ೨೭ ನೇ ಅಧ್ಯಾಯ

### ಅಪ್ಪನವರ ಉದರದಲ್ಲಿ ಅಡಗಿದ ಉಸುಕಿನ ಬೆನಕ

ತ್ರಿಕಾಲ ಲಿಂಗಾರ್ಚನೆ, ಸಹಸ್ರಗಣ ಪಾರಾಯಣದಲ್ಲಿ ನಿರತರಾದ ಶ್ರೀಗಳವರು ಭಕ್ತರ ಕಣ್ಣಲ್ಲಿ ಸಾಕ್ಷಾತ್ ಶಿವಸ್ವರೂಪಿಗಳಾಗಿದ್ದರು. ಇಂತಹ

ಸಮಯದಲ್ಲಿ ಕಾಲನಿಗೂ ಒಂದು ತರದ ಮೋಜಿನ ಆಟ ಹೂಡುವ ಮನಸ್ಸಾಗಿ ಶಿವ ಹರ ಶಂಕರನಿಂದ ಪ್ರೇರೇಪಿತನಾಗಿ ಅಪ್ಪನವರ ಹೃದ್ಭೂಮಿಯಲ್ಲಿ ಉಸುಕಿನ ಕಲ್ಲಾಗಿ ಮುಹೂರ್ತ ಮಾಡುವವನಾಗಿದ್ದಾನೆ.

ಆದರೆ ತಪಸ್ವಿಗಳ ತಪಃ ಪ್ರಭಾವದ ಎದುರು ಕಾಲರಾಯನ ಈ ಅವಿವೇಕತನ ಸಾಗದಾಯಿತೆಂದು ಒತ್ತಿ ಹೇಳಿದರೂ ಕಾಲಪುರುಷನಿಗೆ ಶಿವ ಸಂದೇಶದ ಪ್ರತಿಫಲವಾಗಿ ಇನ್ನಷ್ಟು ಸೊಕ್ಕಿನ ಉಕ್ಕು ಹೆಚ್ಚಾಗಿ, ಹೃದಯ ವಾಳಗೈದ ಉಸುಕಿನ ಕಲ್ಲು ಅಪ್ಪನವರಿಗೆ ಅಸದಳವಾದ ತೊಂದರೆ ಕೊಡುವದಾಯಿತು. ಆದರೂ ತಮ್ಮ ನಿತ್ಯ ನೇಮಗಳಾದ ತ್ರಿಕಾಲ ಲಿಂಗಾರ್ಚನೆ ಸಹಸ್ರಗಣ ಪಾರಾಯಣ ಭಕ್ತರ ಹಿತಾಹಿತಗಳ ವಿಚಾರಗೋಷ್ಠಿ, ಶಿವಾನುಭವ ಸಂಕೀರ್ತನೆಯ ಕಾರ್ಯಗಳು ಎಡಬಿಡದೇ ಸಾಗಿ, ಶಿವಯೋಗಿಗಳಿಗೆ ಪರೀಕ್ಷೆಯ ಸಮಯ ಬಂದುದಾಗಿದೆ.

ಇಷ್ಟಾದರೂ ಅಪ್ಪನವರು ತಮ್ಮ ಕರ್ತವ್ಯವೆನಿಸಿದ ಲಿಂಗಪೂಜೆಯಿಂದ, ಶಿವಾನುಭವ ಗೋಷ್ಠಿಯಿಂದ, ಸಹಸ್ರಗಣ ಪಾರಾಯಣದಿಂದ ಕಿಂಚಿತ್ತೂ ವಿಚಲಿತರಾಗಲಿಲ್ಲ. ಆದರೆ ಭಕ್ತವೃಂದದವರಿಗೆ ಇದರ ಅರುವಾಗಿ ಅಪ್ಪನವರ ಮೇಲಿರುವ ಪ್ರೀತಿ ವಿಶ್ವಾಸ ಭಕ್ತಿಗಳ ಸಮೂಹವೇ ಒಟ್ಟಾಗಿ ಅಪ್ಪನವರಿಗೆ ಔಷಧೋಪಚಾರ ಮಾಡಿಸಬೇಕು ಪ್ರಸಂಗ ಬಿದ್ದರೆ ಆಪರೇಶನ್ ಮಾಡಿಸಿಯಾದರೂ ಕಲ್ಲಿನ ರೂಪದಲ್ಲಿ ಹೃದಯದಲ್ಲಿ ಅಡಗಿ ಕುಳಿತ ಕಾಲರಾಯನನ್ನು ಹೊರತಳ್ಳುವ ಮನಸ್ಸುಮಾಡಿ ಶಿವಯೋಗಿಗಳನ್ನು ಬೆಳಗಾಂವದಲ್ಲಿರುವ ಜೀರಗಿಯವರ ಆಸ್ಪತ್ರೆಗೆ ತೆಗೆದುಕೊಂಡು ಹೋಗುವ ಸಿದ್ಧತೆ ಮಾಡಿ ಅಪ್ಪನವರಲ್ಲಿ ಅನನ್ಯ ಭಕ್ತಿಭಾವದಿಂದ ಕೇಳಿಕೊಳ್ಳುವವರಾಗಿದ್ದಾರೆ.

ಆದರೆ ಮಹಾಂತ ಸ್ವಾಮಿಗಳು ಒಪ್ಪಲಿಲ್ಲ. ಆದರೂ ಭಕ್ತರ ಮನೋಧೈರ್ಯದ ಮುಂದೆ ಸ್ವಾಮಿಗಳ ಹಟ ಸಾಗದಾಯಿತು. ಗುರುಸೇವಾ ಭಕ್ತಿ ಸಂಪನ್ನೆಯರಾದ ಮೊರಬದಬಾಳಪ್ಪನವರ ಪತ್ನಿಯವರು ಅಪ್ಪನವರಿಗಿಂತಲೂ ಭಕ್ತಿಯ ಹಟತೊಟ್ಟು ಸಾಷ್ಟಾಂಗ ಹಾಕಿ ಅಪ್ಪನವರು ಬೆಳಗಾಂವಿ ಆಸ್ಪತ್ರೆಗೆ ಹೊರಡುವದಕ್ಕೆ ಒಪ್ಪಿಕೊಳ್ಳುವ ಪರಿಯಂತರ ಅನ್ನಾಹಾರಗಳನ್ನು ಮುಟ್ಟುವ

ದಿಲ್ಲವೆಂದು ಗಟ್ಟಿಯಾಗಿ ಪಾದಪಿಡಿದವರಾಗಿದ್ದಾರೆ. ಈಗ ಅನಿವಾರ್ಯವಾಗಿ ಸ್ವಾಮಿಗಳು ಆಸ್ಪತ್ರೆಯ ಆರೈಕೆಗೆ ಒಪ್ಪಿಕೊಂಡರಾದರೂ ತಮ್ಮ ನಿತ್ಯ ನೇಮಗಳಾದ ಲಿಂಗಪೂಜೆ, ಸಹಸ್ರಗಣ ಪಾರಾಯಣಗಳಿಗೆ ಅಡೆತಡೆಯಾಗಕೂಡದೆಂದು ಮೊದಲೇ ತಿಳಿಸಿದವರಾಗಿ ಬೆಳಗಾಂವಿ ಆಸ್ಪತ್ರೆಗೆ ಬಂದವರಾಗಿದ್ದಾರೆ.

ಆದರೆ ಕಲ್ಲಾಗಿ ಕುಳಿತ ಕಾಲರಾಯ ಔಷಧ ಉಪಚಾರಗಳಿಗೆ ಮಣಿಯದೇ ಹಟತೊಟ್ಟು ಹೊಟ್ಟೆಯಲ್ಲಿ ಮುಹೂರ್ತಗೊಂಡವನು ಮಿಸುಕಲಿಲ್ಲ. ಆಗ ಜೀರಗಿ ಸರ್ಜನ್‌ರಿಗೆ ಆಶ್ಚರ್ಯವಾಯಿತಲ್ಲದೇ ಮುಂದಿನ ದಾರಿ ಕಾಣದೆ ಸ್ವಾಮಿಗಳಲ್ಲಿ ಭಕ್ತಿಯಿಂದ ಕೇಳಿಕೊಳ್ಳುವವರಾಗಿದ್ದಾರೆ. ಬುದ್ಧಿ ತಮ್ಮ ಆಶೀರ್ವಾದ ಬಲದಿಂದ ನಾ ಕಲಿತ ಈ ಡಾಕ್ಟರ ಬುದ್ಧಿಯನ್ನೆಲ್ಲ ಪ್ರಯೋಗಿಸಿ ಉಸುಕಿನ ಕಲಿಪುರುಷನನ್ನು ಆಪರೇಶನ್ ಮಾಡಿ ಹೊರಗೆ ಹಾಕುತ್ತೇನೆ ತಾವು ನನ್ನ ಈ ಸೇವಾ ಕಾರ್ಯಕ್ಕೆ ಮನಸ್ವಿ ಆಶೀರ್ವಾದ ಮಾಡಬೇಕೆಂದು ಕೇಳಿಕೊಂಡಾಗ ಅಪ್ಪನವರು ಅಯ್ಯಾ ಡಾಕ್ಟರೋತ್ತಮನೆ ನಿನ್ನ ಕಾರ್ಯ ಕೌಶಲ್ಯದಲ್ಲಿ ನಮ್ಮ ನಿತ್ಯ ನೇಮಕ್ಕೆ ತಡೆಯಾಗಬಾರದು ಹಾಗಿದ್ದರೆ ಮಾತ್ರ ಆಪರೇಶನ್ ಮಾಡಬಹುದೆಂದು ಅಪ್ಪಣೆ ಕೊಟ್ಟಿದ್ದಾರೆ.

ಆಗ ಸರ್ಜನ್ನ ಜೀರಗಿಯವರು ಸ್ವಾಮಿಗಳ ಪಾದ ಧೂಳಿಯನ್ನು ಮಸ್ತಕದಲ್ಲಿ ಹೊತ್ತು ಶಿವಸ್ವರೂಪಿ ಮಹಾಂತಶಿವಯೋಗಿ ಎಲ್ಲವೂ ನಿನ್ನಿಚ್ಛೆ ಎಂದುಸುರಿ ಎಲ್ಲವನ್ನು ಶಿವನ ಮೇಲೆ ಭಾರ ಹೇರಿದವರಾಗಿ ನಿಷ್ಠೆ ಭಕ್ತಿಯ ಆಳದಲ್ಲಿ ಸಿಲುಕಿ ಆಪರೇಶನ್ ಮಾಡುವವರಾಗಿದ್ದಾರೆ.

ಈಗ ಕಾಲರಾಯ ಸೋತು ಸಪ್ಪೇ ಮೋರೆಯಲ್ಲಿ ಇನ್ನು ನನ್ನಾಟ ಸಾಗದೆಂದು ಕಲ್ಲಿನ ರೂಪದಲ್ಲಿ ಅಪ್ಪನವರಿಂದ ಬಿಡುಗಡೆ ಹೊಂದಿ ಹೊರಗೆ ಬರುವವನಾಗಿದ್ದಾನೆ. ಆದರೆ ಸರ್ಜನ ಸಾಹೇಬರು ಅಪ್ಪನವರಿಗೆ ತನ್ನ ವೃತ್ತಿ ಧರ್ಮದ ಪ್ರಕಾರ ತ್ರಿಕಾಲ ಸ್ನಾನ ಪೂಜೆ, ಸಹಸ್ರಗಣ ಪಾರಾಯಣಗಳನ್ನು ಕೆಲವೊಂದು ದಿವಸ ನಿಲ್ಲಿಸುವಂತೆ ಬೇಡಿಕೊಂಡರು. ಸ್ವಾಮಿಗಳು ನಗುಮೊಗದಿಂದ ಮುಗುಳುನಗೆ ಚಿಮ್ಮಿ ಅಯ್ಯಾ ಕೊಲ್ಲುವವನು ಅವನೇ ಕಾಯುವವನು ಅವನೇ ಈಗ ಕಲ್ಲಾಗಿ ಕಂಡವನು ಅವನೆ. ಅವನೆ ಲಿಂಗರೂಪಿ ಶಿವಮಹಾದೇವ. ಅವನ ಪ್ರೇರಣೆಯಂತೆ ನಡೆಯಬೇಕಾದುದೆಲ್ಲವೂ ನಡೆಯಲೇಬೇಕು.

ಈಗ ಶಂಕರನು ವರಪ್ರಸಾದವೆಂದು ನಿನ್ನಿಂದ ಈ ಕಾರ್ಯ ಮಾಡಿಸಿದನೆ ! ಹೊರತು ಅದು ನಮ್ಮ ನಿನ್ನ ಸೊತ್ತಲ್ಲ. ಭಯ ಬೇಡವಯ್ಯಾ ಗಿರಿಜಾವಲ್ಲಭನ ಕರುಣೆಯಲ್ಲಿ ನಮಗೇನು ಆಗಲಾರದು ಎಂದು ಸಂತೈಸಿ ತಮ್ಮ ನಿತ್ಯ ನೇಮ ಗಳಾದ ತ್ರಿಕಾಲ ಸ್ನಾನ ಲಿಂಗಪೂಜೆ ಸಹಸ್ರಗಣ ಪಾರಾಯಣಗಳನ್ನು ಸಾಂಗ ಗೊಳಿಸಿದ್ದಾರೆ. ಒಂದು ತೊಟ್ಟು ನೀರು ಬಿದ್ದರೆ, ಉಪಚಾರದಲ್ಲಿ ಸ್ವಲ್ಪ ಹೆಚ್ಚು ಕಡಿಮೆಯಾದರೆ ಆಪರೇಶನ್‌ದಂಥಾ ಘನ ಕಾಹಿಲೆಗೆ ಮುಕ್ತತೆ ಎನ್ನುವದೇ ಇಲ್ಲ ಎನ್ನುವಾಗ ಅಪ್ಪನವರ ಈ ಅಸಾಧಾರಣ ಲಿಂಗಪೂಜಾ ಕಾರ್ಯ ಇನ್ನಿತರ ಪ್ರಸಂಗಗಳನ್ನು ಲೀಲಾಜಾಲವಾಗಿ ಗೆದ್ದುದು ಹಸನ್ಮುಖದ ಶಿವಯೋಗಿಗಳ ತಪಃ ಸಾಮರ್ಥ್ಯವಲ್ಲದೆ ಇನ್ನೇನು. ಬೆರಗಾಗಿ ಬೆರಳು ಕಚ್ಚಿ ದರು ಭಕ್ತ ಬಳಗದವರು. ಸರ್ಜನ ಜೀರಗಿಯವರಂತೂ ನಿಬ್ಬೆರಗಾಗಿ ಸಂತಸದ ಉಸಿರು ಬಿಟ್ಟು ಶಿವಯೋಗಿಗಳ ಶಿವಯೋಗ ಬಲ ಸಾಮರ್ಥ್ಯ ವಲ್ಲದೆ ಇದು ನನ್ನಿಂದಾದ ಕಾರ್ಯವಲ್ಲವೆಂದು ಅಚ್ಚರಿಗೊಂಡು ನುಡಿದರು ಅಪ್ಪನವರು ಮೂಢ ಮಾನವರಿಗೆ ತೋರಿದ ಪವಾಡವಿದೆಂದು.



## ೨೮ ನೇ ಅಧ್ಯಾಯ

### ಪಾದೋದಕದಿಂದ ಶಿವಲಿಂಗಪ್ಪನಿಗೆ ಕಣ್ಣು ಬಂದದ್ದು

ಮತ್ತಿಕೊಪ್ಪದ ಗ್ರಾಮನಿವಾಸಿಯಾದ ಶಿವಲಿಂಗಪ್ಪ ಎಂಬ ಸಜ್ಜನ ಸಂಸಾರಿ ಎಪ್ಪತ್ತು ಎಂಭತ್ತು ವಯದ ಅಜ್ಜನು ಧರ್ಮ ಸಂಸ್ಕೃತಿಯಂತೆ ಆಚಾರ ನಿಷ್ಠನಾಗಿ ಕ್ರಿಯಾಶೀಲನಾಗಿ ಬಾಳಿಕೊಂಡಿದ್ದನು. ಸಂಸಾರದ ಸಕಲ ಭೋಗಭಾಗ್ಯಗಳನ್ನು ಕಂಡು ಸಿರಿವಂತನಲ್ಲದಿದ್ದರೂ ಬಡತನದ ಬೇಗೆಯನ್ನರಿಯದ ಸಾಧಾರಣ ಮನೆತನದ ಈ ಭಕ್ತ ಅಜ್ಜಪ್ಪನಿಗೆ ಮಹಾಂತ ಅಜ್ಜಗಳಲ್ಲಿ ಎಲ್ಲಿಲ್ಲದ ಭಕ್ತಿ, ನಿಷ್ಠೆ, ಶ್ರದ್ಧೆ, ನಂಬಿಕೆಗಳೆಲ್ಲವೂ ಮನೆಮಾಡಿ ಕೊಂಡಿದ್ದವು ಎಂದು ಧಾರಾಳ ಮನದಿಂದ ಹೇಳಬಹುದು. ಅಜ್ಜ ಶಿವ ಲಿಂಗಪ್ಪನಿಗೆ ವಯೋಧರ್ಮಕ್ಕನುಗುಣವಾಗಿಯೋ ಅಥವಾ ಶಿವ ಮಹಾದೇವ

ಮಹೇಶ್ವರ ದುರುದುಂಡೀಶನಿಗೆ ಮಹಾಂತಜ್ಜನವರ ಪಾದೋದಕದ ಮಹಿಮೆಯನ್ನು ತೋರಿಸಬೇಕೆಂಬ ಇಚ್ಛೆಯಾಯಿತೋ ಅಥವಾ ಶಿವಲಿಂಗಪ್ಪಜ್ಜನು ಹಿಂದಿನ ಜನ್ಮದ ಕರ್ಮಶೇಷವನ್ನು ಉಳಿಸಿಕೊಂಡು ಜನ್ಮ ತಾಳಿದವನೋ ಬಲ್ಲವರಾರು ? ಅಂತೂ ಇಂತೂ ಶಿವಲಿಂಗಪ್ಪನ ಜೀವನದ ಕೊನೆಯ ಭಾಗವೆನಿಸಿದ ಎಪ್ಪತ್ತನೆ ವಯದಲ್ಲಿ ಕಾಣಿಸಿಕೊಂಡಿತು ಈ ಕಣ್ಣು ಬೇನೆಯ ಪ್ರಕರಣ.

ಭಕ್ತ ಶಿವಲಿಂಗಪ್ಪನಿಗೆ ಕಣ್ಣು ಬೇನೆಯು ಕರಾಳಛಾಯೆ ಮುತ್ತಿಕೊಂಡು ದಿನೆ ದಿನೆ ಹೆಚ್ಚಾಗಿ ಬಳಲಿ ಬಸವಳಿದು ತಾಪದಲ್ಲಿ ಕಣ್ಣಿನ ನೋವು ಹೆಚ್ಚಾಯಿತು. ಬರು ಬರುತ್ತ ಎರಡು ಕಣ್ಣುಗಳು ಇಂಗಿ ಹೋಗುವಂತೆ ಕಣ್ಣಿನ ಮೇಲೆ ಹುಣ್ಣು ಬೆಳೆಯುಹತ್ತಿತು. ಕರ್ನಾಟಕ ಮಹಾರಾಷ್ಟ್ರದ ತಜ್ಞರೆನಿಸಿದ ಕಣ್ಣಿನ ಡಾಕ್ಟರುಗಳು, ಅನೇಕ ಗಿಡಮೂಲಿಕೆಯ ವೈದ್ಯಗಾರರು ಹಲವಾರು ರೀತಿ ಶಿವಲಿಂಗಪ್ಪಜ್ಜನಿಂದ ಹಣ ಸುಲಿದರೆ ವಿನಃ ಗುಣಪಡಿಸಲಿಲ್ಲ ಗುಣ ಹೊಂದುವ ಲಕ್ಷಣದ ಬದಲಾಗಿ ಬೇನೆ ಬಲವಾಯಿತು, ಕಣ್ಣ ದೃಷ್ಟಿ ಇಂಗಿ ಹೋಯಿತು.

ಈಗ ಶಿವಲಿಂಗಪ್ಪನಿಗೆ ಪ್ರಪಂಚವೇ ಬೇಸರವಾಯಿತು. ಅದರಲ್ಲಿ ಕೂಡ್ರಿಸಿ ಕೂಳು ಮಾಡಿ ಹಾಕುವ ಸೊಸೆಯಂದಿರಿಗೂ, ದುಡಿದೊಡಲಿಗೆ ಅನ್ನ ಒದಗಿಸುವ ಕರ್ಮಚಾರಿಗಳಾದ ಮಕ್ಕಳಿಗೂ, ಮಮತೆಯಿಂದ ಪತಿ ಸೇವಾ ಭಾಗಿಯಾಗಿದ್ದ ಮಡದಿಗೂ ಬೇಸರವಾಯಿತು. ಆದರೂ ಶಿವ ಮುಕ್ಕಣ್ಣನ ಆಜ್ಞೆಯಾಗುವ ತನಕ ಕೊನೆ ಎಲ್ಲಿದೆ ಮಾನವನ ಜೀವಂತ ಸೆಣಸಾಟಕ್ಕೆ. ಕಷ್ಟ ಕೋಟಲೆಗಳನ್ನು ಸಹಿಸಿ ಬದುಕುವ ಆಸೆ, ಬಾಳುವ ಹಂಬಲ ಮಾನವ ಸಹಜ ಹುಟ್ಟುಗುಣ, ನಿಸರ್ಗ ನೀಡಿದ ವರವೆಂದರೂ ಅಡ್ಡಿ ಇಲ್ಲ ಅಂತೇ ಶಿವಲಿಂಗಪ್ಪ ಇಷ್ಟೆಲ್ಲ ಕಷ್ಟ ಕೋಟಲೆ, ಕಣ್ಣಿನ ತಾಪ, ಮನದ ನೋವು ಸಹಿಸಿ ಬಾಳಿಕೊಂಡಿದ್ದಾನೆ. ಕಾರಣ ಅವನಲ್ಲಿದ್ದ ನಂಬಿಕೆ ವಿಶ್ವಾಸ ಶ್ರದ್ಧಾ ಭಕ್ತಿ ಶ್ರೀ ದುರುದುಂಡೀಶ ಮಹಾಂತೇಶರ ಕೃಪಾಶೀರ್ವಾದ ಬಲದಿಂದ ಇನ್ನೂ ನಾನು ಬದುಕಬೇಕು, ಈ ಕಣ್ಣಿನ ನೋವು ಕಳೆದುಕೊಳ್ಳಬೇಕು ಎಂಬುದು.

ಸುತ್ತಲಿನ ಡಾಕ್ಟರರು, ವೈದ್ಯಗಾರರು, ಮುದ್ದುಕೊಡುವ ಮಹಾ ಮಹಾ ಪಂಡಿತರು ಮುಗಿದರು. ಶಿವಲಿಂಗಪ್ಪನ ಕಣ್ಣು ಬರಲಿಲ್ಲ, ಹಣ ಸೂರೆಯಾಗುವದು ತಪ್ಪಲಿಲ್ಲ. ಕೊನೆಗೆ ಬೇಸರದಿಂದ ಮಗನಾದ ಮಲ್ಲಪ್ಪ ತಂದೆ ಶಿವಲಿಂಗಪ್ಪನಿಗೆ, ಅಪ್ಪಾ ನನ್ನ ಪುಣ್ಯವೇ ಇಷ್ಟಿತ್ತೆಂದು ತಣ್ಣಗೆ ಸತ್ತು ಹೋಗಬಾರದೆ, ಸುಮ್ಮನೆ ಏನಿದು ನಿನ್ನಿಂದ, ನಿನ್ನೀ ಕಣ್ಣ ಬೇನೆಯಿಂದ ನನಗೂ ಬೇಸರ, ಮನೆಯವರಿಗಂತೂ ಮೊದಲೇ ಬೇಜಾರು ಎಂದು ತಾತ್ಸಾರದಿಂದ ನುಡಿಯಲು ಶಿವಲಿಂಗಪ್ಪನ ಇಂಗಿದ ಆ ಕಣ್ಣುಗಳಲ್ಲಿ ನೀರು ವಟ್ಟರಿಸಿ ಚಿಮ್ಮಿ ಹರಿದು ಆ ಹಣ್ಣುದೊಗಲ ಕಪಾಳ ತೋಯಿಸಿತು.

ಕೊನೆಯ ಉಪಾಯವೆಂದು ಮಗನಲ್ಲಿ ಮುದುಕಪ್ಪ ಹೇಳುತ್ತಾನೆ ! ಅಪ್ಪಾ ಮಲ್ಲಪ್ಪಾ ನೀನು ಇನ್ನು ಮೇಲೆ ನನ್ನ ಕಣ್ಣು ಬೇನೆಗಾಗಿ ಶ್ರಮಿಸ ಬೇಡಾ, ಹಣ ಸುರಿದು ಹಾಳು ಮಾಡಲು ಬೇಡ, ನನ್ನ ಕೊನೆಯಾಸೆಯಂತೆ ಮುರುಗೋಡ ಮಠಕ್ಕೆ ಒಯ್ದು ಬಿಟ್ಟುಬಂದರೆ ಸಾಕು. ಸ್ವಾಮಿ ಮಹಾಂತೇಶರ ಅಡಿಗಳಲ್ಲಿ ಹರಣ ಹಾರಿದರೆ ನಾನು ಪುಣ್ಯ ಜೀವಿಯಾಗುವೆ ಎಂದು ಅಂಗಲಾಚಿ ಬೇಡಿಕೊಂಡಿದ್ದಾನೆ

ತಂದೆಯ ಆಸೆಯಂತೆ ಮಲ್ಲಪ್ಪಾ ಶಿವಲಿಂಗಪ್ಪನನ್ನು ಮುರುಗೋಡ ಮಠಕ್ಕೆ ಕರೆತಂದಿದ್ದಾನೆ.

ಮಠಕ್ಕೆ ಬಂದ ಮುದುಕ, ಮುಂದಾಗಿ ಮಹಾಂತ ಸ್ವಾಮಿಗಳ ಪಾದ ಹಿಡಿದು ತನ್ನ ಭವಣೆಯನ್ನೆಲ್ಲ ತೋಡಿಕೊಂಡಿದ್ದಾನೆ,ಅಜ್ಜನವರ ಹಣ್ಣು ಹಣ್ಣಾದ ದೇಹ ತತ್ತರಿಸುವಂತೆ ಪಾದಕ್ಕೆ ಹಣೆ ಹಚ್ಚಿ ಹೊರಳಾಡಿದ್ದಾನೆ. ಶ್ರೀ ಗುರು ದುರುದುಂಡೀಶನೊರ ಪರುಷಮಣಿ ಮಹಾಂತೇಶಾ ಕಾಪಾಡು ಎನ್ನುತ್ತ.

ಈಗ ಗುರು ಮಹಾಂತಜ್ಜನವರ ಕರುಣೆಯ ಕಣ್ಣು ಮರುಗಿ ಮಮತೆ ಜಲ ಸುರಿದು ಶಿವಲಿಂಗಪ್ಪನಿಗೆ ಸಮಾಧಾನ ಹೇಳುತ್ತ, ಅಪ್ಪಾ ಶಿವಲಿಂಗಪ್ಪಾ ನಿನ್ನಂಥ ಶರಣ ಮನುಜನಿಗೆ ಈ ಕಷ್ಟ ತಂದನೆ ಗುರು ದುರುದುಂಡೇಶಾ ಆಗಲಪ್ಪಾ ನಿತ್ಯ ಗುರುವರನ ಪಾದೋದಕ ಕೊಳ್ಳುವವನಾಗು ಎಂದು ತಮ್ಮ

ವರದ ಹಸ್ತವನ್ನು ಮುದುಕಜ್ಜನ ಬೆನ್ನ ಮೇಲೆಕೈಆಡಿಸಿದ್ದಲ್ಲದೇ ಕಣ್ಣು ಮುಟ್ಟಿ ಕರುಣೆಯ ದೃಷ್ಟಿಯಿಂದ ನೋಡಿದರು ಇಷ್ಟ ಪಟ್ಟವರಾಗಿ.

ಶಿವಲಿಂಗಪ್ಪ ಅಲ್ಲಿಯೇ ಮಠದಲ್ಲಿ ಕೆಲವು ಕಾಲ ಉಳಿದು ನಿತ್ಯ ಅಪ್ಪನವರ ಪಾದೋದಕವನ್ನು ಪ್ರಾಸನ ಮಾಡುತ್ತ ಜಂಗಮಾರ‍್ಯ ಸ್ವಾಮಿ ಮಹಾಂತೇಶರ ವರಕರುಣೆಯಿಂದ ವಾರ ಕಳೆಯುವದರಲ್ಲಿ ಕಣ್ಣು ಪಡೆದ. ಜಗದ ವ್ಯಾಪಾರವನ್ನು ಇಕ್ಷಿಸುವ ನಿಜ ಮಾನವನಾದ. ಬಳಿಕ ಅಪ್ಪನವರ ಅಪ್ಪಣೆಯಂತೆ ಮಗ ಮಲ್ಲಪ್ಪ ತಂದೆಯನ್ನು ತಾತ್ಸಾರದಲ್ಲಿ ಕಂಡ ಬಗ್ಗೆ ಸ್ವಾಮಿಗಳ ಅಡಿಯಲ್ಲಿ ಕ್ಷಮೆ ಬೇಡಿ ತಂದೆಯನ್ನು ಊರಿಗೆ ಕರೆದುಕೊಂಡು ಹೋಗಿದ್ದಾನೆ. ಪೂಜ್ಯ ಶಿವಯೋಗಿಗಳ ಪಾದೋದಕದ ಮಹಿಮೆ ಅಗಾಧವಾದದ್ದು, ಅಸಮಾನ್ಯವಾದದ್ದು. ಹರುಷದಲ್ಲಿ ಜಯ ಮಹಾಂತ ಗುರುವರ, ಎಂದು ಭಕ್ತಬಳಗವೆಲ್ಲಾ ಜಯವೆಂದು ಹಾಡಿ ಕುಣಿದರಲ್ಲದೇ ಬೇಡರ ಕಣ್ಣಪ್ಪನಿಗೆ ಒಲಿದು ಕಳೆದ ಕಣ್ಣನ್ನಿತ್ತ ಶಿವ ಮಹಾದೇವ ಮುಕ್ಕಣ್ಣ ಮಹೇಶ್ವರನ ಅವತಾರನೇ ನಮ್ಮ ಶಿವಯೋಗಿ ಗುರು ಮಹಾಂತಜ್ಜರೆಂದು ಸಂತಸದ ಉದ್ಗಾರ ತೆಗೆದರು ಭಕ್ತ ಬಳಗವೆಲ್ಲ. ಶಿವಲಿಂಗಪ್ಪನ ಕಣ್ಣು ದೃಷ್ಟಿ ಬಂದು ಸ್ವಚ್ಛಂದ ಜಗದ ನೈಜ ಸ್ಥಿತಿ ಅರಿತು ಬಾಳುವಂತಾಯಿತಲ್ಲಾ ಎಂದು ಪ್ರತಿ ಉದ್ಗಾರ ಅಪ್ಪನವರ ಹೃದಯ ವಾಣಿಯಿಂದ ಮಮತೆಯಲ್ಲಿ ಚಿಮ್ಮಿ ಬಂತು, ಶುಭಾಶೀರ್ವಾದ ತಂತು, ಮಹಾತ್ಮರ ಮಹಿಮೆ ಇರುವದೇ ಇಂತು.



## ೨೯ ನೇ ಅಧ್ಯಾಯ

### ಅಪ್ಪನವರ ಆಶೀರ್ವಾದದಿಂದ ಬಡವ ಲಕ್ಷಾಧೀಶನಾದದ್ದು

ಹಿರೇಕೊಪ್ಪದವನೆಂದು ಹೇಳುವ ಪಂಚಾಳ ವಂಶದ ಭಕ್ತನೊಬ್ಬ ಒಮ್ಮೆ ಮಹಾಂತ ಸ್ವಾಮಿಗಳಿಂದ ತನ್ನ ಬಡತನದ ತಾಪತ್ರಯಗಳನು

ನೀಗಿಸಿಕೊಂಡು ಆಶೀರ್ವಾದ ಪಡೆಯಬೇಕೆಂದು ಹಿರೇಕೊಪ್ಪದಿಂದ ಕಾಲು ನಡಿಗೆಯಲ್ಲಿ ಮುರುಗೋಡ ಮಠಕ್ಕೆ ಬಂದಿದ್ದಾನೆ. ಆಗ ಮಹಾಂತಸ್ವಾಮಿಗಳು ಸಂಚಾರದಲ್ಲಿದ್ದ ಪ್ರಯುಕ್ತ ಆತನಿಗೆ ದರ್ಶನ ಲಭಿಸಲಿಲ್ಲ. ಆದರೆ ಪಂಚಾಳ ಪುಣ್ಯಾತ್ಮ ಮಠ ಬಿಟ್ಟು ಹೋಗಲಿಲ್ಲ. ನಿತ್ಯ ದಾಸೋಹದಲ್ಲಿ ಪ್ರಸಾದ ಪಡೆಯುತ್ತ ಸದಾ ಮುರುಗೋಡೇಶ ಮಹಾಂತರ ನಾಮಸಂಕೀರ್ತನೆ ಮಾಡುತ್ತ ಮಠದಲ್ಲಿಯೇ ಉಳಿದುಕೊಂಡಿದ್ದಾನೆ.

ಮುಂದೆ ಒಂದು ವಾರ ಸರಿದ ಮೇಲೆ ಅಪ್ಪನವರು ಸಂಚಾರದಿಂದ ಮರಳಿ ತಮ್ಮ ಮಠಕ್ಕೆ ಬಂದು ಬಿಟ್ಟಿದ್ದಾರೆ. ಆಗ ಭಕ್ತ ಮಹಾಶಯ ಪಂಚಾಳ ಪುಣ್ಯಾತ್ಮನು ಗಡಬಡಿಸಿ ಮೊದಲು ಅಪ್ಪನವರ ಆಶೀರ್ವಾದ ಹೊಂದಬೇಕು ಎಂದು ಉತ್ಸುಕನಾಗಿದ್ದಾನೆ. ಆದರೆ ಇನ್ನೂ ಅವನ ದುರ್ದೈವ ಸರಿಯುವ ಕಾಲ ಬಂದಿದ್ದಿಲ್ಲವೇನೋ? ಮಹಾಂತಸ್ವಾಮಿಗಳು ಆಗಮಿಸಿ ಮಧ್ಯಾನ್ಹದ ಲಿಂಗಪೂಜೆಯನ್ನು ಮುಗಿಸುವಷ್ಟರಲ್ಲಿ ಕಾರೊಂದು ಬಂದು ಮಠದ ಹೆಬ್ಬಾಗಿಲದಲ್ಲಿ ಸಿದ್ಧವಾಗಿ ನಿಂತಿತ್ತು.

ಮಹಾಂತಸ್ವಾಮಿಗಳ ಪಾದಪೂಜೋತ್ಸವ, ನೂತನ ಗೃಹ ಪ್ರವೇಶ ಕಾರ್ಯಕ್ಕೆ ಅಪ್ಪನವರನ್ನು ಕರೆದೊಯ್ಯಲು ಬಂದು ನಿಂತಿದೆ ಕಾರು. ಅಷ್ಟರಲ್ಲಿ ಅಪ್ಪನವರಾದರೂ ಲಗುಬಗೆಯಲ್ಲಿ ಹೊರಟುಬಿಟ್ಟಿದ್ದಾರೆ.

ಆದರೆ ಪಾಪ ಪಂಚಾಳ ಮಹಾಶಯನಿಗೆ ದೂರದಿಂದ ದರ್ಶನಲಾಭ ಲಭಿಸಿತೆ ಹೊರತು, ಸ್ವಾಮಿಗಳ ಆಶೀರ್ವಾದ ದೊರೆಯಲಿಲ್ಲ. ಇದಕ್ಕೂ ಕಾರಣ ಇಲ್ಲದಿಲ್ಲ. ಭಕ್ತ ಮಹಾಶಯನ ಹಿಂದಿನ ಜನ್ಮದ ಕರ್ಮ ಇನ್ನೂ ಕಾಡುತ್ತಿದೆ ಎಂದು ಬೇರೆ ಹೇಳಬೇಕಿಲ್ಲ.

ಈಗ ಅಪ್ಪನವರು ಹೋಗಿ ಮತ್ತೆ ನಾಲ್ಕು ದಿನ ಸರಿದವು. ಆದರೂ ಭಕ್ತ ದೃಢವಾದ ಭಕ್ತಿ ಶ್ರದ್ಧೆಗಳಿಂದ ಮಹಾಂತಪ್ಪಗಳ ನಾಮಸ್ಮರಣೆಯಲ್ಲಿ ಮಠದಲ್ಲಿ ಉಳಿದುಕೊಂಡಿದ್ದಾನೆ ಗಟ್ಟಿಯಾಗಿ.

ಕಾಲಪುರುಷನ ಮಹಿಮೆಯಿಂದ ತತ್ತರಿಸಿ ಬಾಳಿನಲ್ಲಿ ನೆಮ್ಮದಿಯನ್ನುವದನ್ನೇ ಕಾಣದ ಭಕ್ತ ಬಾಳಿನ ನೆಮ್ಮದಿಗಾಗಿ, ಆತ್ಮಶಾಂತಿಗಾಗಿ, ಉನ್ನತಿಯ

ಜೀವನಕ್ಕಾಗಿ ಅಪ್ಪನವರಲ್ಲಿ ಮೊರೆ ಹೊಕ್ಕು ದೃಢ ವಿಶ್ವಾಸವಿಟ್ಟು ಇನ್ನೂ ಎಂದು ನನ್ನ ಕರ್ಮ ಕಳೆಯುವದಿದೆಯೋ ನೋಡೋಣವೆಂದು ಅಪ್ಪನವರಲ್ಲಿ ಆಶೀರ್ವಾದ ಬಯಸಿ ಉಳಿದುಕೊಂಡಿದ್ದಾನೆ.

ಮತ್ತೆ ಸರಿದವೀಗ ಎಂಟು ದಿನಗಳು. ಅಂದು ಯಾರೋ ಒಬ್ಬರು ಈತನು ದಿನಾಲು ಮಠದ ದಾಸೋಹದಲ್ಲಿ ಪ್ರಸಾದ ಪಡೆದು ಹೀಗೆ ಇನ್ನೂ ಎಷ್ಟು ದಿನ ಉಳಿಯುವದು ಎಂದು ಮೂದಲಿಸಿ ಮಾತನಾಡಿದ್ದು ಪಾಂಚಾಳನ ಸ್ವಾಭಿಮಾನಕ್ಕೆ ನೋವಾಯಿತಾದರೂ ಅಪ್ಪನವರು ಇಂದು ಮರಳಿ ಆಗಮಿಸ ಲಿದ್ದಾರೆ. ಪುಣ್ಯ ಬಲ ವಿಶೇಷದಿಂದ ಇಂದು ನನಗೆ ಅಪ್ಪನವರ ದರ್ಶನ ಹಾಗು ಆಶೀರ್ವಾದ ದೊರೆತರೆ ಪುನೀತನಾಗುತ್ತೇನೆ, ಉದ್ಧಾರವಾಗುತ್ತೇನೆ ಎಂಬ ಭರವಸೆಯಿಂದ ಮೂಕವೇದನೆಯನ್ನು ಅನುಭವಿಸಿ ಹೊರಗಿನ ಕಟ್ಟೆಯ ಮೇಲೆ ಮಲಗಿದ್ದಾನೆ. ಮಹಾಂತೇಶಾ ಎಲ್ಲವೂ ನಿನ್ನ ದಯಾ ತಂದೆ, ಮುರುಗೋಡೇಶಾ ನೀನೇ ಕಾಯಬೇಕು ತಂದೆ, ನಿನ್ನ ಹೊರತು ನನಗಿನ್ನಾರು ಗತಿ. ಮತಿ ನೀಡಿ ಕಾಪಾಡು ತಂದೆ ಎಂದು ಪದೇ ಪದೇ ಅಪ್ಪನವರ ನಾಮಸ್ಮರಣೆಯಲ್ಲಿರಲು, ಮಹಾಂತಸ್ವಾಮಿಗಳು ಬಂದರೆಂದು ಶಬ್ದ ಕಿವಿಗೆ ಬಿದ್ದ ತಕ್ಷಣ ಚಪ್ಪರಿಸಿ ಎದ್ದು ಕುಳಿತು ನೋಡುತ್ತಾನೆ, ಕಾರು ಬಂದೇ ಬಿಟ್ಟಿತ್ತು. ಅಪ್ಪನವರು ಕಾರಿನಿಂದ ಇಳಿದು ವಿಶ್ರಾಂತಿಯ ಕೋಣೆಯಲ್ಲಿ ಹೋಗಿ ಕುಳಿತುಕೊಳ್ಳುವದಷ್ಟೇ ತಡ. ಪಂಚಾಳನು ಮುಂದಾಗಿ ಸಾಷ್ಟಾಂಗ ಹಾಕಿ ಗುರು ಮಹಾಂತೇಶಾ ಗತಿ ನೀಡು ತಂದೆ ಎಂದು ಬೇಡಿಕೊಳ್ಳುತ್ತಿರಲು, ಅಪ್ಪನವರು ಯಾಕರೆಪ್ಪಾ ಬಂದು ಬಾಳಾ ದಿವಸ ಗತಿಸಿದವಲ್ಲವೇ ಎಂದು ವಿನಯದಿಂದ ಮಾತನಾಡಿಸಲು ಅಪ್ಪನವರ ಆತ್ಮೀಯತೆಯ ನುಡಿಮುತ್ತುಗಳ ಮುಂದೆ ಪಂಚಾಳನ ಮಾತೇ ನಿಂತು ಏನು ಹೇಳಬೇಕು, ಏನು ಕೇಳಬೇಕು ಎಂದು ತಿಳಿಯದೇ ಮೂಕನಾಗಿ ಕರಜೋಡಿಸಿ ನಿಂತು ಬಿಟ್ಟಿದ್ದಾನೆ. ಆಗ ಅಪ್ಪನವರಿಗೆ ಅದೇನು ಹೊಳೆಯಿತೋ ಕುಳಿತುಕೊಳ್ಳಲು ಹೇಳಿದರು. ಅಷ್ಟ ರಲ್ಲಿ ಮತ್ತೊರ್ವ ಭಕ್ತರು ಕಾಯಿ ಹಾಗು ಒಂದಿಷ್ಟು ಮಂಡಕ್ಕಿ, ಮಂಡಕ್ಕಿ ಯೊಡನೆ ಒಂದು ರೂಪಾಯಿ ಅಪ್ಪನವರ ಪಾದಗಳ ಬಳಿಯಲ್ಲಿ ಇಟ್ಟು ಸಾಷ್ಟಾಂಗ ಹಾಕಿ ಕುಳಿತುಕೊಂಡರು.

ಅಪ್ಪನವರು ಅದೇನು ಆಲೋಚಿಸುತ್ತಿದ್ದರೋ ಕ್ಷಣ ಕಳೆದ ನಂತರ ಪಂಚಾಳ ಭಕ್ತನನ್ನು ಕರೆದು ಬಳಿಯಲ್ಲಿದ್ದ ಮಂಡಕ್ಕಿಯನ್ನು ಆ ಒಂದು ರೂಪಾಯಿಯನ್ನು ಮುಷ್ಟಿಯಲ್ಲಿ ಹಿಡಿದು ಭಕ್ತನ ಮಸ್ತಕ ಮುಟ್ಟ ಶ್ರೀಸ್ವಸ್ತಿ ಎಂದು ಆಶೀರ್ವದಿಸಿ ಮುಷ್ಟಿ ಮಂಡಕ್ಕಿ ಹಾಗು ಆ ಒಂದು ರೂಪಾಯಿ ಕೊಟ್ಟು ಹೋಗಿ ಬರ್ರಿಪಾ ಶಿವಾ ಒಳ್ಳೇದು ಮಾಡಲಿ ಎಂದು ಹೇಳಿದರು. ಆಗ ಆ ಭಕ್ತನಿಗೆ ಎಲ್ಲಿಲ್ಲದ ಉತ್ಸಾಹ ಹುಮ್ಮಸ ಉಕ್ಕಿ ಬಂದು ಮತ್ತೊಮ್ಮೆ ಸಾಷ್ಟಾಂಗ ಹಾಕಿ ಹೊರಟು ಬಿಟ್ಟಿದ್ದಾನೆ. ಮಂಡಕ್ಕಿ ರೂಪಾಯಿ ಸಹಿತ ಧೋತರ ಚುಂಗಿನಲ್ಲಿ ಕಟ್ಟಿಕೊಂಡು ಹೊರಟಿದ್ದಾನೆ.

ಹೊರಟು ಬಂದ ಪಂಚಾಳ ಭಕ್ತನು ಮುಂದೆಲ್ಲಿಗೆ ಹೋಗುವದು ಎಂಬ ಅರುವಿಲ್ಲದೆ ಧೋತರ ಸೆರಗಿನಲ್ಲಿದ್ದ ಮಂಡಕ್ಕಿ ಒಂದು ರೂಪಾಯಿಗಳನ್ನು ಭದ್ರವಾಗಿ ಕಟ್ಟಿಕೊಂಡು ಸಾಗಿ ಬಂದಿದ್ದಾನೆ. ಮುರುಗೋಡೇಶಾ ಎಲ್ಲವೂ ನಿನ್ನಿಚ್ಛೆ ಎಂಬ ಉಸುರೊಂದೆ ಅವನ ಆಸ್ತಿಯಾಗಿತ್ತು.

ಅತ್ತ ಮನೆಯಲ್ಲಿ ಹೆಂಡತಿ ಅವಳಾದರೂ ಪತಿಯಂತೆ ಗುರುಲಿಂಗ ಜಂಗಮಪ್ರೇಮ,ಭಕ್ತಿಯ ಆಳವನ್ನೆಲ್ಲ ಅವಳೊಬ್ಬಳೆ ಅವಿತಿಟ್ಟುಕೊಂಡಿದ್ದಳೋ ಏನೋ ಅನ್ನುವಂತೆ ಪತಿಯ ಸುಖ–ದುಃಖಗಳಲ್ಲಿ ಸಮಭಾಗಿಯಾಗಿ ಕಷ್ಟ ಸಹಿಷ್ಣೆ ಎನಿಸಿದವಳು. ಗಂಡ ಹೋಗುವಾಗ ಹೇಳಿದ ಹಿತ ನುಡಿಯಂತೆ ಬೇರೊಬ್ಬರಲ್ಲಿ ಕೂಲಿ ಮಾಡಿ ಬಂದು ಇದ್ದಷ್ಟರಲ್ಲಿ ಮಕ್ಕಳನ್ನು ಕರೆದುಕೊಂಡು ಉಂಡು ಸದಾ ಮಹಾಂತಜ್ಜರ ಧ್ಯಾನದಲ್ಲಿ ಪತಿಯು ಬರುವ ದಾರಿ ಕಾಯುತ್ತಿದ್ದಾಳೆ.

ಅತ್ತ ಪಂಚಾಳನು ಮಾರ್ಗಮಧ್ಯದಲ್ಲಿ ವಿಶ್ರಮಿಸಲು ಕುಳಿತ ಸಮಯದಲ್ಲಿ ಡಾವಣಗೇರಿಗೆ ಹೋಗುವ ಲಾರಿಯೊಂದು ಬಂದು ನಿಂತಿದೆ. ಆದರೆ ಬಿಸಿಲಿನ ತಾಪದಲ್ಲಿ ಬಾಯಾರಿ ಬಸವಳಿದು ಹೊಗೆ ಉಗುಳುವ ಲಾರಿಯ ಮಶಿನ್ನು ಕಂಡು ಅದರ ಚಾಲಕನು ನಿಲ್ಲಿಸಿ ಏನಾಗಿದೆ ಎಂದು ನೋಡುವಷ್ಟರಲ್ಲಿ ನೀರಿಲ್ಲದೆ ಎಂಜಿನ್ನಿನ ಭಾಗಗಳೆಲ್ಲ ಕಾಯ್ದು ರಕ್ತವರ್ಣದಲ್ಲಿ ರಂಜಿಸುತ್ತಿರಲು ಚಾಲಕನು ಆಯ್ಯೋ ಸುದೈವವೇ ಎಂಜಿನ್ನದ ಹೆಡ್ಡು ವಡೆದು ಹೋಗುವದು ಉಳಿಯಿತಲ್ಲಾ ಎಂದು ಉದ್ಗಾರ ತೆಗೆಯುತ್ತಿದ್ದಾನೆ.

ಬಳಿಕ ಲಾರಿಯ ಸ್ಥಿತಿಯಂತೆ ಕಂಗೆಟ್ಟು ಕುಳಿತ ಪಂಚಾಳ ಭಕ್ತನತ್ತ ಹೊರಳಿ ಏನಯ್ಯಾ ಇಲ್ಲಿ ಸಮೀಪದಲ್ಲಿ ನೀರೇನಾದರೂ ಉಂಟೆ ಎಂದು ಕೇಳಲು ಪಂಚಾಳ ಮಹಾಶಯನು ಅಯ್ಯಾ ನನಗಂತು ಗೊತ್ತಿಲ್ಲ, ಗೊತ್ತಿದ್ದವರು ಹೇಳುತ್ತಾರೆ ಇಲ್ಲಿಂದ ಮೈಲಾಚೆ ನುಗ್ಗಾಟ ಕೊಳ್ಳವಿದೆಯಂತೆ ಅಲ್ಲಿ ಮಾತ್ರ ನೀರು ಇರಬಹುದು. ಯಾಕಂದರೆ ಅದು ತಗ್ಗು ಪ್ರದೇಶ ಸುತ್ತಲಿನ ನೀರು ಹರಿದು ಅತ್ತಲೇ ಹೋಗುವದು ಎಂದು ಹೇಳಿದನು. ಆಗ ಡ್ರಾಯವ್ಹರನು ಒಂದು ರಬ್ಬರಿನ ಚೀಲ ತೆಗೆದು ಇದರಲ್ಲಿ ಒಂದಿಷ್ಟು ನೀರು ತಂದು ಕೊಟ್ಟರೆ ನಿನಗೆ ರೂಪಾಯಿ ಎರಡು ರೂಪಾಯಿ ಕೊಡತೀನಿ ಹೋಗಯ್ಯಾ ಪುಣ್ಯ ಬರುತ್ತದೆ ಎಂದು ಅಂಗಲಾಚಿ ಬೇಡಿಕೊಳ್ಳುತ್ತಿರಲು ಪಂಚಾಳನು ಮರುಮಾತನಾಡದೇ ಚೀಲ ತೆಗೆದುಕೊಂಡು ಹೋಗಿ ಒಂದು ಮೈಲಿನಾಚೆಯ ಭೂಮಿಯೊಂದರ ಒಡ್ಡಿನಲ್ಲಿ ಸಾಕಷ್ಟು ನೀರು ತುಂಬಿ ನಿಂತಿರುವದನ್ನು ಕಂಡು ಆನಂದಗೊಂಡವನಾದರೂ ಅಷ್ಟೆ ಆಶ್ಚರ್ಯಗೊಂಡು ಶ್ರೀಗುರು ಮುರುಗೋಡೇಶಾ ಏನಿದು ನಿನ್ನ ಲೀಲೆ ಇಂಥ ಬೇಸಿಗೆಯ ಕಾಲದಲ್ಲಿ ಇಂಥ ಸ್ಥಳದಲ್ಲಿ ಇಷ್ಟೊಂದು ನೀರಿನ ರಾಶಿ ಇರಬೇಕಾದರೆ ನಿನ್ನ ಮಹಿಮೆಯು ತಾನವಪ್ಪಾ ಈ ಮುರುಗೋಡ ಹಾಗು ಸುತ್ತಲಿನ ಈ ಪ್ರದೇಶ ನೀನು ತುಳಿದ ನೆಲ ಪಾವನ. ಆ ನೆಲದ ಜಲ ಪುಣ್ಯ ಜಲ. ಪಾವನಾತ್ಮನೇ ಲೀಲಾ ಮೂರ್ತಿಯೇ ನೀನಹುದು ಎಂದು ಸಂತೋಷಗೊಂಡು ನೀರು ತುಂಬಿಕೊಂಡು ಬಂದು ಗಾಡಿಯ ಚಾಲಕನಿಗೆ ಕೊಡಲು ಚಾಲಕನು ಎಂಜಿನ್ ಬಾಯಿಗೆ ನೀರು ಸುರಿದು ಅದರ ದಾಹ ಆರಿಸಿದವನಾಗಿ ಬಳಿಕ ಪಂಚಾಳಪ್ಪನಿಗೆ ರೂಪಾಯಿ ಕೊಡಲಿಕ್ಕೆ ಹೋಗಲು ಪಂಚಾಳಣ್ಣ ಬ್ಯಾಡ್ರೆಪಾ ಇಂಥಾ ಸಣ್ಣ ಕಾರ್ಯಕ್ಕೆ ಅಷ್ಟೊಂದು ಕೂಲಿ ತಕ್ಕೊಳ್ಳುದು ಅಂದರ ಅನ್ಯಾಯವೆಂದು ತನ್ನ ದೊಡ್ಡಗುಣ ತೋರಿಸುವವನಾಗಿದ್ದಾನೆ. ಡ್ರಾಯವ್ಹರ ಸಾಬಣ್ಣ ಪಂಚಾಳ ಭೂಪನ ಈ ದೊಡ್ಡ ಗುಣ ಮೆಚ್ಚಿದನೋ ಏನೋ ಅವನ ಬಾಳಿನ ಇತಿಹಾಸ ಊರು ಕೇರಿ ಮನೆ ಮಠ ಎಲ್ಲವನ್ನು ತಿಳಿದವನಾಗಿ ಶ್ರೀಗುರು ಮಹಾಂತೇಶರ ಪ್ರೇರಣೆಯ ಪ್ರಕಾರ ಪಂಚಾಳಪ್ಪನಿಗೆ ಉದ್ಯೋಗ ಹಚ್ಚಿಕೊಡುವದಾಗಿ ಹೇಳಿ ಗಾಡಿಯಲ್ಲಿ ಕೂಡ್ರಿಸಿಕೊಂಡು ದಾವಣಗೇರಿಯಂಥಾ ಪಟ್ಟಣ ವಾಸಕ್ಕೆ ತಂದು ಬಿಟ್ಟಿದ್ದಾನೆ.

ಡ್ರಾಯವ್ಹರನ ಮಾಲಿಕ ಸುವರ್ಣ ವ್ಯಾಪಾರಿ. ಅಂಥವನ ಬಳಿಯಲ್ಲಿ ಡ್ರಾಯವ್ಹರ ಸಾಬಣ್ಣ ಮುಂದಾಗಿ ಪಂಚಾಳಣ್ಣನ ಬಗ್ಗೆ ತನ್ನ ನಂಬಿಗೆ ವಿಶ್ವಾಸಗಳನ್ನು ಹೇಳಿದ್ದಲ್ಲದೆ ಅವನಿಗೆ ಉಳಿದುಕೊಳ್ಳುವ ಸಕಲ ಅನುಕೂಲತೆಗಳನ್ನು ಮಾಡಿ ಕೊಟ್ಟನು. ಹೀಗಿರಲು ಒಂದು ದಿನ ಸಾಬಣ್ಣನ ಕನಸಿನಲ್ಲಿ ಮಹಾಂತಸ್ವಾಮಿಗಳು ಕಾಣಿಸಿಕೊಂಡು ಪಂಚಾಳನಿಗೆ ಸಹಾಯ ಸಹಕಾರಗಳನ್ನು ತೋರಿಸುವಂತೆ ಹೇಳಿದ್ದಲ್ಲದೇ ಅವನಿಂದ ನಿನಗೆ ಹಾಗು ಮಾಲಕನಿಗೆ ಯಶ ಉಂಟು ಎಂದು ಹೇಳಿದಂತಾಯಿತು. ಆಗ ಡ್ರಾಯವ್ಹರನು ಮಾಲಿಕನನ್ನು ಕಂಡು ಕನಸಿನ ವೃತ್ತಾಂತವನ್ನು ತಿಳಿಸಿದ್ದಲ್ಲದೇ ಮುಂಬರುವ ಶುಭ ಸೂಚನೆಯ ಗುರುತಿಗಾಗಿ ಕಾಯ್ದುಕೊಂಡವರಾಗಿರಲು ಪಂಚಾಳನ ಕನಸಿನಲ್ಲಿ ಸ್ವಾಮಿಗಳು ಕಂಡು ಸುವರ್ಣದ ಧಾರಣಿ ಹದನೈದು ದಿನಗಳಲ್ಲಿ ನಾಲ್ಕು ಪಟ್ಟು ಹೆಚ್ಚಾಗುವ ವಿಷಯ ತಿಳಿಸಿದರು.

ಈಗ ಪಂಚಾಳಪ್ಪ ಸುಮ್ಮನಿರದೆ ಮುಂದಾಗಿ ಮಾಲಿಕನಿಗೆ ಬಂಗಾರವನ್ನು ಸಧ್ಯಾ ಮಾರಕೂಡದೆಂದು ತಿಳಿಸಿ ಹೇಳಿದ್ದಲ್ಲದೇ ನಂಬಿಗೆ ಇಲ್ಲದಿದ್ದರೆ ಹಾಗು ಮುಂದೆ ನಷ್ಟವಾದರೆ ಸಾಯುವ ಪರಿಯಂತರ ನಿಮ್ಮಲ್ಲಿ ದುಡಿದು ನಷ್ಟವನ್ನು ತುಂಬಿಕೊಡುತ್ತೇನೆಂದು ಗುರು ಮಹಾಂತಸ್ವಾಮಿಗಳ ಮೇಲೆ ಪ್ರಮಾಣ ಹಾಕಿಕೊಂಡಿದ್ದಾನೆ. ಈಗ ಶ್ರೀಮಂತನಿಗೆ ಧರ್ಮ ಸಂಕಟ ಬಂತು. ಅವರಾದರೂ ಮುರುಗೋಡೇಶನ ಮೇಲೆ ನಂಬಿಗೆ ಇಟ್ಟು ಲಕ್ಷ ರೂಪಾಯಿ ಬೆಲೆ ಬಾಳುವಷ್ಟು ಬಂಗಾರವನ್ನು ಮಾರಾಟ ಮಾಡದೇ ಹಾಗೆ ಉಳಿಸಿದ್ದಾರೆ. ಮುಂದೆ ಹದಿನೈದು ದಿನಗಳು ಗತಿಸುವಷ್ಟರಲ್ಲಿ ಬಂಗಾರದ ಬೆಲೆ ಎರಡು ಮೂರು ಪಟ್ಟು ಮುಂದುವರೆಯಿತು. ಆಗಲು ಪಂಚಾಳಣ್ಣನನ್ನು ಕೇಳಲು ಪಂಚಾಳಣ್ಣ ಹೇಳಿದ್ದಾನೆ ಸ್ವಾಮಿಗಳ ಅಪ್ಪಣೆಯಾಗುವವರೆಗೆ ಮಾರಾಟ ಮಾಡಬೇಡಿರೆಂದು ಬೋಧಿಸಿ ತನ್ನ ನಿತ್ಯ ಕರ್ತವ್ಯದಲ್ಲಿ ಸ್ವಾಮಿಗಳ ಮುಷ್ಟಿ ಮಂಡಕ್ಕಿ ಹಾಗು ರೂಪಾಯಿ ಒಂದನ್ನು ಇನ್ನೂ ಕಾಯ್ದುಕೊಂಡು ಬಂದಿದ್ದಾನೆ. ಪ್ರತ್ಯಕ್ಷ ಮುರುಗೋಡ ಸ್ವಾಮಿಯ ದರ್ಶನ ಹೊಂದಿದಷ್ಟು ಆನಂದದಲ್ಲಿ ಅವುಗಳನ್ನು ನಿತ್ಯ ಪೂಜಿಸುತ್ತಾನೆ.

ಇತ್ತ ಸಾಹುಕಾರನ ಪ್ರೀತಿಯೊಂದು ವ್ಯವಹಾರಗಳು ಬರುಬರುತ್ತ ಅಭಿವೃದ್ಧಿ ಹೊಂದಿ ಪಂಚಾಳಪ್ಪನ ಬಗ್ಗೆ ಬಲವಾದ ವಿಶ್ವಾಸ, ಮುರುಗೋಡ ಅಜ್ಜರಲ್ಲಿ ಅತ್ಯಂತ ಭಕ್ತಿ ಬೆಳೆದು ಲಕ್ಷಾಧೀಶ ಕೋಟ್ಯಾಧೀಶ್ವರನಾದ.

ಬಳಿಕ ಆ ಕೋಟ್ಯಾಧಿಪತಿಯು ಕನಸಿನಲ್ಲಿ ಅಜ್ಜನವರು ಕಂಡು ಪಂಚಾಳ ನನ್ನು ಆಳು, ನವಕರ ಎಂದು ಕಾಣದೇ ಅವನ ಕಾಲ್ಗುಣದಿಂದ ಸಿರಿಮುಡಿಯು ಮಹಡಿಯಲ್ಲಿ ಮೆರೆಯುತ್ತಿರುವಿಯಪ್ಪಾ ಅವನಿಗಷ್ಟು ಪಾಲು ಕೊಡಬೇಕರೆಪ್ಪ ಎಂದು ಹೇಳಿದಂತಾಯಿತಂತೆ.

ಅಂತೇ ಶ್ರೀಮಂತನು ಪಂಚಾಳನ ಧರ್ಮಪತ್ನಿಯನ್ನು ಮಕ್ಕಳನ್ನು ಕರೆಯಿಸಿ, ಆತನಿಗೆ ಅರ್ಧಪಾಲು ಕೊಟ್ಟು ಲಕ್ಷಾಧೀಶನನ್ನಾಗಿ ಮಾಡಿ ತನ್ನ ಸಹಪಾಠಿ ಅಷ್ಟೇ ಏಕೆ ಸಹೋದರನ ರೀತಿಯಲ್ಲಿ ಕಾಣುತ್ತ ಪ್ರತಿ ಅಮವಾಸಿಗೆ ತನ್ನ ಹಾಗು ಅವನ ಬಳಗದೊಡನೆ ಮುರುಗೋಡ ಮಠಕ್ಕೆ ಬಂದು ಸ್ವಾಮಿ ಗಳಲ್ಲಿ ಸಕಲ ವೃತ್ತಾಂತವನ್ನು ಅರಿಕೆ ಮಾಡಿಕೊಳ್ಳುತ್ತ ಭಕ್ತಿಯ ಬೆಲಿ ಯನ್ನರಿತು ಬಾಳುವವನಾಗಿದ್ದಾನೆ. ಆಗ ಅಪ್ಪನವರು ಹುಮ್ಮಸದಿಂದ ನೋಡ್ರೆಪ್ಪಾ ಅವಗವರ ಭಾವಕ್ಕೆ ತಕ್ಕಂತೆ ಶಿವಾ ಒಲಿದು ಯಶ ನೀಡುತ್ತಾನೆ ಅಂತಾ ಹೇಳಿ ಬಿಡುತ್ತಾರೆ. ಮಹಿಮಾಶಾಲಿಗಳ ಮಾತೆ ಹಾಗೆ.

ಇಂದಿಗೂ ಪಂಚಾಳಪ್ಪನು ಮಠಕ್ಕೆ ಬಂದಾಗೊಮ್ಮೆ ತನಗೆ ಸ್ವಾಮಿಗಳು ಕೊಟ್ಟ ಮುಷ್ಟಿ ಮಂಡಕ್ಕಿ ಹಾಗು ಒಂದು ರೂಪಾಯಿಗಳ ಆಶೀರ್ವಾದ ಮಹಿಮೆಯನ್ನು ಹೇಳುತ್ತಿರುತ್ತಾನೆ. ಹಾಗು ಇವತ್ತಿಗೂ ಅವುಗಳು ಜೋಪಾನವಾಗಿ ಪೂಜೆಗೊಳ್ಳುತ್ತಿವೆ ಪಂಚಾಳಪ್ಪನ ಮನೆಯಲ್ಲಿ.



# ೩೦ ನೇ ಅಧ್ಯಾಯ

## ವಿಧವೆ ಸುಮಂಗಲಿಯಾದ ಘಟನೆ

ಭಕ್ತ ಬಳಗದಲ್ಲಿ ಅಗ್ರಸ್ಥಾನ ಪಡೆದ ಬಾಳಪ್ಪಜ್ಜ ಮೊರಬದ ಇವರು ಮುರಗೋಡದ ನಾಗರಿಕರಲ್ಲಿ ಒಬ್ಬರಾಗಿರುವರು. ಮಹಾಂತಸ್ವಾಮಿಗಳಲ್ಲಿ ಅತ್ಯಂತ ಭಕ್ತಿಯುಳ್ಳವರು, ಸೇವಾ ಭಾಗ್ಯವನ್ನು ಪಡೆದುಕೊಂಡವರು, ಅಪ್ಪನವರ ಅಸದಳವಾದ ಪ್ರೀತಿ ವಿಶ್ವಾಸಗಳಿಗೆ ಪಾತ್ರರಾದವರು. ಇವರ ಪತ್ನಿ ಸಾತವ್ವನವರಾದರು ಶಿವಯೋಗಿ ಅಜ್ಜನವರಲ್ಲಿ ಅತ್ಯಂತ ಶ್ರದ್ಧಾಭಕ್ತಿಗಳಿಂದ ನಡೆದುಕೊಳ್ಳುತ್ತಿದ್ದರು. ಅಪ್ಪನವರ ಪಾದೋದಕ ಪ್ರಸಾದವಿಲ್ಲದೇ ಏನನ್ನೂ ಸೇವಿಸುತ್ತಿದ್ದಿಲ್ಲ. ಪತಿ ಭಕ್ತಿ ಪರಾಯಣೆಯು, ಪರಹಿತ ಪ್ರೇಮಿಗಳು, ದಾಸೋಹ ಧರ್ಮವನ್ನು ಅರಿತವರು ಕಷ್ಟ ಸಹಿಸುವ ಸಾಮರ್ಥ್ಯ ಉಳ್ಳವರು ಆಗಿದ್ದರು.

ಒಮ್ಮೆ ಬಾಳಪ್ಪನವರು ಏಕಾಏಕಿ ಉಬ್ಬಸ ರೋಗದಿಂದ ಬಳಲ ಹತ್ತಿದರು. ಸಂಪೂರ್ಣ ಹಾಸಿಗೆ ಹಿಡಿದು ಅನಂತಯಾತನೆಗಳನ್ನು ಅನುಭವಿಸುವಂತಾಯಿತು. ಸಾತವ್ವತಾಯಿಯವರು ಮಾತ್ರ ಪತಿಯ ಆರೈಕೆಯಲ್ಲಿ ಸ್ವಲ್ಪವೂ ತಪ್ಪದಂತೆ ಪತಿಸೇವಾ ತತ್ಪರಳಾಗಿ ಅನುದಿನವು ಶಿವಯೋಗಿಗಳ ಬೋಧನೆಯಂತೆ ಲಿಂಗಯ್ಯನನ್ನು ನಿಷ್ಠೆಯಿಂದ ಅರ್ಚಿಸುವ ಆರಾಧಕಳಾಗಿ ನಿತ್ಯವು ಮಠಕ್ಕೆ ಬಂದು ಶಿವಯೋಗಿಗಳ ದರ್ಶನ ಪಡೆದು ಅವರ ಅಮರ ಆಶೀರ್ವಾದ ಪಡೆದು ತೀರ್ಥ ಪ್ರಸಾದಗಳನ್ನು ಸೇವಿಸಿ ಬಾಳಪ್ಪನವರಿಗೂ ಅರ್ಪಿಸಿ ಉಪಚಾರಗೈಯುತ್ತಿದ್ದಳು. ಆದರೆ ಗ್ರಾಮವಾಸಿಗಳೆಲ್ಲರು ಇದು ಬಾಳಪ್ಪಜ್ಜನನ್ನು ಉಳಿಸದ ಗಂಭೀರ ಕಾಯಿಲೆ ಎಂದು ಪಿಸು ನುಡಿಗಳಿಂದ ಮಾತನಾಡುತ್ತಿದ್ದರು.

ಆದರೆ ಸ್ವಾಮಿಗಳ ಆಶೀರ್ವಾದ ಬಲವಿಶೇಷದಿಂದ ಕೆಲವು ಕಾಲ ಗತಿಸಿ ಬಾಳಪ್ಪಜ್ಜ ಒಮ್ಮೆಂದೊಮ್ಮೆಲೇ ಶಿವಾಧೀನನಾಗುವಂತಾದನು. ಆಗ ಸಾತವ್ವತಾಯಿಗೆ ಹೇಳತೀರದಷ್ಟು ದುಃಖವಾದರೂ ತನ್ನಲ್ಲಿದ್ದ ನಿಶ್ಚಲ ಭಕ್ತಿಯನ್ನು ಪರೀಕ್ಷಿಸಬೇಕೆಂದು ಶಿವಯೋಗಿಗಳ ದೀರ್ಘ ಸುಮಂಗಲಿ ಎಂಬ

ಆಶೀರ್ವಾದವನ್ನು ಪರೀಕ್ಷೆಗೆ ಹಚ್ಚಲು ಧಾವಿಸಿ ಅಪ್ಪನವರ ಸನ್ನಿಧಾನಕ್ಕೆ ಬಂದಳು. ಅತ್ತ ವೀರಶೈವಾಚಾರ ಪದ್ಧತಿಯಂತೆ ನೆರೆ ಹೊರೆಯವರು, ಮನೆಯ ಬಳಗದವರು ಬಾಳಪ್ಪನವರ ಸ್ಮಶಾನ ಯಾತ್ರೆಗೆ ಸನ್ನದ್ಧರಾದರು. ಸಾತವ್ವತಾಯಿ ಮಾತ್ರ ಅಪ್ಪನವರ ಪಾದ ದರ್ಶನಕ್ಕೆ ಬಂದು ತನ್ನ ದುಃಖವನ್ನು ತೋಡಿಕೊಂಡು ಗೋಳೋ ಎಂದು ದುಃಖಿಸುತ್ತ ಶಿವಯೋಗಿಗಳ ಪಾದ ಹಿಡಿದವಳು ಮೇಲೆಳಲಿಲ್ಲ. ಆಗ ಶಿವಯೋಗಿಗಳು ಎಲ್ಲವನ್ನು ಅರಿತು ತಮ್ಮ ಶ್ರೀಹಸ್ತವನ್ನು ಅವಳ ಮಸ್ತಕದ ಮೇಲಿಟ್ಟು ಶ್ರೀ ಸ್ವಸ್ತಿ ಎಂದು ದೀರ್ಘ ಸುಮಂಗಲಿಯಾಗಿ ಬಾಳು ತಾಯಿ ಎಂದು ಸಂತಸದ ಸವಿವಾಣಿಯಿಂದ ಹರಸಿ ಆಶೀರ್ವದಿಸಿದರು.

ಆಗ ಸಾತವ್ವನವರು ಅಚ್ಚರಿಯ ಹುಚ್ಚಿನಲ್ಲಿ ಅಪ್ಪನವರ ಶ್ರೀಮುಖವನ್ನು ಆನಂದ ದುಃಖಾತಿರೇಕಗಳಿಂದ ಹನಿಗೂಡಿದ ಕಣ್ಣುಗಳಿಂದ ಅವಲೋಕಿಸುತ್ತ ಬುದ್ಧಿ ತಮ್ಮ ಆಶೀರ್ವಚನ ಹುಸಿಯಾಗುವ ಪ್ರಸಂಗ ಈಗಾಗಲೇ ಘಟಿಸಿದೆ ಎಂದು ನುಡಿದಳಲ್ಲದೇ ತಮ್ಮ ಅಮೃತವಾಣಿ ಹುಸಿಯಾಗದಂತೆ ನನ್ನ ಮುತ್ತೈದೆತನವನ್ನು ಕಾಪಾಡುವ ಕೃಪೆಯಾಗುವಹಾಗಲಿ ತಂದೆ ಮಹೇಶರೂಪಿ ಪರಮಾತ್ಮಾ ಎಂದು ಮತ್ತೆ ಶಿವಯೋಗಿಗಳ ಪಾದ ಹಿಡಿದವಳು ಮೇಲೇಳಲಿಲ್ಲ.

ಆಗ ಅಪ್ಪನವರು ತಮ್ಮ ಜ್ಞಾನ ಚಕ್ಷುಗಳಿಂದ ಎಲ್ಲವನ್ನು ಗುರುತಿಸಿದವರಾಗಿ ಸಾತವ್ವನವರಿಗೆ ಸಮಾಧಾನ ಹೇಳುವವರಾಗಿದ್ದಾರೆ.

ಭಕ್ತಳೆ ಶಿವನ ಕರುಣೆಯಿಂದ ಆತನ ಆಜ್ಞೆಯಂತೆ ನಿನಗೆ ದೀರ್ಘ ಸುಮಂಗಲೆ ಎಂದು ನುಡಿದು ಬಿಟ್ಟಿದ್ದೇವೆ. ಯಾವ ಉದ್ದೇಶದಿಂದ ಶಿವನು ಆ ನುಡಿಯನ್ನು ನಮ್ಮಿಂದ ಆಡಿಸಿದನೋ ಅದೇ ಉದ್ದೇಶದಿಂದ ತಾನು ನುಡಿಸಿದ ನುಡಿಯನ್ನು ಸತ್ಯಗೊಳಿಸುತ್ತಾನೆ, ಬೆದರ ಬೇಡ ಮಗಳೆ ಎಂದು ಪುನಃ ಪುನಃ ಆಶೀರ್ವದಿಸಿ ಸಮಾಧಾನದ ಹಿತವಚನಗಳಿಂದ ಸಂತೈಸಿ ಮನೆಗೆ ಕಳಿಸುವವರಾಗಿದ್ದಾರೆ.

ಇತ್ತ ಬಾಳಪ್ಪನವರು ಗಾಢ ನಿದ್ರೆಯಿಂದ ಎಚ್ಚತ್ತವನಂತೆ ಮೇಲೆಳಲು ದಹನ ಕಾರ್ಯಕ್ಕೆ ಬಂದ ಮುರುಗೋಡ ಮಹಾಜನ ಸಮೂಹವದು

ಅಚ್ಚರಿಯ ದೃಷ್ಟಿಯಿಂದ ಬಾಳಪ್ಪನ ಸ್ಥಿತಿಯನ್ನು ಕಂಡು ಚಕಿತರಾಗಿ ನಿಂತರು. ಸಾತವ್ವ ತಾಯಿ ಅಪ್ಪನವರ ಅಪ್ಪಣೆಯ ಪ್ರಕಾರ ಮನೆಯನ್ನು ಕುರಿತು ಬಂದು ನೋಡುತ್ತಿರಲು ಜನಸಮೂಹದೊಡನೆ ಬಾಳಪ್ಪ ಆನಂದದಿಂದ ಹಸನ್ಮುಖದಿಂದ ಮಾತನಾಡುತ್ತ ಕುಳಿತಿದ್ದಾನೆ. ತನಗಾದ ಅನುಭವವನ್ನು ಸ್ವಲ್ಪ ಮರೆಯದೆ ಹೇಳುತ್ತ ಸ್ವಪ್ನದಲ್ಲಿ ಯಮನಾಳುಗಳು ಬಂದು ತನ್ನನ್ನು ಯಮಲೋಕದತ್ತ ಒಯ್ಯುತ್ತಿರುವ ಸಾಹಸದಲ್ಲಿರಲು ಶಿವದೂತರು ಧಾವಿಸಿ ಬಂದು ಶಿವಭಕ್ತರಾದವರನ್ನು ಮುಟ್ಟಬೇಕಾದರೆ ಶಿವನಪ್ಪಣೆಯನ್ನು ತಂದು ಮುಟ್ಟುವ ಸಾಹಸ ಮಾಡಿರೋ ಯಮದೂತರೇ ಎಂದು ಬೆದರಿಸಲು ಶಿವ ಮಹಾದೇವನು ಕೈಲಾಸದಿಂದ ಮತ್ತೋರ್ವ ಶಿವ ದೂತನನ್ನು ಕಳುಹಿಸಿ ಈತನಿಗೆ ಶಿವಯೋಗಿಗಳ ಅಮೃತವಾಣಿಯ ಆಸರ ಸಿಕ್ಕಿದೆ. ಮೇಲಾಗಿ ಇವನು ಶಿವ ಪ್ರೇಮವನ್ನು ಗಳಿಸಿದ ಪುಣ್ಯವಂತ ಮಹಾಂತ ಶಿವಯೋಗಿಗಳ ಕರುಣೆಯ ಪ್ರಸಾದದಿಂದ ಪುನೀತನಾದ ಪುಣ್ಯಾತ್ಮ, ಮೇಲಾಗಿ ಶಿವಯೋಗಿಗಳ ಅಮರವಾಣಿಯಂತೆ ಈತನ ಹೆಂಡತಿ ದೀರ್ಘಸುಮಂಗಲೆಯು ಎಂದು ಬೆದರಿಸಲು ನನ್ನನ್ನು ಬಿಟ್ಟು ಹೋಗುವವರಾದರೂ ಎಂದು ಹೇಳಿದನು.

ಮುಂದೆ ಶಿವಯೋಗಿಗಳ ವಾಣಿಯಂತೆ ಮತ್ತೆ ಐದು ವರುಷ ಕಾಲ ಬದುಕಿದ್ದ ಬಾಳಪ್ಪಜ್ಜನು ಸತಿಯಳಾದ ಸಾತವ್ವನು ಶಿವ ಸಾಯುಜ್ಯ ಪಡೆದ ನಂತರ ತಾನು ದೇಹಾವಸಾನ ಹೊಂದಿದನ !

ಈ ಘಟನೆಯನ್ನು ಪ್ರತ್ಯಕ್ಷ ಕಂಡ ಭಕ್ತ ಜನತೆ ಮಹಾಂತಸ್ವಾಮಿಗಳ ಮಹಿಮೆ ಆಗಾಧವಾದದ್ದು, ಅಗಮ್ಯವಾದದ್ದು ಲೀಲಾ ಪುರುಷ ನಮ್ಮ ಮಹಾಂತ ಶಿವಯೋಗಿ ಅಜ್ಜನವರೆಂದು, ಅವರ ಅಮರವಾಣಿಯಿಂದ ಮರಣ ವನ್ನು ಗೆಲಿಯುವ ಶಕ್ತಿ ಸಾಮರ್ಥ್ಯ ಪಡೆಯಬಹುದೆಂದು ಆನಂದದಿಂದ ಕುಣಿದಾಡಿದರು. ಅಲ್ಲದೇ ಅಪ್ಪನವರ ಶ್ರೀವಾಣಿಯಾದ ಶ್ರೀಸ್ವಸ್ತಿ ಶಬ್ದ ವೆಂದರೆ ಸಂಜೀವಿನಿಯ ರಸಪಾಕವೆಂದರಿತು ದುರಿತ ಧರ್ಮದ ದುರ್ಮರಣ ದಿಂದ ದೂರಾಗಲು ಶ್ರೀ ಮಹಾಂತಸ್ವಾಮಿಗಳಂತಹ ಪವಾಡ ಪುರುಷೋತ್ತ

ಮರ ಪಾದವ ಪಿಡಿದು ಮುನ್ನಡೆವ ಮಾನವ ನಿಜಕ್ಕೂ ಪುಣ್ಯಶಾಲಿ ಎಂದು ಹಾಡಿ ಆನಂದಿಸಿದರು.



## ೩೧ ನೇ ಅಧ್ಯಾಯ

### ಭಕ್ತೋದ್ಧಾರಕ್ಕಾಗಿ ಅಪ್ಪನವರು ತಮ್ಮ ಪೂರ್ವ ನಿರ್ಧಾರವನ್ನು ಬದಲಿಸಿದ್ದು

ಮುರುಗೋಡಕ್ಕೆ ಸಮೀಪದಲ್ಲಿರುವ ಬೈಲಹೊಂಗಲ ಗ್ರಾಮವು ತಾಲೂಕ ಸ್ಥಳವಿದ್ದು, ಅನೇಕ ರಂಗಗಳಲ್ಲಿ ತನ್ನದೇ ಆದ ವೈಶಿಷ್ಟ್ಯವನ್ನು ಹೊಂದಿದೆ. ಅಲ್ಲಿಯ ಜನತೆಗೆ ಮಹಾಂತಜ್ಜನವರಲ್ಲಿ ಎಲ್ಲಿಲ್ಲದ ಭಕ್ತಿ, ವಿಶ್ವಾಸ. ಬೈಲಹೊಂಗಲದ ನಿವಾಸಿಯಾದ ವಿರುಪಾಕ್ಷಪ್ಪ ಹೂಲಿ (ಗಡಬಿಡಿ) ಎಂಬವನು ಅಜ್ಜನವರ ಭಕ್ತವೃಂದದಲ್ಲಿಯೇ ನಿಸ್ಸೀಮನೆನ್ನಬಹುದು. ಆತನ ಸಾತ್ವಿಕತೆಯ ಪರೀಕ್ಷೆಯ ಕಾಲವೋ, ಅಜ್ಜನವರ ದೈವೀಶಕ್ತಿಯ ಪ್ರಕಟನೆಯ ಸಂಯೋಗವೋ ಎನ್ನುವಂತೆ ವಿರುಪಾಕ್ಷಪ್ಪನಿಗೆ ಭಯಂಕರ ರೋಗವೊಂದು ಅಂಟಿಕೊಂಡಿತು. ಈ ಮಹಾರೋಗ ನಿವಾರಣೆಗಾಗಿ ಎಲ್ಲ ತರದ ಔಷಧೋಪಚಾರ ಮಾಡಲಾಯಿತು. ಪ್ರತಿಫಲವಾಗಿ ರೋಗ ಉಲ್ಬಣವಾಯಿತೇ ವಿನಃ ಕಡಿಮೆಯಾಗುವ ಲಕ್ಷಣವೇ ಕಾಣಲಿಲ್ಲ. ವಿರುಪಾಕ್ಷಪ್ಪನ ಬಳಲುವ ಸ್ಥಿತಿ ಕಂಡು ಮನೆಯವರೂ, ಆಪ್ತೇಷ್ಟರೆಲ್ಲರೂ ಕಳವಳಗೊಂಡು ಕೊನೆಗೆ ಬೆಳಗಾಂವಿಗೆ ಹೋಗಿ ಪ್ರಸಿದ್ಧ ಸರ್ಜನ್‌ರಾದ ಡಾ|| ಜೀರಗಿಯವರಿಂದ ಹೆಚ್ಚಿನ ಚಿಕಿತ್ಸೆ ಮಾಡಿಸಿದರು. ಆದರೂ ವಿರುಪಾಕ್ಷಪ್ಪನ ದೇಹಸ್ಥಿತಿ ಆಶಾದಾಯಕವಾಗಲಿಲ್ಲ. ಡಾ|| ಜೀರಗಿಯವರು ಸಹ ಈ ರೋಗಿಯ ಬಗ್ಗೆ ನಿರಾಶೆ ಹೊಂದಿ, ತೀವ್ರ ಊರಿಗೆ ಒಯ್ಯುವದು ವಿಹಿತವೆಂದು ತಿಳಿಸಿದರು.

ಡಾಕ್ಟರರ ಅಭಿಪ್ರಾಯವೇ ಹೀಗೆ ಬಂದಾಗ ಮನೆಯವರ ಆಸೆ ನಿರಾಸೆಯಾಯಿತು. ಖರ್ಚು ಮಾಡಿದ ಹಣ ಹೊಳೆಯಲ್ಲಿ ಹೋಮ ಸುಟ್ಟ

ಹಾಗಾಯಿತು. ಕೊನೆಗೂ ಯಜಮಾನನನ್ನು ಉಳಿಸಿಕೊಳ್ಳುವ ಭಾಗ್ಯ ನಮ್ಮದಿಲ್ಲವೆಂದು ಹಳಹಳಿಸುತ್ತ ಊರಿಗೆ ತೆಗೆದುಕೊಂಡು ಬಂದರು.

ಈಗ ರೋಗಿಗೆ ಮೈಮೇಲೆ ಸ್ಮೃತಿ ಇಲ್ಲ. ಆಗೊಂದು ಈಗೊಂದು ಮಾತು ಬಂದರೆ ಅದು ಅವನ ಬಳಗದವರ ಬಲವಾದ ಪುಣ್ಯವೆನಬೇಕು ಎಚ್ಚರದಪ್ಪಿದ ವಿರುಪಾಕ್ಷಪ್ಪನು ಕನಸಿನಲ್ಲಿಯೂ ಸಹ ಮುರುಗೋಡ ಮಠಕ್ಕೆ ಒಯ್ಯಿರೆಂದು ಬಡಬಡಿಸುತ್ತ ತೊದಲು ನುಡಿ ನುಡಿಯುತ್ತಿದ್ದನು.

ಆದರೆ ಅವನ ದುರ್ದೈವದಿಂದ ಮುರುಗೋಡ ಶ್ರೀ ಮಹಾಂತಪ್ಪಗಳು ಅರಭಾವಿ ಮಠಕ್ಕೆ ಹೋಗಿದ್ದರು. ಅವರು ಮುರುಗೋಡ ಮಠಕ್ಕೆ ಬರುವ ದಿವಸ ಈತನ ಹಂಬಲ ಅತೀಯಾಯಿತು. ನಾನು ಸಾಯುತ್ತೇನೆ ನನಗೆ ಕೊನೆ ಬಾರಿ ಅರಭಾವಿ ಶ್ರೀಗಳ ಪಾದೋದಕ, ದರ್ಶನ ಲಾಭ ದೊರೆತರೆ ನಿಶ್ಚಿಂತೆಯಿಂದ ಪ್ರಾಣ ಬಿಡುತ್ತೇನೆ ಇದಷ್ಟು ಅನುಕೂಲ ಮಾಡಿ ಪುಣ್ಯ ಕಟ್ಟಿಕೊಳ್ಳಿರಿ ಎಂದು ದೈನ್ಯವಾಗಿ ಬೇಡಿಕೊಳ್ಳ ಹತ್ತಿದನು.

ಆಗ ವಿರುಪಾಕ್ಷಪ್ಪನ ಬಂಧುಗಳು ಶ್ರೀಗುರು ಅಜ್ಜನವರನ್ನು ಕರೆತರಲು ಮೋಟಾರ ತಕ್ಕೊಂಡು ಅರಭಾವಿಗೆ ಹೊರಟು ಅರ್ಧದಾರಿ ಹೋಗಿರಲು ಶ್ರೀಗುರು ಮಹಾಂತಜ್ಜನವರು ಎದುರಾಗಿ ಮುರುಗೋಡಕ್ಕೆ ಹೊರಟು ಬಂದರು. ಆದರೆ ಹಲವು ಕಾರಣಗಳಿಂದ ಅಜ್ಜನವರು ಬೈಲಹೊಂಗಲ ಗ್ರಾಮದಲ್ಲಿ ನಿಲ್ಲುತ್ತಿದ್ದಿಲ್ಲವೆಂದು ಎಲ್ಲರಿಗೂ ಗೊತ್ತಿತ್ತು. ಆದ್ದರಿಂದ ಬೈಲ ಹೊಂಗಲಕ್ಕೆ ನಮ್ಮ ಮನೆಗೆ ದಯಮಾಡಿಸಬೇಕೆಂದು ಹೇಳಲು ಅಂಜಿ ಹಿಂಜರಿಯ ಹತ್ತಿದರು ವಿರುಪಾಕ್ಷಪ್ಪನ ಬಳಗದವರು.

ಅಜ್ಜನವರೇ ಮಮತೆಯಿಂದ ಈಗೇಕೆ ಬಂದಿರಿ ಹಾಗು ನಡುದಾರಿ ಯಲ್ಲಿ ನಮ್ಮನ್ನು ಏಕೆ ನಿಲ್ಲಿಸಿದಿರಿ ಎಂದು ಕೇಳಿದರು.

ಆಗ ಅಪ್ಪಾ ಅವರೆ ನಮ್ಮ ಬಂಧುವಾದ ವಿರುಪಾಕ್ಷಪ್ಪ ಉಳಿಯು ವಂತಿಲ್ಲ. ಆದರೆ ಕೊನೆಯ ಬಾರಿಯ ತಮ್ಮ ದರ್ಶನಕ್ಕೆ ಹಂಬಲಿಸುತ್ತಿದ್ದಾನೆ ಮನೆಯವರೆಗೆ ದಯಮಾಡಿಸುವದಾಗಬೇಕೆಂದು ಬಿನ್ನೈಸಿಕೊಂಡರು.

ಆಗ ಅಜ್ಜನವರು ಭಕ್ತನ ಸ್ಥಿತಿಯನ್ನು ಕೇಳಿ ಮರ ಮರ ಮರುಗುತ್ತ ಕೂಡಲೇ ಬೈಲಹೊಂಗಲಕ್ಕೆ ಹೊರಟು ಭಕ್ತನ ಮನೆಯುವರೆಗೂ ಹೋಗಿ ಅವನ ಮನದಾಸೆಯನ್ನು ತಾವೇ ಕೇಳಿದರು. ಆದಕ್ಕೆ ಭಕ್ತ ವಿರುಪಾಕ್ಷಪ್ಪನು ಶ್ರೀಗಳನ್ನು ಆನಂದ ತುಂಬಿದ ಕಣ್ಣುಗಳಿಂದ ನೋಡಿ ಪಾದಕ್ಕೆ ಹಣೆ ಹಚ್ಚಿ ಅಜ್ಜಾ ಕೊನೆಯ ಗಳಿಗೆಯಲ್ಲಿ ತಮ್ಮ ದರ್ಶನದಿಂದ ಪುನೀತನಾದೆನು, ಪುಣ್ಯ ಜೀವಿಯಾದೆನು. ಆದರೆ ನನ್ನ ಮನದಾಸೆಯಂತೆ ತಮ್ಮ ಪಾದೋದಕ ಪ್ರಸಾದಗಳನ್ನು ದಯಪಾಲಿಸುವ ಕೃಪೆಯಾಗಬೇಕು. ಇಲ್ಲವಾದರೆ ಇನ್ನು ಮೇಲೆ ಏನೂ ತೆಗೆದುಕೊಳ್ಳದೇ ಪ್ರಾಣ ಬಿಡುತ್ತೇನೆ ಎಂದು ಅಜ್ಜನವರ ಚರಣಗಳನ್ನು ಬಿಡದೆ ಮಾತನಾಡಹತ್ತಿದನು.

ಅಜ್ಜನವರು ಭಕ್ತ ವಿರುಪಾಕ್ಷಪ್ಪನ ಮಾತಿಗೆ ಒಪ್ಪಿದರಾದರೂ ಹಲವು ಕಾರಣಗಳ ಮೂಲಕ ಬೈಲಹೊಂಗಲ ಗ್ರಾಮದಲ್ಲಿ ಸ್ನಾನ ಪೂಜಾದಿ ಕಾರ್ಯಗಳನ್ನು ಜರುಗಿಸಲಾರೆವೆಂದು ನಿರ್ಧರಿಸಿದ್ದರು.ಆದರೆ ಭಕ್ತನ ಮನ ನೋಯಿಸಲಾರದೆ ಅವನ ಆಸೆಯನ್ನು ತೀರಿಸಬೇಕೆಂಬ ಭಕ್ತ ಪ್ರೇಮದಲ್ಲಿ ಸಿಲುಕಿ ತಮ್ಮ ಮೊದಲಿನ ನಿರ್ಧಾರವನ್ನು ಮುರಿಯಬೇಕಾಯಿತು. ಅಜ್ಜನವರು ತಮ್ಮ ನಿರ್ಧಾರವನ್ನು ಬದಲಿಸಿದ್ದು ಕಂಡ ಅನೇಕ ಭಕ್ತರು ನಿರ್ಣಯ ಕಠೋರ ವಿಷಯಗಳನ್ನು ಖಂಡಿತವಾಗಿ ಪಾಲಿಸುವ ಶ್ರೀಗುರು ಮಹಾಂತ ಸ್ವಾಮಿಗಳು ಭಕ್ತನ ಭಕ್ತಿ ಪಾಶಕ್ಕೆ ಒಳಗಾಗಿ ಈ ಕ್ರಮ ಕೈಕೊಂಡರೆಂದು ಸ್ತುತಿಸಿದರು.

ಬಳಿಕ ಅಜ್ಜನವರು ತಮ್ಮ ಸ್ನಾನ ಪೂಜಾದಿ ಕಾರ್ಯ ಮುಗಿಸಿ ಭಕ್ತನಿಗೆ ತೀರ್ಥ ಪ್ರಸಾದ ಕರುಣಿಸಿ ಮುರುಗೋಡ ಮಠಕ್ಕೆ ದಯಮಾಡಿಸಿದರು. ಅಂದಿನ ದಿವಸ ವಿರುಪಾಕ್ಷಪ್ಪನು ಸುಖ ನಿದ್ರೆಯಲ್ಲಿ ರಾತ್ರಿಯನ್ನು ಕಳೆದನು. ಮರುದಿನದ ಮಧ್ಯಾಹ್ನ ಹನ್ನೆರಡು ಘಂಟೆಯುವರೆಗೆ ಅವಧಿಯನ್ನು ಹೇಳಿದ ಡಾಕ್ಟರ ಜೀರಗಿಯವರ ಅವಧಿ ಸರಿದು ಮೃತ್ಯುಂಜಯ ಸ್ವರೂಪಿ ಅಜ್ಜನವರ ತೀರ್ಥ ಪ್ರಸಾದಗಳೆಂಬ ಔಷಧೋಪಚಾರದಿಂದ ಬದುಕಿದ ವಿರುಪಾಕ್ಷಪ್ಪ ಸತ್ಯ ಘಟನೆಯಲ್ಲಿ ಕಂಗೊಳಿಸುತ್ತಿದ್ದನು.

ಆಗ ಬಂಧುಗಳಿಗೆ ಆಶ್ಚರ್ಯವಾಗಿ ತಿರುಗಿ ಡಾಕ್ಟರರನ್ನು ಕರೆದುಕೊಂಡು ಬಂದು ಅಣ್ಣನ ಶರೀರ ಪರೀಕ್ಷೆ ಮಾಡಿಸಲು ಸಾವು ನಿಶ್ಚಿತವೆಂದು ಹೇಳಿದ ಸರ್ಜನ್‌ರಿಗೆ ಆಶ್ಚರ್ಯವಾಗಿ ಬೇರೆ ಯಾವದಾದರು ಇಂಜಕ್ಷನ್ನ ಔಷಧ ಕೊಟ್ಟಿದ್ದೀರಾ ? ರೋಗಿಯ ಪ್ರಕೃತಿಯು ನಿನ್ನಿನಕಿಂತಲೂ ಇಂದು ಬಹಳ ಸುಧಾರಿಸಿದೆ ಎಂದು ಕೇಳಿದರು.

ಅದಕ್ಕೆ ಬಂಧುಗಳು ಮಹಾಂತಸ್ವಾಮಿಗಳ ತೀರ್ಥ ಪ್ರಸಾದವೆಂಬ ಮದ್ದು ಕೊಟ್ಟದ್ದು ಮಾತ್ರ ನಿಜ. ಬೇರಾವ ಮದ್ದನ್ನು ನಮ್ಮಣ್ಣ ಮುಟ್ಟ ದವನಾಗಿದ್ದಾನೆ ಎಂದು ಹೇಳಿದರು.

ಆಗ ಡಾಕ್ಟರರು ಬೆರಗಾಗಿ ಬೆರಳು ಕಚ್ಚುತ್ತ ಪರಂಜ್ಯೋತಿ ಸ್ವರೂಪ ರಾದ ಮಹಾಂತಪ್ಪಗಳ ಮಹಿಮೆ ಅರಿಯುವದು ಅಗಾಧವೆಂದು, ಅವರ ಮಹಿಮೆ ಸಾಮಾನ್ಯ ಪಾಮರ ಮನುಜರಿಗೆ ತಿಳಿಯುವದು ಅಸಾಧ್ಯವೆಂದು ಶ್ರೀಗಳನ್ನು ಹೊಗಳುತ್ತ ಈ ರೋಗಿಗೆ ಇನ್ನಾವ ಭಯವಿಲ್ಲವೆಂದು ಭರವಸೆ ಕೊಟ್ಟರು.

ಬರು ಬರುತ್ತ ವಿರುಪಾಕ್ಷಪ್ಪನಿಗೆ ಗುಣವಾಗಿ ಶ್ರೀಗುರು ಮಹಾಂತಜ್ಜ ನವರ ನಿಜಭಕ್ತನೆನಿಸಿ ಮತ್ತೆಂಟು ವರುಷವಾಯಿತು. ರೋಗದ ಬಳಲಿಕೆ ಯನ್ನರಿಯದೆ ಸಂತೋಷದಿಂದ ಇನ್ನೂ ಬದುಕಿದ್ದಾನೆ.

ಬಳಿಕ ಬೈಲಹೊಂಗಲ ಜನತೆಯು ತಮ್ಮತಮ್ಮಲ್ಲಿಯೇ ಮಾತನಾಡಿ ಕೊಳ್ಳುತ್ತ ಪೂಜ್ಯರು ಭಕ್ತರ ಉದ್ಧಾರಕ್ಕಾಗಿ ತಮ್ಮ ನಿರ್ಧಾರವನ್ನು ಸಹ ಬದಲಿಸಿ ಬಕ್ತರನ್ನು ಸಂತೋಷಗೊಳಿಸುವ ರೀತಿಯಲ್ಲಿಯೂ ಒಂದು ತರಹದ ಪವಾಡವು ಅಡಗಿರುತ್ತದೆ ಎಂದು ಹೆಮ್ಮೆಯ ಉದ್ಗಾರ ತೆಗೆದರು.



# ೩೨ ನೇ ಅಧ್ಯಾಯ

## ಮಹಾಂತಯ್ಯನವರು ಜಂಗಮ ವೇಷದಲ್ಲಿ ಕಳ್ಳರ ಸುಳಿವು ತಿಳಿಸಿ ಮಾಯವಾದದ್ದು

ಶ್ರೀ ದುರದುಂಡೀಶನ ಸದ್ಭಕ್ತ ಮಂಡಳಿಯು ಕರ್ನಾಟಕ ಮೂಲೆ ಮೂಲೆಗಳಲ್ಲಿ ವಾಸಿಸುತ್ತಿರುವರೆನ್ನುವದಕ್ಕೆ ನಿದರ್ಶನವಾಗಿ ಮಲ್ಲಾಪೂರ ಗ್ರಾಮದಲ್ಲಿ ಕಾಡದವರ ಮನೆತನದವರು ಶ್ರೀ ದುರದುಂಡೀಶ್ವರನಲ್ಲಿ ಅನನ್ಯ ಭಕ್ತಿ, ವಿಶ್ವಾಸಗಳಿಂದ ನಡೆದುಕೊಳ್ಳುತ್ತಿದ್ದರು.

ಅಪ್ಪನವರು ಮಠಕ್ಕೆ ಬರುವ ಭಕ್ತರಿಗೆ ಮನವು ನಿಶ್ಚಲವಾಗಿ, ಬಾಳಿನ ಸತ್ಯಗುರಿಯನ್ನು ಮುಟ್ಟುವಂತೆ ಬೋಧಿಸುತ್ತಿದ್ದರು. ಅಪ್ಪನವರ ಸತ್ಯ ಬೋಧಾಮೃತವನ್ನುಂಡು ಅದರಂತೆ ಭಕ್ತಿಯಿಂದ ನಡೆದುಕೊಳ್ಳುವ ಕಾಡದವರ ಮನೆಗೆ ಒಮ್ಮೆ ಕಳ್ಳರು ಪ್ರವೇಶಮಾಡಿ ಇದ್ದ ಬದುಕನ್ನು ಅಪಹರಿಸಿಕೊಂಡು ಪಾರಾಗಬೇಕೆನ್ನುವಷ್ಟರಲ್ಲಿ ದಿವ್ಯಕಾಂತಿಯಿಂದ ಕಂಗೊಳಿಸುವ ಜಂಗಮಯ್ಯನು ಮನೆಯವರಿಗೆ ಕೇಳಿಸುವಂತೆ, ಸುತ್ತಲಿನ ಜನತೆ ಎಚ್ಚರಗೊಳ್ಳುವಂತೆ ಶಿವನಾಮ ಸಂಕೀರ್ತನೆ ಮಾಡುತ್ತ, ಗದ್ದಲವಾಗುವಂತೆ ಎಲ್ಲರಿಗೂ ಭಾಸವಾಯಿತು. ಅಜು ಬಾಜು ಮನೆಯವರು ಎಚ್ಚರಗೊಂಡು ಮನೆಯವರೆಲ್ಲರೂ ಎಚ್ಚತ್ತು ಕಳ್ಳರು ಕಳ್ಳರು ಎಂದು ಗದ್ದಲ ಮಾಡಲು ಕಳ್ಳರು ಕೈಗೆ ಬಂದ ತುತ್ತು ಬಾಯಿಗೆ ಬಾರದಾಯಿತಲ್ಲಾ ಎಂದು ಕಟ್ಟಿದ ಬದುಕಿನ ಗಂಟು (ಹಣ, ವಸ್ತು, ಒಡವೆ) ಅಲ್ಲಿಯೇ ಬಿಟ್ಟು ಬದುಕಿದರೆ ಸಾಕೆಂಬ ಭಯದಿಂದ ಪರಾರಿಯಾದರು.

ಅಷ್ಟರಲ್ಲಿ ಹಲವಾರು ಜನರು ಕಾಡದ ಬಸವಪ್ಪನವರ ಮನೆಯಲ್ಲಿ ಗುಂಪುಗೂಡಿ ಏನಿದು ಎಂದು ವಿಚಾರಮಾಡಿದರಲ್ಲದೇ ನಿಮ್ಮ ಮನೆಯ ಮುಂದಿನ ಅಂಗಳದಲ್ಲಿ ಓರ್ವ ಜಂಗಮ ಮೂರ್ತಿಯು ಈ ಅಪರಾತ್ರಿಯ ವೇಳೆಯಲ್ಲಿ ಶಿವಭಜನೆ ಮಾಡಿದಂತೆ ನಮ್ಮೆಲ್ಲರಿಗೆ ಕೇಳಿಸಿ ಎಚ್ಚರವಾಗಿ ಬಂದು ಇಲ್ಲಿ ನೋಡಿದಾಗ ಜಂಗಮನಿಲ್ಲಾ ಯಾರೂ ಇಲ್ಲ. ಆದರೆ ಈ ಗದ್ದಲ ಸುರುವಾಗಿತ್ತು ಎಂದು ಬಸಪ್ಪನನ್ನು ವಿಚಾರಿಸಿದರು.

ಆಗ ಬಸವಪ್ಪಶೆಟ್ಟಿಯು ತನಗೂ ಅದೇ ತರಹದ ಅನುಭವವಾಗಿದ್ದಲ್ಲದೇ ಸಾಕ್ಷಾತ್ ಶ್ರೀಗುರು ದುರದುಂಡೀಶ ಪ್ರಿಯ ಮಹಾಂತಸ್ವಾಮಿಗಳೇ ಆ ರೀತಿ ಶಿವಕೀರ್ತನೆಯ ಗದ್ದಲಮಾಡಿ ನಮ್ಮನ್ನು ಎಚ್ಚರಗೊಳಿಸಿದಂತಾಯಿತು. ಆದರೆ ಎದ್ದು ನೋಡಿದರೆ ಸ್ವಾಮಿಗಳ ಪುಣ್ಯದರ್ಶನದ ಬದಲು ಬದುಕಿನ ಗಂಟು ಅಪಹರಿಸುತ್ತಿದ್ದ ಕೀಳು ಕಳ್ಳರ ದರ್ಶನವಾಯಿತು. ಕೀಳು ದರ್ಶನ ಎನ್ನುವದಕ್ಕಿಂತ ಸ್ವಾಮಿಯ ಕರುಣಾ ದೃಷ್ಟಿ ನಮ್ಮ ಮೇಲಿರುವದರಿಂದ ಆ ಪ್ರಸಂಗವೂ ಪುಣ್ಯದರ್ಶನವೆಂದೇ ತಿಳಿಯಬೇಕೆಂದು ಕೂಡಿದ ಜನರೊಡನೆ ಸ್ವಾಮಿ ಶ್ರೀ ಗುರು ಮಹಾಂತಜ್ಜನವರ ಮಹಿಮೆಯನ್ನು ಕೊಂಡಾಡುತ್ತ ನನ್ನ ಜೀವನದ ಉಸುರುಸಿರಿನಲ್ಲಿ ಸ್ಥಿರವಾಗಿರು ತಂದೆ ಎಂದು ಭಕ್ತಿ ಭಾವದಿಂದ ಕರಮುಗಿದು ಕಣ್ಮುಚ್ಚಿ ಶ್ರೀಗುರು ದುರದುಂಡಿ ಮಹಾಂತ ಸ್ವಾಮಿಗಳನ್ನು ಸ್ಮರಿಸುವವನಾದನು. ಆಗ ಜನರು ಬಸವಪ್ಪಶೆಟ್ಟಿಯ ಭಕ್ತಿ ಪರವಶತೆಗೆ ಬೆರಗಾಗಿ ನಿಂತರು.

## ಪ್ರಸಾದ ಮಹಿಮೆಯಿಂದ ಬಡತನ ದೂರಾದದ್ದು

ಮುಂದೆ ಅದೇ ಕಾಡದ ಬಸವಪ್ಪನವರ ಸೊಸೆ ಶಿದ್ದಮ್ಮನು ಅರಭಾವಿ ಮಠದಿಂದ ಶ್ರೀಗಳವರ ದರ್ಶನದಿಂದ ಬರುವಾಗ ಶ್ರೀಗುರು ಅಜ್ಜನವರು ಪ್ರೀತಿಯಿಂದ ಭಕ್ತಪ್ರಿಯತೆಯ ಗುರುತಾಗಿ ಪ್ರಸಾದವನ್ನು ಕೊಟ್ಟು ಆಶೀರ್ವದಿಸಿದರು.

ಆದರೆ ಸಿದ್ದಮ್ಮನು ಏನೋ ಒಂದು ತರದ ಮರುವಿನ ಮಾಯೆಯಲ್ಲಿ ಸಿಲುಕಿ ಸೆರಗಿನಲ್ಲಿ ಕಟ್ಟಿಕೊಂಡು ಬಂದ ಶ್ರೀಗಳ ಪ್ರಸಾದವು ಜಾರಿ ಕೆಳಗೆ ಬಿದ್ದುಹೋಯಿತು. ಮುಂದೆ ಬರಬರುತ್ತ ಪ್ರಸಾದ ನಾಶಹೊಂದಿದಂತೆ ಕಾಡದವರ ಮನೆತನದ ಸಂಪತ್ತು ನಾಶವಾಗುತ್ತ ಸಂಪೂರ್ಣ ಬಡತನದ ಭವಣೆಯನ್ನು ಅನುಭವಿಸುವ ಸ್ಥಿತಿ ಬಂದೊದಗಿತು.

ಅಷ್ಟಾದರೂ ಬಸವಪ್ಪ ಶೆಟ್ಟಿಯಾಗಲಿ, ಸೊಸೆ ಶಿದ್ದಮ್ಮನಾಗಲಿ ಇನ್ನುಳಿದ ಮನೆಯ ಸಮ್ಮಂಧಿಕರಾಗಲಿ ಶ್ರೀ ದುರದುಂಡೀಶನ ಮೇಲಿದ್ದ

ತಮ್ಮ ಭಕ್ತಿ ವಿಶ್ವಾಸಗಳನ್ನು ಕಡಿಮೆ ಮಾಡಲಿಲ್ಲ. ಏನೇ ಕಷ್ಟ ಬಂದರೂ ಅಜ್ಜಾ ಗುರುವೆ ಶ್ರೀ ದುರದುಂಡೀ ಮಹಾಂತೇಶಾ ಎಲ್ಲವೂ ನಿನ್ನ ಕರುಣೆ ಮಹಿಮೆ. ನೀ ಕರುಣಿಸಿದಂತೆ ಕುಣಿದು ಈ ಜೀವನ ರಂಗದ ಪಾತ್ರ ಪರಿಚಯವನ್ನು ಮುಗಿಸುವದಷ್ಟೆ ನಮ್ಮ ಕರ್ತವ್ಯವೆಂದು ಪ್ರತಿಯೊಂದಕ್ಕೂ ಶ್ರೀಗುರು ದುರದುಂಡೀ ಮಹಾಂತೇಶನೇ ಕಾರಣನೆಂದು ಸ್ವಾಮಿಗಳಲ್ಲಿ ಬಿನ್ನೈಸುವದು ಅವರ ನಿತ್ಯ ಕರ್ತವ್ಯವಾಗಿತ್ತು.

ಅಷ್ಟಾದ ಬಳಿಕ ಅವರ ಕಷ್ಟ ಪರಂಪರೆಯನ್ನು ಕೇಳಿ ಕಂಡು ಶ್ರೀಗುರು ಮಹಾಂತಸ್ವಾಮಿಗಳಿಗೆ ಕರುಣೆ ಹುಟ್ಟಿ, ಜಂಗಮ ವೇಷದಲ್ಲಿ ಅವರ ಮನೆಯ ವರೆಗೆ ಹೋಗಿ, ಜೋಳಿಗೆಯಿಂದ ಪ್ರಸಾದವನ್ನು ತೆಗೆದು ಅಮ್ಮಾ ಮಗಳೇ ಇದು ಶ್ರೀಗುರು ದುರದುಂಡೀಶನ ಪ್ರಸಾದವೆಂದೇ ಭಾವಿಸಿ ಮನೆಯವರೆಲ್ಲರೂ ಭಕ್ತಿಯಿಂದ ಸ್ವೀಕರಿಸಿರಿ, ಶಿವ ಒಳ್ಳೇದು ಮಾಡತಾನಮ್ಮಾ ಎಂದು ಕೊಟ್ಟ ಹೊರಳಿ ನೋಡುವಷ್ಟರಲ್ಲಿ ಜಂಗಮ ರೂಪದಿಂದ ಬಂದ ಶ್ರೀ ಮಹಾಂತಜ್ಜ ಕಾಣೆಯಾಗಿದ್ದನು.

ಮುಂದೆ ಬರುಬರುತ್ತ ಕಾಡದವರ ಮನೆತನ ಮತ್ತೇ ಉರ್ಜಿತಾವಸ್ಥೆಯಲ್ಲಿ ಉತ್ತಮ ಬದುಕಿನಲ್ಲಿ, ಶಿರಿತನದ ಸೊಬಗಿನಿಂದ ಬೆಳಗುವಂತಾಯಿತು. ಪ್ರಸಾದ ಕಳೆದು ಬಡತನ ಕರುಣಿಸಿದ ಶ್ರೀಗುರು ದುರದುಂಡೀ ಮಹಾಂತಜ್ಜನು ಜಂಗಮ ರೂಪದಲ್ಲಿ ಬಂದು ಪ್ರಸಾದಕೊಟ್ಟು, ಶಿರಿತನವನ್ನಿತ್ತ ಪರಿಯಿಂದ ಭಕ್ತ ಬಸವಪ್ಪ ಶೆಟ್ಟಿಯ ಬಳಗವು ಇದೆಲ್ಲವೂ ಶ್ರೀಗುರು ಮಹಾಂತಸ್ವಾಮಿಗಳ ಆಶೀರ್ವಾದ ಫಲವೆಂದು ಹೆಮ್ಮೆಯಿಂದ ಹೇಳಿ ಭಕ್ತಿ ವಿಶ್ವಾಸದಿಂದ ನಡೆದು ಕೊಳ್ಳುವವರಾದರು. ಬರುಬರುತ್ತ ಬಸವಪ್ಪ ಶೆಟ್ಟಿಯ ಬಳಗದವರು ಅರಭಾವಿ ಮಠದ ಶ್ರೀಗಳಲ್ಲಿ ಅನನ್ಯ ಭಕ್ತಿ ವಿಶ್ವಾಸಗಳಿಂದ ನಡೆಯ ಹತ್ತಿದ ಕಾರಣದಿಂದ ಪುತ್ರ ಪೌತ್ರಾದಿ ಎಲ್ಲರೂ ಸುಖ-ಶಾಂತಿಯಿಂದ ಬಾಳಿ ಸೌಖ್ಯಾನಂದ ಜೀವನದಲ್ಲಿ ಕಾಲ ಕಳೆಯುವಂತಾಯಿತು.

## ಬಸವಪ್ಪಶೆಟ್ಟಿಯ ಮಗನ ಹೋದ ಪ್ರಾಣ ಮರಳಿ ಬಂದದ್ದು

ಒಮ್ಮೆ ಅದೇ ಬಸವಪ್ಪಶೆಟ್ಟಿಯ ಮಗ ಬಸವಲಿಂಗನಿಗೆ ಬಿಡದಾದ ಕಾಹಿಲೆ ಅಂಟಿಕೊಂಡು ಕಾಡಹತ್ತಿತು. ಆದರೂ ಶೆಟ್ಟಿಯು ಶ್ರೀಗಳ ಮೇಲೆ

ಭಾರ ಹಾಕಿ ಶ್ರೀ ದುರುದುಂಡೀ ಮಹಾಂತೇಶಾ ನಿನ್ನ ಕರುಣೆಯಿಂದಲೇ ನನ್ನ ಮಗನ ಉಳಿವು ಎಂದು ಲೋಕಾರೂಢಿಯಂತೆ ಹಲವು ಡಾಕ್ಟರುಗಳಿಗೆ ತೋರಿಸಿದನು, ಆದರೂ ಉಪಯೋಗವಾಗಲಿಲ್ಲ.

ಬಳಿಕ ಬೇಸತ್ತ ಶೆಟ್ಟಿಯು ಮೊದಲೇ ತೀರ್ಮಾನಿಸಿದಂತೆ ಶ್ರೀಗುರುಗಳ ಪಾದೋದಕ ಪ್ರಸಾದಗಳಿಂದ ಮಗನ ಜರ್ಜರಿತವಾದ ಶರೀರವನ್ನು ಕಾಪಾಡುತ್ತ ಕೆಲವು ದಿನ ಗತಿಸಿದವು.

ಒಮ್ಮೆ ಶೆಟ್ಟಿಯ ಮಗನಾದ ಬಸವಲಿಂಗನು ಜ್ವರದ ತಾಪವನ್ನು ತಾಳಲಾರದೇ ಒಮ್ಮಿಂದೊಮ್ಮೆಲೆ ಕಣ್ಣು ಮುಚ್ಚಿದನು. ಮಗನು ಕಾಲವಾದನೆಂದು ತಿಳಿದ ತಾಯಿ ಇನ್ನಿತರ ಬಳಗದವರು ಬೋರಾಡಿ ಅಳಹತ್ತಿದರಲ್ಲದೇ ಶ್ರೀಗುರು ದುರುದುಂಡೀ ಮಹಾಂತೇಶಾ ಕೊನೆಗೂ ನಮ್ಮ ವಂಶದ ಬಳ್ಳಿಯನ್ನು ಕಮರಿಸಿದೆಯಾ, ಮನೆಬೆಳಗುವ ಬೆಳಕನ್ನು ನಂದಿಸಿದ್ದು ನ್ಯಾಯವೇ ನಿನಗೆಂದು ಹಾಡಿ ಹಾಡಿಕೊಂಡು ಅಳಹತ್ತಿದರು.

ಆದರೆ ತಾಸೆರಡು ಗತಿಸಿದ ನಂತರ ಶೆಟ್ಟರ ಮಗನು ಕಣ್ಣುತೆರೆದು ಸುತ್ತಲಿನ ಜನರನ್ನು ಕಂಡು ಗಾಭರಿಗೊಂಡನಾದರೂ ತನ್ನ ಮನದ ಸಂತೋಷವನ್ನು ವ್ಯಕ್ತಪಡಿಸುವದರ ಸಲುವಾಗಿ ಅವ್ವಾ ನಾನು ಇಲ್ಲಿಂದ ಶ್ರೀಗುರು ದುರುದುಂಡೀಶರ ನಿವಾಸ ಅರಭಾವಿ ಶ್ರೀಕ್ಷೇತ್ರಕ್ಕೆ ಹೋದಂತೆಯೂ ಅಲ್ಲಿ ಶ್ರೀಗುರು ಮಹಾಂತಜ್ಜನವರು ಮಮತೆಯಿಂದ ಮುಂದೆ ಕರೆದು ಮೈದಡವಿ ಮಗು ಅಲ್ಲಿ ನಿನ್ನ ತಾಯಿ ನಿನಗಾಗಿ ಹಂಬಲಿಸುತ್ತಿದ್ದಾಳೆ. ಬೋರಾಡಿ ರೋಧಿಸುತ್ತ ಬಂಧು ಬಳಗದೊಡನೆ ನನ್ನಲ್ಲಿ ಬಂದು ನನ್ನ ಮಗನನ್ನು ಕೊಡು ಅಜ್ಜಾ ಎಂದು ಬೇಡಿಕೊಳ್ಳುತ್ತಿದ್ದಾಳೆ. ತೀವ್ರ ಹೋಗಪ್ಪಾ ಎಂದು ಗದ್ದ ತುಟಿ ಹಿಡಿದು ಈ ತೀರ್ಥ ಪಾನದಿಂದ ಪುನೀತನಾಗಿ ಶ್ರೀಗುರು ದುರುದುಂಡೀಶರ ಕರ್ತೃ ಗದ್ದುಗೆಗೆ ನಮಸ್ಕಾರ ಗೈದು ಹೋಗಲು ಅಪ್ಪಣೆ ಕೊಟ್ಟರು. ಬರುವದಕ್ಕೆ ಸ್ವಲ್ಪ ತಡವಾಯಿತು ಅಲ್ಲವೇನವ್ವಾ ಎಂದು ಹೇಳಿದನು.

ಮಗನ ಮಾತು ಕೇಳಿದ ಭಕ್ತಳ ಮೈ ಜುಮ್ ಎಂದು ಶ್ರೀಗುರುವೇ ದುರುದುಂಡೀ ಮಹಾಂತೇಶಾ ನಿನ್ನ ಮಹಿಮೆ ನನ್ನಂಥ ಪಾಮರ ಮನುಜಳಿ

ಗೆಂಕು ತಿಳಿದೀತು ಎಂದು ಎದ್ದು ಒಳಗೆ ಹೋಗಿ ಶ್ರೀಗುರು ಮಹಾಂತ ಶಿವಯೋಗಿಗಳ ಪ್ರತಿಮೆಯ ಬಳಿಯಲ್ಲಿ ದೀಪ ಹಚ್ಚಿ ಮಗ ಹಾಗು ಬಳಗದವರೊಡನೆ ಅನನ್ಯ ಭಕ್ತಿಯಲ್ಲಿ ಕೊಂಡಾಡಿ ಬಳಿಕ ಅಜ್ಜಾ ಕಾಲಕಾಲಕ್ಕೂ ನಿನ್ನಲ್ಲಿ ನಮ್ಮ ಮನೆತನದವರ ಭಕ್ತಿ ನಸಿಸದಂತೆ ಅನುಗ್ರಹಿತನಾಗಿರು ತಂದೆ ಎಂದು ಬೇಡಿಕೊಂಡಳು.



## ೩೩ ನೇ ಅಧ್ಯಾಯ

### ಅಜ್ಜನವರ ಆಶೀರ್ವಾದದಿಂದ ಸಂಕಲ್ಪಸಿದ್ಧಿ

ಸಂಕಲ್ಪಸಿದ್ಧಿಯನ್ನು ಸಾರ್ಥಕ ಪಡಿಸುವ ಪ್ರಯತ್ನದಲ್ಲಿ ಅಪ್ಪನವರು ಎತ್ತಿದ ಕೈ ಎಂದು ಭಕ್ತರು ಹೆಮ್ಮೆಯಿಂದ ನುಡಿಯುತ್ತಿದ್ದರು. ನಾವು ಭಕ್ತರೆನ್ನುವವರು ಶ್ರೀಗುರುಗಳ ನೆನಹಿನಲ್ಲಿ ಏನೇ ಕುರಿತು ಆಶೆ ಮಾಡಿ ಸಂಕಲ್ಪ ಮಾಡಿದರೆ ಅದು ಶತಸಿದ್ಧವೆಂದು ಅನೇಕರು ಮನಗಂಡ ಸಂಗತಿಯಾಗಿತ್ತು, ಭಕ್ತರನೇಕರ ನಂಬಿಕೆಯ ವಿಷಯವೆನಿಸಿತ್ತು.

ಅದರಂತೆ ಉಪ್ಪಿನಬೆಟಗೇರಿ ಶಿದ್ದಪ್ಪನು ಅಪ್ಪನವರಿಗೆ ಒಂದು ಬಂಗಾರದ ಉಂಗುರ ಮಾಡಿಸಿ ಭಕ್ತಿಯ ಕಾಣಿಕೆಯೆಂದು ಕೊಡಬೇಕೆಂದು ನಿಶ್ಚಯಿಸಿದನು. ಆದರೆ ಅವನ ಸಂಕಲ್ಪ ಬಹಳ ದಿವಸಗಳವರೆಗೆ ಕಾರ್ಯರೂಪದಲ್ಲಿ ಬರಲಿಲ್ಲ. ಆದರೆ ಭಕ್ತನು ಬಲವಾದ ಪ್ರಯತ್ನದಿಂದ ಕೊನೆಗೊಮ್ಮೆ ಬಂಗಾರದ ಉಂಗುರ ಮಾಡಿಸಿ ಶ್ರೀಗಳ ಸನ್ನಿಧಿಗೆ ತಂದನು.

ಆಗ ಮಹಾಂತಜ್ಜನವರು ಅವನ ವಿಶ್ವಾಸಪೂರ್ಣ ಭಕ್ತಿಗೆ ಮೆಚ್ಚಿ ನಸು ನಕ್ಕು ಸಿದ್ದಪ್ಪಾ ಇದನ್ನು ಆದೆಷ್ಟು ತೊಂದರೆಯಿಂದ ಮಾಡಿಸಿಕೊಂಡು ಬಂದಿರುವಿಯಪ್ಪಾ, ನಮ್ಮ ಸಲುವಾಗಿ ಇಷ್ಟೊಂದು ಕಷ್ಟಪಡುವ ಗೋಜಿಗೆ ಹೋಗಬಾರದಿತ್ತು ಎಂದು ಮರುಗಿದರು.

ಬಳಿಕ ಏನೇ ಆಗಲಿ ಇದನ್ನು ಕಷ್ಟಪಟ್ಟು ಸಂಪಾದಿಸಿಕೊಂಡು ಬಂದಿರುವಂತೆ ಇನ್ನೂ ಒಂದು ಕಾರ್ಯ ಮಾಡಿ ಶಿವನ ಮೆಚ್ಚುಗೆಯನ್ನು ಗಳಿಸು ಎಂದು ಬೋಧಿಸಿ ಉಂಗುರವನ್ನು ತಿರುಗಿಕೊಟ್ಟು ಕಳುಹಿಸಿದರು.

ಆಗ ಅಪ್ಪನವರ ಅಪ್ಪಣೆಯಂತೆ ಸಿದ್ದಪ್ಪನು ಬಂಗಾರದುಂಗುರವನ್ನು ಮಾರಿ ಬಂದ ಹಣದಲ್ಲಿ ಕೆರೆ ಕಡಿಸುವ ಕಾರ್ಯವನ್ನು ಮುಂದುವರಿಸಿದನು. ಆದರೆ ಆವನ ಆಸೆ ನಿರಾಸೆಯ ಪ್ರಸಂಗ ತಂದಂತೆ, ಉಂಗುರ ಮಾರಿದ ಹಣದಿಂದ ಕೆರೆ ಕಡಿಸುವ ಕಾರ್ಯ ಪೂರ್ತಿಯಾಗಲಿಲ್ಲ. ಅರ್ಧಕ್ಕೆ ಕೆಲಸ ನಿಂತು ಸಿದ್ದಪ್ಪನು ಅಜ್ಜಾ ನಿನಗೆ ವಚನಕೊಟ್ಟಂತೆ ಕೆರೆಯ ಕಾರ್ಯವಾಗಲಿಲ್ಲ ಹೇಗೆ ಮಾಡಲಿ ನಾನೀಗ ವಚನಭ್ರಷ್ಟನಾಗುವಂತೆ ಮಾಡುವಿಯಾ ತಂದೆ ಎಂದು ಉಸುರುಗರೆದು ಅದೇ ವಿಷಯವನ್ನು ಕನವರಿಸುತ್ತ ಮಲಗಿರಲು ಶ್ರೀಗುರು ಮಹಾಂತ ಶಿವಯೋಗಿಗಳು ಸಿದ್ದಪ್ಪನ ಕನಸಿನಲ್ಲಿ ಕಾಣಿಸಿಕೊಂಡು ಭಕ್ತಶ್ರೇಷ್ಠಾ ವ್ಯಸನವನ್ನು ಬಿಟ್ಟು ನಾಳಿನ ದಿವಸ ಹುಬ್ಬಳ್ಳಿಗೆ ಹೋಗಿ ಹತ್ತಿಯ ಗಂಟುಗಳನ್ನು ಮಾರಾಟ ಮಾಡು ಒಳ್ಳೆ ಬೆಲೆ ಬಂದು ಹೆಚ್ಚಿನ ಲಾಭ ಸಿಕ್ಕುವದು ಬಂದ ಲಾಭದಲ್ಲಿ ಅರ್ಧಕ್ಕುಳಿದ ಕೆರೆಯ ಕಾರ್ಯವನ್ನು ಮುಗಿಸು ಎಂದು ಹೇಳಿದಂತಾಯಿತು.

ಆಗ ಸಿದ್ದಪ್ಪನು ಶ್ರೀಗುರುಗಳ ಅಪ್ಪಣೆಯಂತೆ ಹತ್ತಿಯನ್ನು ಮಾರಿ ಹೆಚ್ಚಿನ ಲಾಭದಲ್ಲಿ ಬಂದ ಹಣದೊಡನೆ ಊರಿಗೆ ಹೊರಟು ಬರುತ್ತಿರುವಾಗ ದಾರಿಯಲ್ಲಿ ಅರುವು ಮರುವು ಉಂಟಾಗಿ ಕೈಯಲ್ಲಿನ ಚೀಲವು ಅದ್ಹೇಗೋ ಬಿದ್ದು ಹೋಗಿತ್ತು. ಅಯ್ಯೋ ಅಜ್ಜಾ ಮಹಾಂತಜ್ಜಾ ಏನಿದು ಕೈಯಲ್ಲಿಟ್ಟು ಹಾರಿ ಹೊಡೆದಂತೆ ಕೊಟ್ಟು ಕಸಿದುಕೊಳ್ಳುವದು ಇನಾವ ನಿನ್ನ ಲೀಲೆ ಎಂದು ದುಃಖಪಡುತ್ತಿರಲು, ಓರ್ವ ಜಂಗಮ ಮುದುಕನು ಹಿಂದಿನಿಂದ ದಡ ದಡ ಬಂದು ಈ ಗಂಟು ನಿನ್ನದೇನಪ್ಪಾ ಎಂದು ಗಂಟು ಸಿದ್ದಪ್ಪನ ಕೈಗಿಟ್ಟು ಹೋದನು. ಮರಳಿ ನೋಡುವಷ್ಟರಲ್ಲಿ ಕಾಣದಂತಾಗಿದ್ದನು. ಆಗ ಸಿದ್ದಪ್ಪನು ಶ್ರೀಗುರು ಮಹಾಂತಶಿವಯೋಗಿಶ್ವರನೇ ಆತನೆಂದು ಸ್ವಾಮಿಗಳ ಧ್ಯಾನದಲ್ಲಿ ಊರಿಗೆ ಬಂದು ಕೆರೆಯ ಕಾರ್ಯವನ್ನು ಮುಗಿಸಲು ಶ್ರೀಗುರು ಅಜ್ಜನವರ ಕೃಪಾ ಜಲಧಾರೆ ಧಾವಿಸಿದಂತೆ ಎರಡು ಮಳೆ ಬಂದು ಹೋಗುವಷ್ಟರಲ್ಲಿ ಕೆರೆ ತುಂಬಿ ಸಿದ್ದಪ್ಪನ ಮನಕ್ಕೆ ಅತೀವ ಆನಂದವಾಯಿತು.

ಬಳಿಕ ಭಕ್ತನು ಐದು ಜನ ಜಂಗಮರನ್ನು ಮತ್ತು ತನಗೆ ಬೇಕಾದ ಕೆಲವು ಜನರನ್ನು ಉಣಿಸಿ ತೃಪ್ತಿಪಡಿಸಬೇಕೆಂದು ಹತ್ತಿಪ್ಪತ್ತು ಜನರಿಗೆ

ಸಾಲುವಷ್ಟು ಗೋದಿ ಹುಗ್ಗಿಯನ್ನು ಮಾಡಿಸಿ ಪ್ರಸ್ತವನ್ನು ಏರ್ಪಡಿಸಿದರೆ ಸಾಧಾರಣ ಮೂರು ನೂರು ಜನ ಉಂಡು ತಣಿದರೂ ಇನ್ನೂ ಪ್ರಸಾದ ಉಳಿದು ಕೊಂಡಿತ್ತು. ಆಗ ಸಿದ್ದಪ್ಪ ಆದಿಯಾಗಿ ಅವನ ಬಳಗದವರು ಇದೆಲ್ಲವು ಶ್ರೀಗಳ ಮಹಿಮೆ ಎಂದು ಅವರ ಗುಣ ಗಾನದಲ್ಲಿರುವಾಗ ಓರ್ವ ಜಂಗಮನು ಬಂದು ಅನ್ನದಾನ, ನೀರಿನ ದಾನ ಮಾಡಿದ ಗೌತಮ, ಅತ್ರಿ ಅಲ್ಲದೇ ಅನೇಕ ಮಹನೀಯರ ಕಥೆಯನ್ನು ಹೇಳಿ ದಾಹದಿಂದ ದಣಿದು ಕಂಗಾಲರಾಗುವವರಿಗೆ ಜಲಪಾನದಿಂದ ತಣಿಯುವಂತೆ ಮಾಡಿದ ಈ ಶ್ರೇಷ್ಠ ಭಕ್ತನನ್ನು ಎಷ್ಟು ಕೊಂಡಾಡಿದರು ಕಡಿಮೆಯೇ ಎಂದು ಹೇಳಿ ಈತನ ವಂಶಪರಂಪಾರ ಬಡತನ ಸುಳಿಯದು, ಶಿರಿಯುದು ಶಾಶ್ವತವೆಂದು ಹರುಷದಿಂದ ಹರಿಸಿ ಮುಂದೆ ಸಾಗಿದಂತೆ ತೋರಿ ಕ್ಷಣದಲ್ಲಿ ಕಾಣದಾದನು.

ಆಗ ಕೂಡಿದ ಜನತೆ ಅರಿಯದಿದ್ದರೂ ಸಿದ್ದಪ್ಪನು ಮಾತ್ರ ಆ ಬಡ ಜಂಗಮನ ವೇಷದಿಂದ ಬಂದು ದರ್ಶನ ಕೊಟ್ಟು ಮಾಯವಾದ ಮಾಯಾವಿ ಹರ ರೂಪಿ ಮಹಾಂತಸ್ವಾಮಿಗಳೆಂದು ಅರಿತು ಮನದಲ್ಲಿ ವಂದಿಸಿ ತನ್ನ ನಿತ್ಯ ನೇಮದಂತೆ ಅಜ್ಜನವರ ಬೋಧೆಯಂತೆ ಪರೋಪಕಾರ ಧರ್ಮದಲ್ಲಿ ಪರರಿಗುಪಕಾರಿಯಾಗಿ ಭಕ್ತಿ ಭಾವದಿಂದ ಅಜ್ಜನವರನ್ನು ಸೇವಿಸಿ ಅನಂತಕಾಲ ಸುಖದಿಂದ ಬಾಳಿದನು. ಹಾಗು ದೊಡ್ಡವರ ಆಶೀರ್ವಾದದಿಂದ ಎಂತಹ ಸಂಕಷ್ಟ ಉಳ್ಳ ಸಂಕಲ್ಪ ಮಾಡಿದರು ಸಿದ್ಧಿಯಾಗುವದೆಂದು ಅರಿತುಕೊಂಡನು.



## ೩೪ನೇ ಅಧ್ಯಾಯ

### ಆಶೀರ್ವದಿಸಿದ ಅಕ್ಷತೆಗಳಿಂದ ಹದಿನೈದು ವರ್ಷಗಳವರೆಗೆ ಉಪಯೋಗ

ಬೆಳಗಾಂವ ಜಿಲ್ಹೆಯ ಅದೇ ತಾಲೂಕಿನ ಕೊಡಹಳ್ಳಿಯೆಂಬ ಸಣ್ಣ ಗ್ರಾಮದಲ್ಲಿ ಅರಭಾವಿ ದುರದುಂಡೀಶ್ವರ ಮಠದ ಶಾಖಾ ಮಠವಿರುವದು.

ಆ ಮಠದ ವ್ಯವಸ್ಥೆ, ಬರುಹೋಗುವ ಭಕ್ತ ಜನತೆಯ ಆದರಾತಿಥ್ಯ ಅಂತೂ ಮಠದ ಸರ್ವಭಾರವನ್ನು ಹೊತ್ತು ಕಾರಭಾರ ಗೈಯಲು ಶಿವಶರಣೆಯ ಸ್ವರೂಪದಲ್ಲಿ ಬಾಳುತ್ತಿರುವ ನೀಲಮ್ಮತಾಯಿಯು ಅಪ್ಪನವರ ಅಪ್ಪಣೆಯ ಪ್ರಕಾರ ಮಠದ ವ್ಯವಸ್ಥೆಯನ್ನು ನೋಡಿಕೊಂಡು ಹೋಗುತ್ತಿರುವಳಲ್ಲದೇ ಯಾವ ಕೊರತೆಯು ಬಾರದಂತೆ ಸುವ್ಯವಸ್ಥೆಯಲ್ಲಿ ಮಠದ ಪೂರ್ವ ಪರಂಪರೆಯನ್ನು ಉಳಿಸಿಕೊಂಡು (ಕಾಯ್ದುಕೊಂಡು) ಬಂದಿರುವಳು. ಆ ಮಹಾತಾಯಿಯು ಇಂದಿನ ಶರಣ ನೀಲಮ್ಮ ಎನ್ನುವದಕ್ಕಿಂತಲೂ ಅಂದಿನ ಶಿವ ಶರಣೆಯರ ಸಾಲಿನಲ್ಲಿ ಸೇರಬೇಕಾದ ದೈವಭಕ್ತಳು. ನಿಷ್ಠೆ ನೇಮ ಪೂಜ್ಯರಲ್ಲಿ ಭಕ್ತಿ, ಭಕ್ತಬಳಗದವರೊಡನೆ ಸಹಕಾರ, ಪ್ರೀತಿ ವಾತ್ಸಲ್ಯ ಅಂತೂ ಶಿವಶರಣೆಯರ ಸಂಪೂರ್ಣ ಕಳೆಗಳಿಂದ ಮಠದಲ್ಲಿ ಉಳಿದು ಬಾಳಿರುವಳು.

ಒಮ್ಮೆ ಶ್ರೀಗಳು ಶಾಖಾ ಮಠದತ್ತ ದಯಮಾಡಿಸಿ ಅಲ್ಲಿಯ ವ್ಯವಸ್ಥೆ ಇತರ ಕಾರ್ಯಕಲಾಪಗಳು ಸರಿಯಾಗಿ ಸಾಗಿರುವದನ್ನು ಅರಿತು, ಬಂದಿರುವ ಅಡೆತಡೆಗಳನ್ನು ಸರಿಗೊಳಿಸಲು ಕೋಟವರು ಕೊಡಹಳ್ಳಿ ಮಠಕ್ಕೆ ದಯ ಮಾಡಿಸಿದರು.

ಆಗ ನೀಲಮ್ಮತಾಯಿಯು ಅಪ್ಪನವರಿಗೆ ಮಠದ ಯಾವತ್ತೂ ಕಾರ್ಯಕಲಾಪಗಳನ್ನು ತಿಳಿಸಿ ಸರಿಯಾದ ರೀತಿಯಲ್ಲಿ ಆಯವ್ಯಯ ಎಲ್ಲವನ್ನು ಸನ್ನಿಧಿಯಲ್ಲಿ ವಿವರಿಸಿ ಶ್ರೀಗಳ ಕೃಪೆಗೆ ಪಾತ್ರಳಾದಳು. ಬಳಿಕ ಪೂಜ್ಯ ಶ್ರೀಗಳು ಆಶೀರ್ವಾದ ಪೂರ್ವಕ ಸ್ವಲ್ಪ ಅಕ್ಷತೆಯನ್ನು ದಯ ಪಾಲಿಸಿದರು.

ಮುಂದೆ ಹದಿನೈದು ವರ್ಷಗಳ ಪರಿಯಂತರ ಐದು-ಹತ್ತು ಕಾಳು ಶಿವರಾತ್ರಿಯ ಪ್ರಸ್ತದ (ಅನ್ನ ಸಂತರ್ಪಣೆ) ಕಾಲಕ್ಕೆ ಉಪಯೋಗಿಸಿದರೆ ನೂರಾರು ಜನರಿಗೆ ಸಾಲಬೇಕಾದ ಅನ್ನವು ಸಾವಿರಾರು ಜನತೆಗೆ ಅರ್ಪಿಸಿದರೂ ಕೊರತೆ ಬರುವದಿಲ್ಲ. ಅಲ್ಲದೇ ಹದಿನೈದು ವರ್ಷಗಳ ವರೆಗೆ ಅಕ್ಷತೆಗಳು ಅಚ್ಚಳಿಯದೇ ಕೆಡದೆ ಉಳಿದಿರುವದನ್ನು ನೋಡಿದರೆ ಶ್ರೀಗಳವರ ಸ್ಪರ್ಶ ಮಹಿಮೆ ಎಂದು ಭಕ್ತರು ಹೆಮ್ಮೆ ಪಡುವರಲ್ಲದೇ ಅಚ್ಚರಿಯಿಂದಲೂ, ಭಕ್ತಿ ವಿಶ್ವಾಸಗಳಿಂದಲೂ ಆ ಅಕ್ಷತೆಯ ಕಾಳನ್ನು ಪೂಜಿಸುತ್ತಿರುವರು.

ಮಠಕ್ಕೆ ಬರುವ ಭಕ್ತರು ಹದಿನೈದು ವರ್ಷಗಳ ಹಿಂದೆ ಶ್ರೀಗಳು ಆಶೀರ್ವಾದ ರೂಪದಲ್ಲಿ ಕರುಣಿಸಿದ ಅಕ್ಷತೆಗಳು ಕೆಡದೇ, ಹುಳಹತ್ತಿ ನಾಶ ವಾಗದೇ ಇಂದಿಗೂ ಅಚ್ಚಳಿಯದೇ ಉಳಿದಿರುವದನ್ನು ನೋಡಿ ಮಹಾತ್ಮರ ಮಹಿಮೆ ಅಗಾಧ ಅಗಮ್ಯವೆಂದು ಶ್ರೀಗಳನ್ನು ಕೊಂಡಾಡಿ ಭಕ್ತಿಯಿಂದ ನಡೆದುಕೊಳ್ಳುವರು.



# ೩೫ ನೇ ಅಧ್ಯಾಯ

## ಮಹಾಂತಯ್ಯನವರ ದರ್ಶನಾಶೀರ್ವಾದಗಳಿಂದ ಮೈಸೂರು ಅರಸರಿಗೆ ಗಂಡು ಸಂತಾನವಾದದ್ದು

ಒಮ್ಮೆ ಶ್ರೀಗಳು ಗದುಗಿನ ಮಾನ್ವಿ ಶಿವಪ್ಪನವರ ಮನೆಗೆ ದಯ ಮಾಡಿಸಿದಾಗ ಮೈಸೂರು ಮಹಾರಾಜರು ಕರ್ನಾಟಕದ ಸಂಚಾರ ಕಾರ್ಯದಲ್ಲಿ ಗದಗ ರೇಲ್ವೆ ಸ್ಟೇಶನಕ್ಕೆ ಬರುವ ಮೊದಲು ಶ್ರೀಗಳವರ ಮಹಿಮೆಯನ್ನು ಅಪ್ರತ್ಯಕ್ಷವಾಗಿ ಕೇಳಿ ಶ್ರೀ ಸ್ವಾಮಿಗಳ ದರ್ಶನ ಪಡೆಯಬೇಕು, ಅವರ ಆಶೀರ್ವಾದದಿಂದ ಪುನೀತರಾಗಬೇಕೆಂದು ಹಂಬಲಿಸುತ್ತಿದ್ದರು.

ಈಗ ಮಹಾರಾಜರ ಹಂಬಲ ಶ್ರೀಗುರು ಶಿವಯೋಗಿವರೇಣ್ಯ ಮಹಾಂತಜ್ಜನವರಿಗೆ ಮುಟ್ಟಿತೋ ಏನೋ ಎನ್ನುವಂತೆ ಅರಿತೋ ಅರಿಯ ದಲೋ ಸ್ವಾಮಿಗಳು ಶಿವಪ್ಪನವರ ಬಿನ್ನಹಕ್ಕೆ ಒಪ್ಪಿ ಮಹಾರಾಜರ ಭೆಟ್ಟಿ ಗಾಗಿ ರೇಲ್ವೆ ಸ್ಟೇಶನಕ್ಕೆ ಹೊರಟು ಬಂದರು.

ಆಗ ಸ್ವಾಮಿಗಳ ದರ್ಶನಲಾಭ ಪಡೆದ ಮಹಾರಾಜರು ತಮ್ಮ ಸುಕೃತಕ್ಕಾಗಿ ಸಂತೋಷಗೊಂಡರಲ್ಲದೇ, ತಮ್ಮ ಮನದ ಅತುಲ ಅಭಿಲಾಷೆ ಯಂತೆ ಪೂಜ್ಯರ ದರ್ಶನಲಾಭ ದೊರೆಯಿತಲ್ಲಾ ಎಂದು ಆಶ್ಚರ್ಯವನ್ನು ವ್ಯಕ್ತಪಡಿಸುತ್ತ ದಯಾನಿಧಿ ಮಹಾಂತಸ್ವಾಮಿಗಳ ಲೀಲೆ ಅಗಮ್ಯ, ಅಗಾಧ ವೆಂದು ಅವರ ಪಾದಾರವಿಂದಗಳಲ್ಲಿ ಮನಃಪೂರ್ವಕ ವಂದಿಸಿ, ಆಶೀರ್ವಾದ

ಹೊಂದಿ ಬಳಿಕ ಸ್ವಾಮಿಗಳೊಟ್ಟಿಗೆ ತಮ್ಮೊಟ್ಟಿಗೆ ಬಂದ ಜನರ ಸಮ್ಮುಖದಲ್ಲಿ ತಾವು ಈ ಮೊದಲು ಸಂಕಲ್ಪ ಮಾಡಿಕೊಂಡ ವಿಷಯವನ್ನು ವಿವರಿಸಿ ಪೂಜ್ಯರ ಕೃಪೆ ದೊರೆತ ನಾವೇ ಪುಣ್ಯಶಾಲಿಗಳೆಂದು ಆನಂದಪಟ್ಟರು. ಅವರ ಆನಂದ ಚಿರಾಯುವಾಗುವಂತೆ ಶ್ರೀಯುತ ಮಹಾರಾಜರಿಗೆ ಶ್ರೀ ಅಜ್ಜನವರ ಅಮರ ಆಶೀರ್ವಾದ ಫಲದಿಂದ ವರ್ಷವೊಂದು ಸರಿದು ಸಂತಸದ ಸುದಿನ, ಸುವೇಳೆಯಲ್ಲಿ ಶುಭಾಶೀರ್ವಾದ ಫಲವೆಂದು ಗಂಡು ಸಂತಾನವಾಯಿತು. (ಪುತ್ರಲಾಭ) ಅವರ ಬಹುದಿನಗಳ ಉತ್ಕೃಷ್ಟ ಅಭಿಲಾಷೆ ಸಫಲಗೊಂಡ ಕಾರಣ ಮಹಾರಾಜರು ಮುರುಗೋಡ ಮಠದ ಕಾರಭಾರಿಗಳಿಗೆ ಶ್ರೀಗಳ ಹೆಸರಿನಿಂದ ಪತ್ರ ಬರೆದು ತಮಗಾದ ಸಂತಸದ ಸುದ್ದಿಯನ್ನು ವಿವರಿಸುತ್ತ ತಮ್ಮ ಕೃಪಾಶೀರ್ವಾದದಿಂದ ಗಂಡು ಮಗುವನ್ನು ಪಡೆದ ನಾವೇ ಧನ್ಯರು. ಕಾರಣ ಸನ್ನಿಧಾನಕ್ಕೆ ಕಾಣಿಕೆ ಕಳುಹಿಸುವ ಆಸೆಯಲ್ಲಿದ್ದೇವೆ. ಅದೆಷ್ಟು ಕಳುಹಿಸಬೇಕೋ ಹಣದ ಮೊತ್ತ ತಿಳಿಸುವದಾಗಬೇಕು ಎಂದು ಬಿನ್ನೈಸಿ ಕೊಂಡಿದ್ದರು.

ಅದಕ್ಕೆ ಶ್ರೀಗಳವರು ನಸುನಗುತ್ತ ಕಾರಭಾರಿಗಳಿಗೆ ಈ ರೀತಿ ತಿರುಗಿ ಪತ್ರ ಬರೆಯಿರೆಂದರು—

ತಮಗಾದ ಪುತ್ರಲಾಭದ ಸಂತೋಷಕ್ಕೆ ನಾವು ಭಾಗಿಗಳಾಗುವದು ಸ್ವಾಭಾವಿಕ. ಆದರೆ ನಿಮ್ಮ ಅಭಿಲಾಷೆ ಸಫಲವಾಗುವದಕ್ಕೆ ಕಾರಣರಾದ ವರು ನಾವಲ್ಲ, ಎಲ್ಲವೂ ಶಿವನಿಚ್ಛೆ. ಅವನ ಕೃಪೆ ತಮಗೆ ದೊರೆಯಿತು. ಗಂಡು ಸಂತಾನ ಲಭಿಸಿದೆ ಅಷ್ಟೇ. ನಿಮ್ಮ ಕಾಣಿಕೆಯ ಮೊತ್ತವನ್ನು ತಿಳಿಸಿ ಅದನ್ನು ಪಡೆಯುವ ಅಭಿಲಾಷೆ ನಮಗಿಲ್ಲ. ಶಿವನ ಇಚ್ಛೆಯಂತೆ ತಮಗೆ ತಿಳಿದಷ್ಟು ಅದು ಸದ್ವಿನಿಯೋಗಕ್ಕೆ ಉಪಯೋಗವಾಗಲೆಂಬ ಸದ್ವಿಚಾರ ದಲ್ಲಿ ಕಳುಹಿಸಬಹುದು ಎಂದು ಮರಳಿ ಬರೆಯಿಸಿದ ಪತ್ರ ಕಂಡ ಮಹಾ ರಾಜರು ಚಕಿತರಾದರು.

ನಾವಾಗಿ ಕೊಡಲು ಬಯಸದಿರುವಾಗ ಅದೆಷ್ಟೋ ಮಠಾಧೀಶರು, ಯೋಗಿಗಳು ಹಲವಾರು ರೀತಿಯ ದೇಣಿಗೆ ಹಾಗೆ ಹೀಗೆ ಎಂದು ಕೇಳಲು

ಬರುತ್ತಿರುವಾಗ ಪೂಜ್ಯ ಶ್ರೀಗಳ ನಿರಭಿಮಾನ, ನಿಸ್ವಾರ್ಥ ಮನೋಧರ್ಮ ವನ್ನು ಕೇಳಿ ಶಿವನ ಸಾಕಾರ ಸ್ವರೂಪವೆಂದೇ ನಮ್ಮ ನಂಬಿಕೆ. ಎಂದು ಒಂದು ಸಾವಿರ ಒಂದು ರೂಪಾಯಿ ಕಳಿಸಿದರು. (ಇದು ಅರಿತವರಿಂದ ಕೇಳಿದ ವಿಷಯ.)



## ೩೬ ನೇ ಅಧ್ಯಾಯ

### ಅಜ್ಜನವರು ಭಕ್ತನ ಕನಸಿನಲ್ಲಿ ದರ್ಶನ ಕೊಟ್ಟು ಪುತ್ರ ಸಂತಾನವಾಗುವದೆಂದು ಹೇಳಿದ್ದು

ಶ್ರೀಗಳ ಮಹಿಮೆಯನ್ನು ಕೇಳದ ಭಕ್ತರು ದಿನ ದಿನಕ್ಕೆ ಅಭಿವೃದ್ಧಿ ಹೊಂದಿ ಅಳವಾಡಿ ಗ್ರಾಮದವರಾದ ಸಿ. ಎಮ್. ಪಾಟೀಲ ಎನ್ನುವವರು ಹುಬ್ಬಳ್ಳಿಯಲ್ಲಿ ಫಾರೆಸ್ಟ ಕಂಟ್ರಾಕ್ಟರ. ಇವರು ಶ್ರೀಗಳ ಮಹಿಮೆಯನ್ನು ಕೇಳಿ ಅವರ ದರ್ಶನದ ಹಂಬಲದಿಂದ ಹಲವು ಸಾರೆ ಪ್ರಯತ್ನಿಸಿದರು, ಸಾಧ್ಯವಾಗಿದ್ದಿಲ್ಲ. ಕೆಲಸದ ಒತ್ತಡದಲ್ಲಿಯೋ ಅಥವಾ ಶ್ರೀಗಳ ದರ್ಶನ ದೊರೆಯುವ ಯೋಗವೇ ಕೂಡಿ ಬಂದಿರಲಿಲ್ಲವೋ ಅಂತೂ ಅದೆಷ್ಟೊ ಸಾರೆ ಪ್ರಯತ್ನ ಮಾಡಿದರೂ ಶ್ರೀಗುರುಗಳ ದರ್ಶನ ದೊರೆಯಲಿಲ್ಲ.

ಮುಂದೆ ಒಂದು ದಿವಸ ಪಾಟೀಲರ ಮಗ ರುದ್ರಗೌಡರು ಶ್ರೀ ಅಜ್ಜನವರ ದರ್ಶನ ಪಡೆಯುವ ಆಸೆಯಲ್ಲಿ ಹುಬ್ಬಳ್ಳಿಯಿಂದ ಮುರುಗೋಡಕ್ಕೆ ಹೊರಟಿರಲು ತಂದೆಯಾದ ಪಾಟೀಲರಿಗೆ ಜ್ವರದಿಂದ ಬಹಳ ತ್ರಾಸಾಯಿತು. ಅಂತೂ ಮಗನಿಗೂ ಆ ಯೋಗವಿಲ್ಲ ಎನ್ನುವಂತೆ ಮುರುಗೋಡಕ್ಕೆ ಹೋಗುವ ತಮ್ಮ ನಿರ್ಧಾರವನ್ನು ರುದ್ರಗೌಡರು ಅಂದು ನಿಲ್ಲಿಸಬೇಕಾಯಿತು.

ಅಜ್ಜನವರ ನಿಜ ಭಕ್ತರಲ್ಲಿ ಒಬ್ಬರಾದ ಪಾಟೀಲರ ಮಗ ರುದ್ರಗೌಡರಿಗೆ ಬರೇ ಹೆಣ್ಣುಮಕ್ಕಳಿದ್ದು ಗಂಡು ಸಂತಾನವಿಲ್ಲದ ಪ್ರಯುಕ್ತ ಶ್ರೀ ಅಜ್ಜನವರ ದರ್ಶನ ಪಡೆದು ಪುತ್ರಲಾಭ ಹೊಂದಬೇಕೆಂದು ಅದೆಷ್ಟು ಪ್ರಯತ್ನ ಮಾಡಿದರು ಅಸಾಧ್ಯವಾಯಿತು. ತಮ್ಮ ದುರ್ದೈವಕ್ಕಾಗಿ ದಿನವಿಡೀ ಹಳಹಳಿಸು

ವದು ತಪ್ಪಲಿಲ್ಲ ಶ್ರೀಗಳ ನೆನಪು ಸದಾ ಮನದಲ್ಲಿ ಮೂಡಿ ಮಾಯುವಾಗುವ ದಾಯಿತು.

ಆಗ ಅಜ್ಜನವರಿಗೆ ಭಕ್ತರ ಹಳ ಹಳಿಯಿಂದ ಮರುಕ ಉಂಟಾಯಿತೋ ಏನೋ ಒಂದು ದಿವಸ ರುದ್ರಗೌಡರ ಕನಸಿನಲ್ಲಿ ಕಾಣಿಸಿಕೊಂಡು ಶ್ರೀಗುರು ಮಹಾಂತಜ್ಜನವರು ಒಂದು ಭಸ್ಮದಗಟ್ಟಿಯನ್ನು ಅನುಗ್ರಹಿಸಿದಂತಾಯಿತು. ಮತ್ತು ಧರ್ಮಪತ್ನಿ ಸಮೇತ ಧಾರಣ ಸೇವನೆಯಾಗಬೇಕು ಶಿವನು ಒಳ್ಳೇದು ಮಾಡುತ್ತಾನೆ ನಿಮ್ಮ ಇಚ್ಛಿತ ಕಾರ್ಯವಾಗುವದರಲ್ಲಿ ಸಂಶಯವಿಲ್ಲವೆಂದು ಅನುಗ್ರಹ ಆಶೀರ್ವಾದಗಳಾದಂತಾಯಿತು. ಅಲ್ಲದೇ ಇಂದಿನಿಂದ ಸರಿಯಾಗಿ ೯ ತಿಂಗಳ ೯ ದಿವಸಗಳ ಮರುದಿವಸ ನೀವಿರುವ ಸ್ಥಾನಕ್ಕೆ ನಾವೇ ದಯ ಮಾಡಿಸಿ ದರ್ಶನ ಕೊಡುವದಾಗಿ ವಚನ ಕೊಟ್ಟಂತಾಯಿತು.

ಬಳಿಕ ಶ್ರೀಗಳ ಅಪ್ಪಣೆಯಂತೆ ರುದ್ರಗೌಡರ ಧರ್ಮಪತ್ನಿ ಬಸವಣ್ಣೆವ್ವನಿಗೆ ಅಂದಿನ ದಿನವೇ ಗರ್ಭನಿಂತು ಸರಿಯಾಗಿ ೯ ತಿಂಗಳ ೯ ದಿವಸಕ್ಕೆ ಗಂಡು ಮಗುವಿನ ಜನನವಾಯಿತು. ಮತ್ತು ಮರುದಿವಸವೇ ಶ್ರೀಗುರು ಮಹಾಂತಜ್ಜನವರು ಹುಬ್ಬಳ್ಳಿಗೆ ಬಂದವರು ಸಿ. ಎಮ್. ಪಾಟೀಲರಿಗೆ ತಾವು ದಯಮಾಡಿಸಿದ ವಿಷಯವನ್ನು ಹೇಳಿಕಳಿಸಿದರು.

ಆಗ ಗೌಡರಿಗೂ ಗೌಡರ ಬಳಗದವರಿಗೂ ಆನಂದ ಆಶ್ಚರ್ಯಗಳು ಏಕ ಕಾಲಕ್ಕೆ ಉದ್ಭವಿಸಿ ಶ್ರೀಗುರುವೇ ಅಜ್ಜಾ ನಿಮ್ಮ ಮಹಿಮೆ ಪಾಮರ ಮನುಜರಿಗೆ ತಿಳಿಯಲೆಂತು ಸಾಧ್ಯವೆಂದರು. ಹುಬ್ಬಳ್ಳಿಗೆ ಬಂದ ಶ್ರೀಗಳು ಪಾಟೀಲರ ಮನೆಯವರೆಗೆ ದಯಮಾಡಿಸಿ ಮಗುವಿಗೆ ಲಿಂಗಧಾರಣ, ಭಸ್ಮಧಾರಣವನ್ನು ತಮ್ಮ ಕೈಯ್ಯಾರೆ ಪೂರ್ತಿಗೊಳಿಸಿದರು. ಮತ್ತು ಪಾಟೀಲರು ಸಂತಸದಿಂದ ಅರ್ಪಿಸಿದ ಕಾಣಿಕೆಯನ್ನು ಸ್ವೀಕರಿಸಿ ಅವರ ಆಸೆಯಂತೆ ಮಗುವಿಗೆ ಮಹಾಂತೇಶನೆಂದು ಹೆಸರಿಡಲು ಅಪ್ಪಣೆಯನ್ನು ದಯಪಾಲಿಸಿ ದಾವಣಗೇರಿಗೆ ಹೋದರು.

ಬಳಿಕ ರುದ್ರಗೌಡರು ತಮ್ಮ ಬಳಗದವರಿಗೆ ಶ್ರೀಗಳ ಮಹಿಮೆಯ ಬಗ್ಗೆ ಸವಿಸ್ತಾರವಾಗಿ ತಿಳಿಸುತ್ತ ಮಹಿಮಾನ್ವಿತ ಶಿವಯೋಗಿಗಳು ಭಕ್ತರ ಕೂಗಿಗೆ

ಹಿಗೊಟ್ಟು ಪ್ರತ್ಯಕ್ಷ ಬಾರದಿದ್ದರೂ ಅಪ್ರತ್ಯಕ್ಷವಾಗಿಯಾದರೂ ಆಶೀರ್ವದಿಸಿ ಫಲವನ್ನು ಅನುಗ್ರಹಿಸುವರೆಂಬುದಕ್ಕೆ ನಮ್ಮ ದೃಷ್ಟಾಂತವೇ ಸಾಕ್ಷಿ ಎಂದು ಬಲು ಹೆಮ್ಮೆ ಭಕ್ತಿ ವಿಶ್ವಾಸಗಳಿಂದ ಹೇಳಿದರು.



## ೩೭ ನೇ ಅಧ್ಯಾಯ

### ಭಕ್ತರ ಆಶೆಯಂತೆ ಅಪ್ಪನವರು ತೀರ್ಥಕ್ಷೇತ್ರಗಳ ಸಂಚಾರಗೈದದ್ದು

ಮುರುಗೋಡದಲ್ಲಿ ಸ್ಥಾನಗೈದು ನೂತನ ಮಠವು ಸಿದ್ಧವಾದ ಬಳಿಕ ಅಪ್ಪನವರ ಲಿಂಗಪೂಜೆ ಅನುಷ್ಠಾನಾದಿಗಳು ಮತ್ತಷ್ಟು ಹೆಚ್ಚಳಗೊಂಡು ಸಾಗಹತ್ತಿದವು. ಭಕ್ತರ ಉತ್ಕೃಷ್ಟಕ್ಕಾಗಿ ನಿರಂತರವು ವಿಶ್ರಾಂತಿಯ ಕಡೆಗೆ ಲಕ್ಷ್ಯಕೊಡದೆ ಯೋಗಸಾಧನೆಯಲ್ಲಿ ಶ್ರಮಿಸ ಹತ್ತಿದರು. ಅನುದಿನವು ಭಕ್ತರ ಹಿತಾಪೇಕ್ಷೆಯಂತೆ ಅವರ ಬಾಳಿನ ನೆಮ್ಮದಿಯ ಕಡೆಗೆ ಲಕ್ಷ್ಯ ಹರಿಸಿ ಉದ್ಧಾರದ ಮಾರ್ಗವನ್ನು ಕರುಣಿಸಿ, ಬದುಕಿನ ನಿಜದಾರಿಯನ್ನು ತೋರಿಸಹತ್ತಿದರು. ಭಕ್ತ ವೃಂದದವರ ಅಪೇಕ್ಷೆಯಂತೆ ತೀರ್ಥಕ್ಷೇತ್ರಗಳಿಗೂ ರಮ್ಯರಮಣೀಯ ಸ್ಥಳಗಳಿಗೂ ಸಂಚಾರಗೈದು ದೇವಲ್ಲಿ ನಂಬಿಕೆ ವಿಶ್ವಾಸಗಳನ್ನು ಹುಟ್ಟಿಸಿ ಭಕ್ತಿಯಿಂದ ವರ್ತಿಸುವ ಸದಾಚಾರದ ಸಂಪನ್ನತೆಯ ಮಹಿಮೆಯನ್ನು ತೋರಿಸಿಕೊಟ್ಟರು.

ಅಪ್ಪನವರು ಕೈಕೊಂಡ ಯಾತ್ರಾ ಸ್ಥಳಗಳಾದ ಉಳವಿ, ಗೋಕರ್ಣ, ಸೊಗಲ, ಸೊಲ್ಲಾಪೂರ, ಶ್ರೀಶೈಲ ಮುಂತಾದ ಜಾಗ್ರತ ಸ್ಥಳಗಳಿಗೆ ದರುಶನ ವಿತ್ತರು. ಶ್ರೀಶೈಲ ಯಾತ್ರೆಯ ಸಮಯದಲ್ಲಿ ಉಗ್ರ ಬಿಸಿಲಿನ ತಾಪದಿಂದ ಸದೃಢಕಾಯದ ತರುಣರು ತತ್ತರಿಸುವ ಬಲು ಬೇಗೆಯನ್ನು ಅಪ್ಪನವರು ಸಹಿಸಿದ್ದಲ್ಲದೆ ಹರೆಯದ ಹದವನ್ನು ಸವಿಯುತ್ತಿರುವವರಿಗಿಂತಲೂ ಮುಂದಾಗಿ ಬೆಟ್ಟವನ್ನೇರಿ ಸಾಗಿದರು.

ಅಪ್ಪನವರು ಎಲ್ಲಿಗೆ ಹೋದರೂ ಬಿಸಿಲು, ಮಳೆ, ಛಳಿ ಯಾವದಕ್ಕೂ ಅಂಜುವವರಲ್ಲ, ಅಳುಕುವವರಲ್ಲವೆಂದು ಭಕ್ತರು ಬೆಂಬತ್ತಿ ಹೋದವರು ತಮ್ಮ ತ್ರಾಸಿನ ಉಸಿರು ಬಿಟ್ಟು ಅದರೊಡನೆ ಅಪ್ಪನವರ ಬಗ್ಗೆ ತಮಗಿದ್ದ ಅಭಿಮಾನದ ಆತ್ಮೀಯ ಉಸುರನ್ನು ಸೇರಿಸುತ್ತಿದ್ದರು. ಬಿಸಿಲಿನ ಬೇಗೆಯಿಂದ ನೂರಾಮೂರು ಡಿಗ್ರಿ ಜ್ವರ ಕಾಣಿಸಿಕೊಂಡರೂ ತಮ್ಮ ಶ್ರೀಮುಖದ ಕಳೆ ಯನ್ನು ಕಂಗೆಡಿಸದೆ ಭಕ್ತರೊಡಗೂಡಿ ಶ್ರೀಶೈಲ ಯಾತ್ರೆ ಮುಗಿಸಿದರು. ಮುರುಗೋಡ ಜನತೆಯ ಅಪೇಕ್ಷೆಯನ್ನು ತಿರಸ್ಕರಿಸುವ ಮಾತಿರಲಿ ಆನಂದ ದಿಂದ ಅವರ ಪ್ರತಿಯೊಂದು ಒಳ್ಳೇ ಕಾರ್ಯಕ್ಕೆ ಅಪ್ಪಣೆಯನ್ನು ದಯಪಾಲಿಸಿ ಆನಂದಗೊಳಿಸುತ್ತಿದ್ದರು.

ವಿರುಪಾಕ್ಷಪ್ಪ ಕತ್ತಿಶೆಟ್ಟರ ಬೆಳಗಾಂವ ಇವರ ಇಚ್ಛೆಯಂತೆ ಮತ್ತೊಮ್ಮೆ ಉಳವಿಗೆ ಹೋಗಿ ಯಾತ್ರಾ ಮಹೋತ್ಸವ ಜರುಗಿಸಿ ಬಂದರು. ಅಂತೂ ಅಪ್ಪನವರ ಜೀವನದಲ್ಲಿ ವಿಶ್ರಾಂತಿ ಎಂಬ ವಿಷಯವೇ ಕಾಣದಾಯಿತು ಶ್ರೀಗುರು ಬಂಥನಾಳ ಸಂಗನಬಸವ ಶಿವಯೋಗಿಗಳ ಏಳನೂರಾ ಎಪ್ಪತ್ತು ಅಮರಗಣಾಧೀಶ್ವರರ ಪೂಜೋತ್ಸವದಲ್ಲಿ ಭಾಗವಹಿಸಿ ಉತ್ಸವಕ್ಕೆ ಶೋಭೆ ತಂದರು. ಹಾಗೆ ತಿರುಗಿ ದಯಮಾಡಿಸುವಾಗ ಶ್ರೀ ಸಂಗಮ ಕ್ಷೇತ್ರಕ್ಕೂ ದಯಮಾಡಿಸಿ ಶ್ರೀ ಸಂಗಮನಾಥನ ದರ್ಶನ ಪಡೆದು ಭಕ್ತರಿಗೂ ದರ್ಶನ ಆಶೀರ್ವಾದಗೈದು ಬರುಬರುತ್ತ ಹಲವಾರು ತೀರ್ಥ ಕ್ಷೇತ್ರಗಳಿಗೆ ಭಕ್ತರೊಡನೆ ದಯಮಾಡಿಸಿ ಭಕ್ತ ಬಳಗದ ಅಪೇಕ್ಷೆಯನ್ನು ಅಲ್ಲಗಳೆಯಬಾರದೆಂದು ಕಾರವಾರ ಬಂದರಕ್ಕೂ ಸಂಚಾರ ಕೈಕೊಂಡು ಹಡಗಿನಲ್ಲಿ, ವಿಮಾನದಲ್ಲಿ, ಕಾರಿನಲ್ಲಿಯಂತೂ ಪುರಸತ್ತು ಸಿಗದಂತೆ ಕರ್ನಾಟಕ, ಮಹಾರಾಷ್ಟ್ರ, ಪಶ್ಚಿಮ ಕರಾವಳಿಯ ಹಲವು ಕಡೆಗಳಿಗೂ ಗೋವಾ ದಿವ್ ದಮನಗಳಿಗೂ, ಒಟ್ಟನಲ್ಲಿ ಹಿಂದುಸ್ತಾನದ ಬಹುಭಾಗಗಳಲ್ಲಿ ಅಪ್ಪನವರ ಸಂಚಾರವಾಯಿತು.



# ೩೮ ನೇ ಅಧ್ಯಾಯ

## ಎಡೆಯೂರ ಶ್ರೀ ಶಿದ್ಧಲಿಂಗೇಶ್ವರರ ಗದ್ದುಗೆಯ ಬಳಿಯಲ್ಲಿ ಯೋಗನಿದ್ರೆಯಲ್ಲಿದ್ದ ಶ್ರೀ ಮಹಾಂತಸ್ವಾಮಿಗಳ ಮೇಲೆ ತುಂಬಿ ಹೂ ಸುರಿದು ಸುಸಾಗತಗೈದದ್ದು

ಅಪ್ಪನವರು ಹಲವಾರು ಕಡೆಗೆ ಭಕ್ತರ ಇಚ್ಛೆಯಂತೆ, ತಮ್ಮ ಮನದಾಸೆಯಂತೆ, ಶಿವ ಮಹೇಶ್ವರನ ಪ್ರೇರಣೆಯಂತೆ ತೀರ್ಥ ಕ್ಷೇತ್ರ ಯಾತ್ರಾ ಸಂಚಾರಗೈದ ಬಳಿಕ ಒಮ್ಮೆ ಗದುಗಿನ ಭಕ್ತ ಬಾಂಧವರು ಅಪ್ಪನವರ ಸನ್ನಿಧಿಗೆ ಬಂದು ತಮ್ಮ ಇಚ್ಛೆಯಂತೆ ಎಡೆಯೂರ ಶ್ರೀಕ್ಷೇತ್ರ ದರ್ಶನಕ್ಕೆ ದಯಮಾಡಿಸಬೇಕೆಂದು ಬಿನ್ನೈಸಿಕೊಂಡರು. ಆಗ ಅಪ್ಪನವರು ಹಸನ್ಮುಖದಿಂದ ಆಗಲೆಪ್ಪ ನಿಮ್ಮೆಲ್ಲರ ಆಸೆಯನ್ನು ತಿರಸ್ಕರಿಸುವದೇಕೆ ಬರುತ್ತೇವೆ ಎಂದು ಅಪ್ಪಣೆ ಕೊಟ್ಟರು.

ಆಗ ಗದುಗಿನ ಭಕ್ತರು ನಿರ್ಣಯಿಸಿದ ದಿನದಂದು ಅಪ್ಪನವರೊಡಗೂಡಿ ಆನಂದದಿಂದ ಎಡೆಯೂರ ಶ್ರೀಕ್ಷೇತ್ರ ದರ್ಶನಕ್ಕೆ ಪ್ರಯಾಣ ಬೆಳೆಯಿಸಿದರು.

ಎಡೆಯೂರ ಶ್ರೀಕ್ಷೇತ್ರಕ್ಕೆ ದಯಮಾಡಿಸಿದ ಅಪ್ಪನವರು ಶ್ರೀ ಶಿದ್ಧಲಿಂಗೇಶ್ವರ ಸ್ವಾಮಿಯ ಗದ್ದುಗೆಯ ಬಳಿಯಲ್ಲಿ ಲಿಂಗಪೂಜಾನುಷ್ಠಾನ ತೀರಿಸುವದಾಗಿ ತಿಳಿಸಿದರು. ಆಗ ಎಡೆಯೂರ ಒಡೆಯ ಶಿದ್ಧಲಿಂಗೇಶ್ವರನ ಗದ್ದುಗೆಯ ಬಳಿಯಲ್ಲಿ ಅಂತಹ ಜಾಗ್ರತ ಸ್ಥಳದಲ್ಲಿ, ಹಗಲು ಹೊತ್ತಿನಲ್ಲಿಯೇ ನಿಲ್ಲುವದಕ್ಕೆ ಭೆಯ ಬರುವದೆಂಬ ಪ್ರತೀತಿಯನ್ನು ಅರಿತ ಹಲವಾರು ಪ್ರಮುಖ ಅರ್ಚಕರು, ಭಕ್ತ ಬಾಂಧವರು ಅಪ್ಪನವರ ಅಪ್ಪಣೆಯನ್ನು ಕೇಳಿ ಬೆರಗಾದರು. ಅನೇಕರು ಸಮೀಪ ಸುಳಿಯಲು ಸಹ ಅಂಜಿ ಹಿಂಜೆರೆಯುತ್ತಿರುವಾಗ ಅಂಥ ಜಾಗ್ರತ ಸ್ಥಳದಲ್ಲಿ ಸ್ವಾಮಿಗಳು ಸಮಗ್ರ ತಮ್ಮ ಲಿಂಗಪೂಜಾವಿಧಿಯನ್ನು ಪೂರ್ಣಗೊಳಿಸಲು ನಿರ್ಣಯಿಸಿದ್ದು ಬಹಳ ಜನರಿಗೆ ಹೆಮ್ಮೆ ಅಚ್ಚರಿ, ಅಗಾಧ ಲೀಲೆ ಎಂದೆನಿಸಿತು. ಅಪ್ಪನವರ ಅಪ್ಪಣೆಯಂತೆ ಅರ್ಚಕರು ಲಿಂಗ ಪೂಜಾ ವಿಧಾನಕ್ಕೆ ಸಕಲ ಸಿದ್ಧತೆ ಮಾಡಿ ದೂರಾದರು.

ಬಳಿಕ ಅಪ್ಪ ಮಹಾಂತಸ್ವಾಮಿಗಳು ಎಡೆಯೂರ ಒಡೆಯ ಶ್ರೀ ಶಿದ್ಧಲಿಂಗೇಶ್ವರರ ಗದ್ದುಗೆಯ ಬಳಿಯಲ್ಲಿ ಲಿಂಗಪೂಜಾದಿಗಳನ್ನು ತೀರಿಸಿ ಕೊಂಡು ಯೋಗ ನಿದ್ರೆಯಲ್ಲಿ ಅಲ್ಲೆ ಗದ್ದುಗೆಯ ಬಳಿಯಲ್ಲಿ ಪವಡಿಸಿದರು.

ಆಗ ಬೆಳಗು ಮೂಡಿ ಬರ ವಷ್ಟರಲ್ಲಿ ಶ್ರೀ ಶಿದ್ಧಲಿಂಗೇಶ್ವರನು ಮಹಾಂತ ಸ್ವಾಮಿಗಳಿಗೆ ಸ್ವಾಗತವು ಸುಸ್ವಾಗತವು ಎಂದೆನ್ನುವಂತೆ ತುಂಬಿ ಹೂಗಳ ರಾಶಿಯ ಮೇಲೆ ಯೋಗನಿದ್ರೆಯನ್ನು ಪೂರ್ಣಗೊಳಿಸುವಂತೆ ವ್ಯವಸ್ಥೆ ಮಾಡಿದ್ದನು.

ಬೆಳಗಿನ ಜಾವದಲ್ಲಿ ಗದ್ದುಗೆಯ ಬಳಿಯಲ್ಲಿ ಅಪ್ಪನವರನ್ನು ತುಂಬಿ ಹೂಗಳನ್ನು ಕಂಡ ಭಕ್ತರು, ಅರ್ಚಕರು ಬೆರಗಾಗಿ ಬೆರಳು ಕಚ್ಚಿದರಲ್ಲದೇ ನಮ್ಮ ಎಡೆಯೂರ ಒಡೆಯ ಶಿದ್ಧಲಿಂಗಸ್ವಾಮಿಯು ಶ್ರೀ ಸ್ವಾಮಿಗಳ ಲಿಂಗ ಪೂಜಾ ದುರಂಧರತೆಗೆ ಒಲಿದು, ಸ್ವಾಗತ ಬಯಸಿ, ತುಂಬಿ ಹೂಗಳಿಂದ ಸ್ವಾಗತಗೈದವನಾಗಿದ್ದಾನೆ ಎಂದು ಹರುಷದಿಂದ ಅಪ್ಪನವರ ಮಹಿಮೆ, ಬ್ರಹ್ಮಚರ್ಯ ತೇಜಸ್ಸಿಗೆ, ಲಿಂಗಪೂಜಾ ನಿಷ್ಠೆಗೆ ಮಣಿದು ಮೌನ ಆವರಿಸಿ ಸಾಷ್ಟಾಂಗ ನಮಸ್ಕಾರ ಹಾಕಿದರು. ಭಕ್ತರ ಮನದಲ್ಲಿ ಈ ಪ್ರಸಂಗ ಅಚ್ಚಳಿ ಯದೇ ಉಳಿಯಿತು.



## ೩೯ ನೇ ಅಧ್ಯಾಯ

### ಶ್ರೀ ಮಹಾಂತಜ್ಜನವರು ಇಬ್ಬಣಗಳ ಜಗಳ ವೈಮನಸ್ಸುಗಳನ್ನು ಮುರಿದು ಒಂದುಗೂಡಿಸಿದ್ದು

ಅಪ್ಪನವರು ಯಾವಾಗಲೂ ಭಕ್ತರ ಹಿತಾ ಹಿತಗಳನ್ನು ವಿಚಾರಿಸುವದ ರಲ್ಲಿ ನಿಸ್ಸೀಮರಾಗಿದ್ದರು.

ಇಂತಿರ್ಪ ಸಮಯದಲ್ಲಿ ರಾಜಕೀಯ ಗೊಂದಲದಲ್ಲಿ ಸಿಲುಕಿದ ಹಲವು ಗ್ರಾಮಗಳು ತಮ್ಮ ತಮ್ಮಲ್ಲಿ ವೈಮನಸ್ಸು ಹುಟ್ಟಿಸಿಕೊಂಡು ನಷ್ಟಹೊಂದುವ

ಮಟ್ಟಿಗೂ ಮುಂದುವರಿದು, ಸದಾ ಜಿದ್ದು, ಪೈಪೋಟಿ, ಪಕ್ಷ ಪಂಗಡಗಳ ಒಳಜಗಳ ನಿರಂತರ ಕೇಳುತ್ತಿದ್ದ ಅಪ್ಪನವರು ಆಯಾ ಗ್ರಾಮಗಳಿಗೆ ಸಂಚಾರ ಕೈಕೊಂಡು ತಾವು ಒಂದು ಕಡೆ ಮುಹೂರ್ತಮಾಡಿ ಎರಡು ಪಕ್ಷದವರನ್ನು ಕರೆಯಿಸಿ, ಹಿತವಾದ ಬುದ್ಧಿಯನ್ನು ಹೇಳಿ, ಮಾನವ ಬಾಳಿನ ನಿಜ ಗುರಿಯತ್ತ ತಿರುಗಿಸುವ ಕಾರ್ಯಗೈದರು ಅವರ ಈರ್ಷೆಯುಳ್ಳ ಮನಸ್ಸನ್ನು ಪರಿವರ್ತಿಸಿ ಅವರು ಇನ್ನು ಮೇಲೆ ವೈರತ್ವ ಮರೆತು ಸ್ನೇಹಭಾವದಿಂದ ಬಾಳುವದಾಗಿ ಭರವಸೆಯ ವಚನಕೊಟ್ಟು ಸ್ಟಾಷ್ಟಾಂಗ ಹಾಕುವವರೆಗೆ ಬಿಡುತ್ತಿದ್ದಿಲ್ಲ. ಇಂತಹ ಪರಿಸ್ಥಿತಿಯನ್ನು ಎದುರಿಸಿ ಮಾತ್ಸರ್ಯ ಮಾರಿಗಾಹುತಿಯಾದ ಗ್ರಾಮಗಳು ಸಾಕಷ್ಟಿವೆ.

ಒಮ್ಮೆ ರಬಕವಿಯ ಜಗಳವನ್ನು ನಿವಾರಿಸುವ ಪ್ರಸಂಗ ಅಪ್ಪನವರ ಪಾಲಿಗೆ ಬಂತು. ಗ್ರಾಮದ ಪ್ರಮುಖ ಭಕ್ತವೃಂದ ಅಪ್ಪನವರ ಸನ್ನಿಧಾನಕ್ಕೆ ಬಂದು ಬಿನ್ನೈಸಿ ಬೇಡಿಕೊಳ್ಳುತ್ತ, ಬುದ್ಧಿ ನಮ್ಮ ಗ್ರಾಮ ದ್ವೇಷ, ಅಸೂಯೆ, ಮತ್ಸರಗಳ ತಾಕಲಾಟದಲ್ಲಿ ಅಭಿವೃದ್ಧಿಯನ್ನು ಕಳೆದುಕೊಂಡು ಕುಂಠಿತವಾಗುವ ಪರಿಸ್ಥಿತಿಯಲ್ಲಿದೆ. ಕಾರಣ ತಾವು ಅಲ್ಲಿಯವರೆಗೆ ದಯಮಾಡಿಸಿ ಅವಸಾನದ ಹಾದಿ ಹಿಡಿದಿರುವ, ಗ್ರಾಮದಲ್ಲಿ ಹುಟ್ಟಿಕೊಂಡಿರುವ ಆಂತರಿಕ ಜಗಳವನ್ನು ಬಗೆಹರಿಸುವ ಕೃಪೆಯಾಗಬೇಕು. ಕೋರ್ಟು, ಕಛೇರಿ, ವಕಾಲತ್ತು ಹೀಗಾಗಿ ಸತ್ತು ಹುಟ್ಟುವ ಸ್ಥಿತಿಯಲ್ಲಿ ಬದುಕು ಸಾಗಿದೆ ಎಂದು ಸಾಷ್ಟಾಂಗ ಹಾಕಿದರು.

ಆಗ ಅಪ್ಪನವರು ಅವರನ್ನು ಸಮಾಧಾನಗೊಳಿಸಿದ್ದಲ್ಲದೇ ದಾಸೋಹದಲ್ಲಿ ಪ್ರಸಾದ ಕೊಳ್ಳುವಂತೆ ಅಪ್ಪಣೆ ಕೊಟ್ಟು ತಾವು ಮಧ್ಯಾಹ್ನದ ಲಿಂಗಪೂಜೆಯನ್ನು ತೀರಿಸಿಕೊಂಡು, ಭಕ್ತರೊಡಗೂಡಿ ರಬಕವಿ ಗ್ರಾಮಕ್ಕೆ ದಯಮಾಡಿಸಿದರು. ಬಳಿಕ ಅಪ್ಪನವರು ಎಲ್ಲರನ್ನು ಕರೆಯಿಸಿ, ಪ್ರೀತಿಯಿಂದ ಸಂತೈಸಿ ಸಮಾಧಾನಗೊಳಿಸುವ ಹಿತವಚನಗಳಿಂದಲೂ, ಮಧುರವಾದ ಮಾತುಗಾರಿಕೆಯಿಂದಲೂ ಹಿತ ಬೋಧಾಮೃತವನ್ನು ಹೊರಸೂಸಿ ನೋಡ್ರೆಪ್ಪಾ ನಾವೇನು ನಿಮ್ಮ ಪಾಲಿಗೆ ಕೋರ್ಟು ಅಲ್ಲ, ಕಚೇರಿ ಅಲ್ಲ. ಈ ರೀತಿ ದ್ವೇಷ ಬೆಳೆದು ಮತ್ಸರದಲ್ಲಿ ಸಾಗಿದರೆ ಹಾಳಾಗುತ್ತೀರೇ ಹೊರತು

ಯಾರಿಗೂ ಕ್ಷೇಮವಿಲ್ಲ. ದೊಡ್ಡವರ ನ್ಯಾಯದಲ್ಲಿ ಸಣ್ಣವರು ಅವರ ಬೆನ್ನುಹತ್ತಿ ತಮ್ಮ ಬಾಳನ್ನು ಅಧೋಗತಿಗೀಡುಮಾಡುವಂತಾಗಿ ಇಡೀ ಗ್ರಾಮಕ್ಕೂ ನಾಲ್ಕಾರು ಜನರ ವೈರತ್ವದ ಝಳ ತಗುಲಿ ನಾಶ ಹೊಂದ ಬೇಕಾಗುವದು. ನಾವು ಹೇಳುವದು ನಿಮಗೆ ಸೂಕ್ತವೆನಿಸಿದರೆ ಒಪ್ಪಿ ಕೊಳ್ಳಿರಿ ಎಂದು ಹಲವು ಪರಿಯಿಂದ ತಿಳುವಳಿಕೆಯ ನುಡಿಗಳನ್ನು ನೀಡಿದ ಅಪ್ಪನವರ ಪ್ರೇಮಾಮೃತದ ನುಡಿಗಳನ್ನು ಸೇವಿಸಿದ ಎರಡೂ ಪಕ್ಷದವರು ತಮ್ಮ ತಮ್ಮ ತಪ್ಪುಗಳನ್ನು ಒಪ್ಪಿಕೊಂಡು ಎಲ್ಲರೂ ಸ್ನೇಹದ ಪ್ರತೀಕವೆಂದು ಅಪ್ಪನವರ ಅಪ್ಪಣೆಯ ಪ್ರಕಾರ ಒಟ್ಟಾಗಿ ಪ್ರಸಾದ ಸೇವಿಸಿ, ಸನ್ಮಾರ್ಗದಲ್ಲಿ ಬಾಳಹತ್ತಿದರು. ಈ ಪ್ರಸಂಗವನ್ನು ಕಂಡ ರಬಕವಿಯ ಜನತೆಯು ಅಪ್ಪ ನವರ ನ್ಯಾಯ ತೀರಿಸುವ ಪದ್ಧತಿಯನ್ನು ಹೊಗಳಿದರಲ್ಲದೇ ಇಬ್ಬಣಗಳ ಇತ್ತಂಡಿಯಲ್ಲಿ ಸಿಕ್ಕು ತತ್ತರಿಸಿ ಹೋದ ನಮ್ಮ ಗ್ರಾಮವನ್ನು ತಮ್ಮ ಅಮರ ವಾಣಿಯಿಂದ ಎಚ್ಚರಗೊಳಿಸಿ, ಸುಖ-ಶಾಂತಿಗಳ ತವರು ಮನೆಯನ್ನಾಗಿ ಮಾಡಿದ ಅಪ್ಪನವರು ಮಹೇಶ್ವರನ ಅವತಾರವೆಂದು ಎಲ್ಲರೂ ಒಮ್ಮತದಿಂದ ಬಾಳುವದಾಗಿ ವಚನಕೊಟ್ಟು ಸಾಷ್ಟಾಂಗ ನಮಸ್ಕಾರ ಮಾಡಿ ಮುರು ಗೋಡಕ್ಕೆ ಬೀಳ್ಕೊಟ್ಟರು.

## ಅಪ್ಪನವರ ಅಪ್ಪಣೆ ಮೀರಿದ ಅವಿವೇಕಿಗಳ ಪರಿಸ್ಥಿತಿ

ಬೆಳಗಾಂವ ಜಿಲ್ಹೆ ಎನ್ನುವದು ಕೊಲೆ, ಸುಲಿಗೆಗಳಿಗೆ ಪ್ರಸಿದ್ಧವಾದ ಜಿಲ್ಹೆಯೆಂದು ಪ್ರತಿಯೊಂದು ಕಡೆಯಿಂದ ಕೇಳುವ ಉದಾಹರಣೆಯಂತೆ ಯಾವ ಕಾಲದಿಂದಲೂ ನಡೆದು ಬಂದ ಕೊಲೆ, ಸುಲಿಗೆ, ಕಳುವು, ದರೋಡೆ, ಅನಾಚಾರ ಅತ್ಯಾಚಾರಿಗಳನ್ನು ತಿದ್ದಿ ಬುದ್ಧಿ ಹೇಳಿ ಸನ್ಮಾರ್ಗದಲ್ಲಿ ಮುನ್ನಡೆ ಸುವ ಪ್ರಸಂಗಗಳು ಅಪ್ಪನವರ ಪಾಲಿಗೆ ಬಾರದೇ ಇರಲಿಲ್ಲ. ಆಗ ಅಪ್ಪನವರು ತಮ್ಮ ಅಮೃತವಾಣಿಯಿಂದ ಅನ್ಯಾಯವೆಂಬುದು ಮಾನವನ ಅವನತಿಗೆ ಕಾರಣ. ಅತ್ಯಾಚಾರವದು ಮಾನವ ಜೀವಿತವನ್ನೇ ನಾಶಮಾಡುವ ಅಸ್ತ್ರ. ಕೊಲೆ, ಸುಲಿಗೆ, ದರೋಡೆಯಂತಹ ಹೀನ ಕಾರ್ಯಗಳಿಂದ ಶಿವಶಾಪನಕ್ಕೆ ಗುರಿಯಾಗಿ ಕೊನೆಗೊಂದು ದಿನ ದುರ್ಮರಣದಂತಹ ದುರ್ಧರ ಪ್ರಸಂಗ

ಪ್ರಾಪ್ತವಾಗದೇ ಬಿಡದು, ಸನ್ಮಾರ್ಗಿಗಳಾಗಿರಿ, ಸಹಕಾರ ಜೀವನದಲ್ಲಿ ಬಾಳಿರಿ, ಹೀನ ಬದುಕು ಸಂಗ್ರಹಿಸಿ ಅದೆಷ್ಟು ದಿನ ಬದುಕಲು ಸಾಧ್ಯವೆಂದು ಪರಿಪರಿಯಿಂದ ಮಮತೆ, ವಾತ್ಸಲ್ಯಗಳಿಂದ ಬೋಧಿಸುತ್ತಿದ್ದರು. ಅಪ್ಪನವರು ಅಪ್ಪಣೆಯನ್ನು ಪಾಲಿಸಿ ನಯ ವಿನಯ, ವಿನೂತ ಭಾವಗಳಿಂದ ಸದಾಚಾರಿಗಳಾದವರು ಕೆಲವರಾದರೆ ಹಲ ಕೆಲವು ಪುಣ್ಯಾತ್ಮ ಗರ್ವಾಂಧರು ಅಪ್ಪನವರ ಅಮರವಾಣಿಗೆ ಕಿವಿಗೊಡದೆ, ಅವರೇನು ಹೇಳುತ್ತಾರೆ ಎಂದು ಅಹಂಭಾವದಿಂದ ಅಲಕ್ಷ್ಯಮಾಡಿ, ತಮ್ಮ ದುರ್ನಡತೆಯಲ್ಲಿ ಸಾಗಿ ಕೆಲವು ಕಾಲ ಗತಿಸಿದಾಗ ಶಿವಯೋಗಿಗಳ ಮಾತು ಮೀರಿದ ಪರಿಣಾಮದಿಂದ ಬರಬಾರದಂತಹ ಪ್ರಸಂಗಗಳು ಅಪ್ಪೆ ಏಕೆ ಬೇಡಿತೊಟ್ಟು ಸೆರೆಮನೆಯ ವಾಸದಲ್ಲಿ ಕಂಗೆಟ್ಟು ಕಂಗಾಲ ಸ್ಥಿತಿಯಲ್ಲಿ ಹಲವಾರು ಕಷ್ಟನಷ್ಟಗಳಿಂದ ಸಂಕಷ್ಟಗಳ ಸರಮಾಲೆಯೇ ಕೊರಳಿಗೆ ಬಿದ್ದು, ಬಳಿಕ ತಮ್ಮ ತಪ್ಪಿನ ಅರುವಾಗಿ ಶಿವಯೋಗಿಗಳ ಮಾತಿನಂತೆ ವರ್ತಿಸಿದ್ದರೆ ಈ ಪ್ರಸಂಗ ಬರುತ್ತಿರಲಿಲ್ಲವೆಂದು ತಿಳಿದ ಮೇಲೆ ಅಪ್ಪನವರ ಸನ್ನಿಧಿಗೆ ಬಂದು ಮುಂದೆಂದೂ ಈ ರೀತಿ ಅನಾಚಾರಿಗಳಾಗಲು ಪ್ರಯತ್ನಿಸುವದಿಲ್ಲವೆಂದು ವಚನ ಕೊಟ್ಟು, ಸಾಷ್ಟಾಂಗ ನಮಸ್ಕಾರ ಗೈದು ಅಪ್ಪನವರ ಹೇಳಿಕೆಯಂತೆ ಸನ್ಮಾರ್ಗಿಗಳಾಗಿ, ಸುಖ–ಸಂಪತ್ತಿನ ಬದುಕು ಸಾಗಿಸಿರುವರು. ಪದೇ ಪದೇ ಅಂತಹ ಕೀಳು ಮನದ ಮನುಜರು ಸಹ ಬುದ್ಧಿವಂತರಾಗಿ ಬಾಳುವಂತಾಗಬೇಕಾದರೆ ಅಪ್ಪನವರ ಆಶೀರ್ವಾದ ಆತ್ಮಶ್ರೀಯಿಂದ ಬರುವ ಅಮರ ವಚನವೆಂದು ಜನತೆಯು ಹರುಷದಿಂದ ಹೆಮ್ಮೆಯಿಂದ ನುಡಿಯುತ್ತಿದ್ದರು.

ಸಂಚಾರಕ್ಕೆ ಹೋದಾಗೊಮ್ಮೆ ಶ್ರೀಮಹಾಂತಸ್ವಾಮಿಗಳ ಸನ್ನಿಧಿಯಲ್ಲಿ ಪ್ರತಿಯೊಂದು ಗ್ರಾಮದ ಭಕ್ತರು ತಮ್ಮ ಗ್ರಾಮದ ಪರಿಸ್ಥಿತಿಯನ್ನು ವಿವರಿಸಿ ಅವರಿಂದ ಉನ್ನತ ಮಟ್ಟದ ವಿಚಾರ ಸರಣಿಯ ಬೋಧಾಮೃತ ಪಡೆಯುತ್ತಿದ್ದರು. ಅಪ್ಪನವರು ಉದ್ದೇಶಪಟ್ಟು ಜನಜೀವನ ಶುದ್ಧವಾಗಲಿ, ನಿರ್ಮಲವಾಗಲಿ ಎಂದು ಹಾರೈಸಿ ಹರಸಿ ಆಶೀರ್ವದಿಸುತ್ತಿದ್ದರು.

ಮಹಾಂತಜ್ಜನವರು ವ್ಯಾಮೋಹ ರಹಿತರು ರಾಗ ದ್ವೇಷಾಸೂಯೆಗಳಿಗೆ ಸ್ಥಾನವಿಲ್ಲದ ಅವರ ಜೀವನ ವೈಖರಿಯನ್ನು ಅರಿತರೆ ಎಂಥ ನಿರಾಢಂಬರದ

ಸ್ವಾಮಿ ಸತ್ಪುರುಷರಿವರೆಂದು ಆಚ್ಚರಿಗೊಳ್ಳಬಹುದು. ಹಣವನ್ನಂತೂ ಅಜ್ಜನವರು ಯಾವ ಕಾಲದಲ್ಲಿಯೂ ತಮ್ಮ ಕೈಯಿಂದ ಮುಟ್ಟಿದವರಲ್ಲ. ಬೇಕಾದಷ್ಟು ಕಾಣಿಕೆಯ ಹಣ ಬಂದರೂ ಅದನ್ನು ಕಣ್ಣೆತ್ತಿ ಸಹ ನೋಡಿ ದವರಲ್ಲ. ಎಲ್ಲವೂ ಮಠದ ಕಾರಭಾರಿಗಳ ಮುಖಾಂತರ ಸಾಗಿ ನಡೆಯುವ ಪದ್ಧತಿಯನ್ನು ಪರಿಪಾಠಗೊಳಿಸಿದ್ದರು. ಅಪ್ಪನವರ ಪೂಜೋತ್ಸವಕ್ಕೆಂದು ಹಣ್ಣು ಕಾಯಿಗಳ ಸಂಗಡ ಬಂದರೆ ಅದನ್ನು ಸೇವೆಗೆ ಇದ್ದವರು ತೆಗೆದು ಕೊಳ್ಳುತ್ತಿದ್ದರು. ಹಣ್ಣು ಕಾಯಿ ಆಶೀರ್ವಾದ ಕರುಣಿಸುವದೊಂದೇ ನಿತ್ಯ ಕರ್ತವ್ಯವಾಗಿತ್ತು. ಅಂತೂ ನಿರ್ಲಿಪ್ತ ಪರಾಕಾಷ್ಟವನ್ನು ಮುಟ್ಟಿದ ಮಹಾಂತಜ್ಜನವರು ಶಿವ ಮಹೇಶನ ವಂಶೀಭೂತರೆಂದೇ ಹೇಳಬೇಕು. ಬರು ಬರುತ್ತ ಮಠದ ವ್ಯವಸ್ಥೆಗಾಗಿ ಟ್ರಸ್ಟ ಕಮೀಟಿಯೊಂದು ರಚನೆಯಾಯಿತು. ಅದು ಭಕ್ತರ ಇಚ್ಛಾ ತೃಪ್ತಿಗಾಗಿ ಯಾವತ್ತು ಪ್ರಮುಖ ಭಕ್ತರು ತಮ್ಮ ತಮ್ಮಲ್ಲಿ ವಿಚಾರ ಮಾಡಿಕೊಂಡು ಮಠದ ಉನ್ನತಿಯ ಉದ್ದೇಶದಿಂದ ಈ ಟ್ರಸ್ಟಿನ ಯೋಜನೆ ಸಿದ್ಧವಾಯಿತು. ಆದರೆ ಅಪ್ಪನವರನ್ನು ಟ್ರಸ್ಟ ಸಮಿತಿ ಯಲ್ಲಿ ಮುಖ್ಯಸ್ಥರನ್ನಾಗಿ, ಅಧ್ಯಕ್ಷರನ್ನಾಗಿ ಮಾಡಬೇಕೆಂದು ಭಕ್ತರು ಬೇಕಾ ದಷ್ಟು ಶ್ರಮವಹಿಸಿ ಅಪ್ಪಣೆ ದಯಪಾಲಿಸಲು ಒತ್ತಾಯಿಸಿದರು. ಆಗ ಸ್ವಾಮಿಗಳು ಇದೆಲ್ಲಾ ನಮಗೇಕೆ ಬೇಕರೆಪ್ಪಾ ನಮ್ಮ ಮನದಾಸೆಯಂತೆ ಲಿಂಗಪೂಜಾ ವಿಧಾನಕ್ಕೆ ಸರಿಯಾದ ವ್ಯವಸ್ಥೆ ಮಾಡಿಕೊಟ್ಟರೆ ತೀರಿತು, ಹೆಚ್ಚಿನ ಉಪಚಾರ ಬೇಡವೆಂದು ನಿಚ್ಚಳವಾಗಿ ಹೇಳಿ ಬಿಟ್ಟರು. ಅಲ್ಲದೇ ನೀವು ಶ್ರದ್ಧಾ ಭಕ್ತಿಯಿಂದ ಮಾಡುವ ಶಿವನ ಪ್ರತಿಯೊಂದು ಕಾರ್ಯ ವನ್ನು ಸಂತೋಷದಿಂದ ಕಂಡು ಆನಂದಿಸುತ್ತೇವೆ ಎಂದು ಟ್ರಸ್ಟಿನ ಕಾರ್ಯಕ್ಕೆ ತಮ್ಮ ಒಪ್ಪಿಗೆಯನ್ನು ಕೇಳುವ ಅವಶ್ಯವಿಲ್ಲ. ಭಕ್ತರ ಇಚ್ಛೆಯೇ ಶಿವನ ಇಚ್ಛೆ, ಯಾವದೇ ಕಾರ್ಯ ಜರುಗಬೇಕಾದರೂ ಆತನ ಆಜ್ಞೆಯಂತೆ ನಡೆಯುವ ದೆಂದು, ಯಶಸ್ವಿಯಾಗಬಲ್ಲದೆಂದು ನೀತಿ ವಚನದಲ್ಲಿ ಬೋಧಿಸುತ್ತಿದ್ದರು. ಮಠದಲ್ಲಿ ಅಕ್ಕ ಮಹಾದೇವಿಯ ಸುಂದರ ಮೂರ್ತಿಯನ್ನು ಸ್ಥಾಪಿಸಲು ಅಪ್ಪಣೆ ಮಾಡಿ ಹೆಣ್ಣು ಮಕ್ಕಳ ಆದರ್ಶ ಬಾಳಿನ ಗುರುತು ರೂಪುಗೊಳ್ಳು ವಂತೆ ಮಾಡಿದರು. ಪ್ರತಿ ಕ್ಷಣಕ್ಕೂ ಆದರ್ಶ ಜೀವನದ ಪ್ರಸಂಗ ಪ್ರತೀತಿ ಗಳನ್ನು ಕಂಡು ಅನುಭವಿಸುವ ಆಸೆಯಲ್ಲಿ ಮಠಕ್ಕೆ ಬರುವ ಪ್ರತಿಯೊರ್ವ

ಹೆಣ್ಣು ಮಗಳು ತಲೆ ಬಾಗಿ ಮಣಿದು ನಮಸ್ಕರಿಸದಿರಲಿಕ್ಕಿಲ್ಲ. ಹೆಣ್ಣು ಮಕ್ಕಳ ವಿಚಾರದಲ್ಲಿ ಅಪ್ಪನವರು ತೋರುವ ಮಮತೆ, ಕರುಣೆ, ವಾತ್ಸಲ್ಯದ ಪ್ರಸಂಗದಿಂದ ಕಣ್ವ ಋಷಿಗಳ ಆಶ್ರಮದಲ್ಲಿ ಬಾಳಿ ಬೆಳೆದು ದುಷ್ಯಂತನರಸಿಯಾಗಿ ಭರತ ಕುವರನಿಗೆ ಮಾತೆಯಾಗಿ ಭಾರತ ದೇಶದ ರಾಜಮಾತೆ ಎನಿಸಿ, ಸಕಲೈಶ್ವರ್ಯದ ಭೋಗ ಭಾಗ್ಯಗಳನ್ನು ಪಡೆದ ಮೇನಿಕೆಯ ಪುತ್ರಿ, ವಿಶ್ವಾಮಿತ್ರ ಬ್ರಹ್ಮರ್ಷಿಗಳ ಕರುಣೆಯ ಕುವರಿ, ಮಾತಾ-ಪಿತೃಗಳಿಂದ ದೂರಾಗಿ ಕಣ್ವ ಋಷಿಗಳ ಒಡನಾಟದ ಕರುಣೆಯ ಕಂದಮ್ಮ ಎನಿಸಿ ಬಾಳಿ ಕಣ್ವರ ಕರುಣೆಯ ಜಲದಿಂದ ಪೋಷಣೆಗೊಂಡು ಭಾರತ ಇತಿಹಾಸದಲ್ಲಿ ಅಜರಾಮರ ಕೀರ್ತಿಯನ್ನುಳಿಸಿಕೊಂಡ ಶಾಕುಂತಲೆಯ ನೆನಪು ಬರುವದು ಅಪ್ಪನವರ ಅಂತಃಕರುಣೆಯಲ್ಲಿ ಬೆಳೆದು ಬಾಳಿ ಬದುಕಿನ ನಿಜ ಗುರಿ ಮುಟ್ಟಿದ ಹಲವಾರು ಹೆಣ್ಣು ಮಕ್ಕಳ ಜೀವನದ ಹಿನ್ನೆಲೆಯನ್ನು ಅವಲೋಕಿಸಿದರೆ ಎಷ್ಟೋ ಹೆಣ್ಣು ಮಕ್ಕಳನ್ನು ಪಿತೃ ಪಾಲನೆಯ ಜವಾಬ್ದಾರಿಯಲ್ಲಿ ಸಲುಹಿ ಪ್ರಪಂಚದ ನಿಜ ಜೀವನದ ದಾರಿಗೆ ಹಚ್ಚಿ ಮಾಂಗಲ್ಯವತಿಯರಾಗಿ ಪತಿಯೊಡನೆ ಪ್ರಪಂಚದಲ್ಲಿದ್ದು ಪಾರಮಾರ್ಥ ಸಾಧಿಸುವ ಮಾರ್ಗ ತೋರಿಸಿದರು. ಸಂಸಾರದ ಸಕಲ ಭೋಗ ಭಾಗ್ಯಗಳನ್ನು ಅನುಭವಿಸುತ್ತ ಶಿವತತ್ವ ಸಂಪನ್ನೆಯರಾಗಿ ಬಾಳುವಂತೆ ಮಾಡಿದರು. ಅಪ್ಪನವರ ಅಪ್ಪಣೆಯ ಪ್ರಕಾರ ಮದುವೆಯಾಗಿ ಹೋದ ಹಲವಾರು ಹೆಣ್ಣು ಮಕ್ಕಳು ಸಂಸಾರ ಪದ್ಧತಿಯಂತೆ ಗಂಡನ ಮನೆಯಿಂದ ತವರು ಮನೆಗೆ ಬರುವ ತೆರದಿ ಮಹಾಂತಸ್ವಾಮಿಗಳ ಸನ್ನಿಧಿಗೆ ಮಠಕ್ಕೆ ಬಂದು ತಮಗೆ ಬೇಕಾದಷ್ಟು ದಿನ ಅಪ್ಪನವರ ಸೇವೆಯಲ್ಲಿ ಉಳಿದು ಉಡುಗೊರೆ ಪಡೆದುಕೊಂಡು ಮರಳಿ ಪತಿಯ ನೆಲೆಗೆ ಹೋಗಿ ಸರಿಕರೊಡನೆ ಸ್ವಾಮಿಗಳ ನೀತಿ ವಚನದಂತೆ ಬಾಳಿಕೊಂಡಿರುವರಲ್ಲದೇ ಸ್ವಾಮಿಗಳ ಹೆಸರು ಕ್ಷಣ ಕ್ಷಣಕ್ಕೂ ಸ್ಮರಿಸುವಂತೆ ಅವರ ಕೀರ್ತಿಯನ್ನು ಅಮರವಾಗಿ ಉಳಿಸಿದ್ದಾರೆ. ಅಪ್ಪನವರ ಅಸಾಧಾರಣವಾದ ಜೀವನದಲ್ಲಿ ಕಂಡು ಬರುವ ಹಲವಾರು ಸನ್ನಿವೇಶಗಳು ಜನಾದರಣೀಯವು, ಜನಹಿತ ಸಾಧನೆಯ ಬೆಳಕು ಬೀರುವಂಥಹವುಗಳು ಎಂದು ಅವರ ಹಲವಾರು ಉದಾಹರಣೆಗಳು ಸಾಕ್ಷಿಯಾಗಿ ಉಳಿದುಕೊಂಡಿವೆ. ಶ್ರೀಮಹಾಂತಸ್ವಾಮಿಗಳು ತಮ್ಮ ನೂರೊಂದು ವರ್ಷ ಆಯುಷ್ಯದ ಅಂಕಿಗಳನ್ನು ಸರಿಸಿ ಮುನ್ನಡೆದು ಜನಜೀವನಕ್ಕೊಂದು ಮಾರ್ಗದರ್ಶಕ

ಬಾಳಿನ ರೂಪಕದಂತೆ ಕಾಣುತ್ತಿದ್ದರು. ಷಟಸ್ಥಲ ತತ್ವಜ್ಞಾನ ಪಡೆದು ಸಾಕಷ್ಟು ಸಂಪಾದನೆ ಮಾಡಿಕೊಂಡು ಜೀರ್ಣಿಸಿಕೊಂಡು ಆಚಾರದಲ್ಲಿ ತಂದು ಆಚರಣೆಯಿಂದ ನಡೆದುಬಂದ ಜ್ಞಾನವೃದ್ಧರು, ವಯೋವೃದ್ಧರು ಎನಿಸಿದರು. ಜಂಗಮ ದೀಕ್ಷೆ ನೀಡಲು ಅವರು ಸಾಕಷ್ಟು ಅನುಭವ ಪಡೆದುಕೊಂಡದ್ದರಿಂದ ಹಲವಾರು ವಿರಕ್ತ ಮಠದ ಅಧಿಕಾರಗಳು ಅಪ್ಪನವರ ಮುಖಾಂತರ ನಡೆದವು. ಅದರಂತೆ ಹಾವನೂರ ಸ್ವಾಮಿಗಳಿಗೂ, ಕಮತಗಿ ಹುಚ್ಚೇಶ್ವರ ಸ್ವಾಮಿಗಳಿಗೂ ಗುರುಮಠಕಲ್ಲ ಸಂಗಮೇಶ್ವರ ಸ್ವಾಮಿಗಳಿಗೂ ಇನ್ನೂ ಅನೇಕ ಪುಣ್ಯ ಪೂಜ್ಯ ಯತಿಪುಂಗವರಿಗೆ ಅಪ್ಪನವರಿಂದ ಅಧಿಕಾರ ದೊರೆತವು,ಅನುಗ್ರಹ ದೊರೆತವು. ಇದೇ ರೀತಿಯಾಗಿ ಅಪ್ಪನವರ ಅಂತಃಕರುಣೆಯ ಮಡುವಿನಲ್ಲಿ ಮಿಂದು ಮಡಿಯಾಗಿ ಪರಿಶುದ್ಧಿಯನ್ನು ಹೊಂದಿದ ಪ್ರತಿಯೊಂದು ವ್ಯಕ್ತಿಗೆ ಒಂದಿಲ್ಲೊಂದು ರೀತಿಯಿಂದ ಒಳ್ಳೇದಾಗುವ ಪ್ರಸಂಗಗಳು ಎಡಬಿಡದೆ ನಡದೇ ಇರುತ್ತಿದ್ದವು. ನಿಗರ್ವ ನಿರ್ಮಲ ಜ್ಯೋತಿಯಾಗಿ ಬೆಳಗುತ್ತಿದೆ ಜ್ಞಾನಜ್ಯೋತಿ, ಮಹಾಂತ ಜ್ಯೋತಿಯ ಕುಡಿಗೆ ಮಸುಕೆಂಬ ಶಬ್ದ ಕೇಳ ಬಾರದು. ಆದರೆ ಅಪ್ಪನವರು ಏನೇ ಕಾರ್ಯಗೈದರೂ ಎಂಥಹದೇ ಪ್ರಸಂಗ ವನ್ನು ಗೆದ್ದು ಆತ್ಮಶುದ್ಧಿಯನ್ನು ನೀಡಿದರೂ ಇದು ತಾವು ಮಾಡಿದ್ದು ತಮ್ಮಿಂದಾದ ಕಾರ್ಯವೆಂದು ನುಡಿಯುತ್ತಿರಲಿಲ್ಲ. ಎಲ್ಲವೂ ಶಿವನ ಇಚ್ಛೆ ಅವನ ಪ್ರೇರಣೆಯ ಪ್ರಕಾರ ಸಾಗಿದ ಕಾರ್ಯವೆಂದು ಹುಸಿನಗೆಯಲ್ಲಿ ನುಡಿಯುತ್ತಿದ್ದರು.



# ೪೦ ನೇ ಅಧ್ಯಾಯ

## ಅಪ್ಪನವರ ಹಸ್ತ ಸ್ಪರ್ಶದಿಂದ ಸಂಗೊಳ್ಳಿ ಮಲ್ಲನಗೌಡರ ಬೆನ್ನುಬೇತಾಳ ಹುಣ್ಣು ಮಾಯವಾದದ್ದು

ಬೆಳಗಾಂವ ಜಿಲ್ಹೆಯ ಬೈಲಹೊಂಗಲ ತಾಲೂಕಿನಲ್ಲಿ ಸಂಗೊಳ್ಳಿ ಎಂಬ ಗ್ರಾಮವಿದ್ದು, ಊರಿನ ಪೋಲೀಸ ಪಾಟೀಲನೆಂದು ಹೆಸರಾದ ಮಲ್ಲನಗೌಡನು

ಶ್ರೀ ದುರುದುಂಡೀ ಮಹಾಂತಶಿವಯೋಗಿಗಳ ಬಗ್ಗೆ ಶ್ರದ್ಧಾಭಕ್ತಿಗಳಿಂದ ನಡೆದುಕೊಳ್ಳುವ ನಿಷ್ಠಾ ಭಕ್ತರಾಗಿದ್ದನು. ಈ ಮನೆತನದವರು ಮೊದಲಿನಿಂದಲೂ ಅರಭಾವಿ ದುರುದುಂಡೀಶ್ವರರ ಮಠಕ್ಕೆ ನಡೆದುಕೊಳ್ಳುತ್ತಿದ್ದರು. ಸಕಲ ಸಂಪತ್ತು, ಭೂಮಿ, ಸೀಮೆ, ಆಳು, ಹೋಳು, ಕಾಳು, ಕಡಿ ಯಾವದಕ್ಕೂ ಕೊರತೆ ಎಂಬುದನ್ನೆ ಅರಿಯದ ಗೌಡರ ಬಾಳಿನಲ್ಲಿ ಸೌಖ್ಯವೆಂಬುವದನ್ನೇ ನಾಶ ಮಾಡಿದ ಬೆನ್ನುಬೇತಾಳ ಹುಣ್ಣು ಹುಟ್ಟಿಕೊಂಡು ಹುಣ್ಣಿನ ಬಾಧೆಯಲ್ಲಿ ದಿನನಿತ್ಯವೂ ಬಳಲಿ ಬೆಂಡಾಗಿ ಹೋಗಿದ್ದನು. ಈತನ ಉಪಚಾರಕ್ಕಾಗಿ ದಿವ್ಯವಾದ ಹಲವಾರು ತರಹದ ವೈದ್ಯರ ದಿವ್ಯ ಔಷಧಗಳು ಮುಗಿದವು. ಕಾಲಮಾನಕ್ಕೆ ತಕ್ಕಂತೆ ಪ್ಲಾಸ್ಟಿಕ್ ಪೇಪರದಲ್ಲಿ ಪ್ಯಾಕ್ ಆಗಿ ದೊಡ್ಡ ದೊಡ್ಡ ಎಮ್. ಬಿ. ಬಿ. ಎಸ್. ಡಾಕ್ಟರ, ಸರ್ಜನ್‌ರುಗಳಿಂದ ಪರಿಶೋಧಿಸಿ ಪಾರಿತೋಷಕ ಪಡೆದು ಬಂದ ಮುಲಾಮು ಇನ್ನಿತರ ಗುಳಿಗೆ ಬಾಟ್ಲಿಗಳು ಲೆಖ್ಖವಿಲ್ಲದಷ್ಟು ರಾಸಿಗಟ್ಟಲೆ ಖಾಲಿಯಾದವು. ಆದರೂ ಉಪಯೋಗವಾಗಲಿಲ್ಲ. ಹುಣ್ಣು ಮಾಯಲಿಲ್ಲ, ಮಲ್ಲನಗೌಡರ ವೇದನೆ ಕೊನೆ ಮುಟ್ಟಲಿಲ್ಲ.

ಕೊನೆಗೊಮ್ಮೆ ಮಲ್ಲನಗೌಡ ಮಹಾಶಯರಿಗೆ ತಮ್ಮ ಇಷ್ಟ ದೈವವೆನಿಸಿದ ದುರುದುಂಡೀ ಮಹಾಂತ ಶಿವಯೋಗಿಗಳಲ್ಲಿ ಮೊರೆಹೋಗದೆ ಗತ್ಯಂತರವಿಲ್ಲವೆಂದೂ, ಮಹಾಂತ ಸ್ವಾಮಿಗಳಿಂದ ತಮ್ಮ ಮನೆಯಲ್ಲಿ ಲಿಂಗಪೂಜಾದಿ ಅನುಷ್ಠಾನಗಳನ್ನು ನೆರವೇರಿಸಿ, ಅವರ ಹಸ್ತಸ್ಪರ್ಶ ಹಿತವಚನಗಳಿಂದ ಮಾತ್ರ ಈ ಬೆನ್ನುಬೇತಾಳ ಹುಣ್ಣು ಮಾಯುವದರಲ್ಲಿ ಸಂದೇಹವಿಲ್ಲವೆಂದು ಯೋಚಿಸಿ ಪೂಜ್ಯ ಭಾವ ತಳೆದವನಾಗಿ ಅಪ್ಪನವರ ದರ್ಶನಕ್ಕೆಂದು ಮುರುಗೋಡ ಮಠಕ್ಕೆ ಬಂದನು.

ಈ ಸಮಯದಲ್ಲಿ ಮುಳುಗುಂದ ಬಾಲಲೀಲಾ ಮಹಾಂತ ಶಿವಯೋಗಿಗಳು ಮೈಸೂರ ನಾಲ್ಮಡಿ ಕೃಷ್ಣರಾಜ ಅರಸರ ಭಕ್ತಿಯ ಅಪೇಕ್ಷೆಯಂತೆ ಮೈಸೂರಿಗೆ ಹೋಗಿ ತಮ್ಮ ದಿವ್ಯದೃಷ್ಟಿ, ಕೃಪಾಪೂರ್ಣ ಆಶೀರ್ವಾದ ಬಲದಿಂದ ಕೃಷ್ಣರಾಜರ ಬೆನ್ನಿನಲ್ಲಿ ಹುಟ್ಟಿದ ಬೆನ್ನುಬೇತಾಳ ಹುಣ್ಣು ನಾಶಗೊಳ್ಳಲೆಂದು ಕೃಷ್ಣರಾಜರಿಗೆ ತಮ್ಮ ನಿತ್ಯ ಲೇಪನದ ಭಸ್ಮದ ಬಹು

ಭಾಗವನ್ನು ಕೊಟ್ಟು ನಿತ್ಯವು ಸ್ನಾನ ಪೂಜಾ ವಿಧಿಗಳು ಮುಗಿದ ಬಳಿಕ ಭಕ್ತಿವಿಶ್ವಾಸದಿಂದ ಲೇಪಿಸುವ ಅಪ್ಪಣೆಯನ್ನು ದಯಪಾಲಿಸಿದರು. ಆಗ ನಾಲ್ಮಡಿ ಕೃಷ್ಣರಾಜರು ಶಿವಯೋಗಿಗಳ ಅಪ್ಪಣೆಯನ್ನು ಪಾಲಿಸಲು ಸ್ವಲ್ಪೇ ದಿನಗಳಲ್ಲಿ ಅವರ ಬೆನ್ನುಬೇತಾಳ ಹುಣ್ಣು ಮಾಯವಾಗಿ ಸುಖದಿಂದ ಬಾಳಿದರು.

ಈಗ ಅಪ್ಪನವರಾದರು ಮುಳುಗುಂದ ಬಾಲಲೀಲಾ ಮಹಾಂತ ಶಿವ ಯೋಗಿಗಳವರ ಈ ಪ್ರಸಂಗವನ್ನು ತಾವೂ ಗೆದೆಯ ಬಯಸಿದರು. ಆದರೆ ಅಪ್ಪನವರು ತಿಳಿದು ತಿಳಿಯದವರಂತೆ ಕಾರ್ಯಗೈಯುವವರಾಗುತ್ತಿದ್ದರೆ ವಿನಃ ನಾವು ಮಾಡುತ್ತೇವೆ, ನಮ್ಮಿಂದಾಯಿತು ಎನ್ನುವ ಒಣ ಡಾಂಭಿಕ ಗೊಂದಲ ದಲ್ಲಿ ಸಿಲುಕುತ್ತಿರಲಿಲ್ಲ. ಅಂತೇ ಮಲ್ಲನಗೌಡರ ಆಸೆಯಂತೆ ಸಂಗೊಳ್ಳಿಗೆ ಅವನ ಮನೆಯವರೆಗೆ ದಯಮಾಡಿಸಿ ತಮ್ಮ ನಿತ್ಯ ನೇಮಗಳಾದ ಲಿಂಗಪೂಜಾ ಅನುಷ್ಠಾನಾದಿಗಳನ್ನು ತೀರಿಸಿಕೊಂಡು ಮಲ್ಲನಗೌಡನನ್ನು ಬಳಿಯಲ್ಲಿ ಕರೆದು ಆವನ ಬೆನ್ನುಬೇತಾಳ ಹುಣ್ಣನ್ನು ಕರುಣೆಯ ಕಣ್ಣುಗಳಿಂದ ನೋಡುತ್ತ ಕರುಣೆಯಿಂದ ಹುಣ್ಣಿನ ಮೇಲೆ ಕೈಯಾಡಿಸಿ ಅಯ್ಯೋ ಪಾಪ ಬಹಳ ನೋಯುತ್ತಿರಬೇಕಲ್ಲವೇ ಗೌಡರೇ ಯಾಕರೆಪ್ಪಾ ಎಂದು ಮಮತೆಯಿಂದ ತಾಯಿ ಮಗುವನ್ನು ಮಾತನಾಡಿಸುವ ತೆರದಿ ಕೇಳಿದರಲ್ಲದೇ ಯಾರಿಗಾದರೂ ಬಿಡದ ಕರ್ಮದಿಂದ ಕಡೆಗಾಗಬೇಕಾದರೆ ಶಿವನ ಆಜ್ಞೆಯಾಗಬೇಕರೆಪ್ಪಾ. ಬಾರದು ಬಪ್ಪದು, ಬಪ್ಪದು ತಪ್ಪದು ಎಲ್ಲವು ದುರುದುಂಡೀಶನ ಕೃಪೆ. ಆಯಿತು ಶಿವ ಒಳ್ಳೇದು ಮಾಡ್ತಾನೆ ಯಾಕೆ ಚಿಂತಿ ಮಾಡ್ತೀರಿ ಎಂದು ಸಹಜವಾಣಿಯಿಂದ ನುಡಿದು ಸಮಾಧಾನ ಪಡಿಸಿದರು.

ಬಳಿಕ ಗೌಡರ ಆಸೆಯಂತೆ ತಮ್ಮ ನಿತ್ಯ ಕರ್ತವ್ಯಗಳಾದ ಪೂಜಾ ಪಾರಾಯಣಗಳನ್ನು ತೀರಿಸಿಕೊಂಡು ಮುರುಗೋಡಕ್ಕೆ ದಯಮಾಡಿಸಿದರು. ಮುಂದೆ ಕೆಲವು ದಿನ ಕಳೆಯುತ್ತಿರಲು ಮಲ್ಲನಗೌಡರ ಬೆನ್ನುಬೇತಾಳ ಹುಣ್ಣು ಕ್ರಮೇಣ ಕಡಿಮೆಯಾಯಿತಲ್ಲದೇ ತನ್ನ ಎಟ್ಟ ಗುಣವೆನಿಸಿದ ಉರುಪು ಕೊಡುವದು ನಿಂತು, ಶಾಂತವಾಗುತ್ತಾ ತಿಂಗಳು ಮುಗಿಯುವಷ್ಟರಲ್ಲಿ

ಶ್ರೀ ದುರುದುಂಡಿ ಮಹಾಂತಶಿವಯೋಗಿಗಳ ಹಸ್ತಸ್ಪರ್ಶದಿಂದ ಸಂಪೂರ್ಣ ಮಾಯವಾಯಿತು. ಮಲ್ಲನಗೌಡರು ಬೆನ್ನುಬೇತಾಳ ಹುಣ್ಣಿನ ಬಾಧೆಯಿಂದ ಮುಕ್ತರಾಗಿ ಸುಖ-ಸಂತೋಷಗಳಿಂದ ಬಾಳಿಕೊಂಡು ಎಲ್ಲವೂ ಮುರುಗೋಡ ಮಹಾಂತ ಶಿವಯೋಗಿಗಳ ಕೃಪಾಶೀರ್ವಾದವೆಂದು ಅರಿತುಕೊಂಡು ಮಹಿಮಾನಿಧಿ ದುರುದುಂಡಿ ಮಹಾಂತೇಶಾ ಎಲ್ಲವೂ ನಿನ್ನ ಕರುಣೆ ನಿನ್ನ ವರ ಎಂದು ಸಂತಸದ ಉದ್ಗಾರ ತೆಗೆದು ಪತ್ನಿ ಪುತ್ರ ಬಳಗದೊಡನೆ ಮುರುಗೋಡ ಅಜ್ಜನವರ ದರ್ಶನಕ್ಕೆ ಬಂದು ತನ್ನ ಹುಣ್ಣು ನಾಶವಾದ ಸ್ಥಿತಿಯನ್ನು ಅರುಹಲು ಕೂಡಿದ ಭಕ್ತ ಬಳಗವೆಲ್ಲ ಅಚ್ಚರಿಗೊಂಡು ಮಹಿಮಾಶಾಲಿ ಮಹಾಂತಜ್ಜನೆಂದು ಹಾಡಿ ಕುಣಿದು ಆನಂದಿಸಿದರು.



## ೪೧ ನೇ ಅಧ್ಯಾಯ

### ಅಪ್ಪನವರ ಪಾದೋದಕದಿಂದ
### ಬಿಳುಪುರೋಗ, ಕಣ್ಣುಬೇನೆ ಮಾಯವಾದದ್ದು

ಮುರುಗೋಡದವರಾದ ಚನ್ನಪ್ಪಾ ಪಟ್ಟೇದ ಈತನು ಅಪ್ಪನವರಲ್ಲಿ ಅತ್ಯಂತ ಭಕ್ತಿಯಿಂದ ನಡೆದುಕೊಳ್ಳುತ್ತಿದ್ದನು. ಬರುಬರುತ್ತ ಆತನ ಕಣ್ಣುಗಳು ವಯಸ್ಸಿನ ಒತ್ತಡ ಏರಿದ ಕಾರಣದಿಂದಲೋ ಅಥವಾ ರೋಗ ಪೀಡೆಯ ಕಾರಣದಿಂದಲೋ ಸ್ವಲ್ಪ ಸ್ವಲ್ಪ ಮಸಕಾಗುತ್ತಿದ್ದ ಕಣ್ಣುಗಳು ಸಂಪೂರ್ಣ ಕಾಣದಾದವು.

ಆಗ ಚನ್ನಪ್ಪನು ರೀತಿ ಪ್ರಕಾರ ಮೊದಲು ವೈದ್ಯರಿಗೆ ತೋರಿಸಿದನು. ಸಾಕಷ್ಟು ಹಣ ಕಳೆದು ಕೊನೆಗೊಮ್ಮೆ ಸಾಕಾಗಿ ಶ್ರೀ ಮಹಾಂತೇಶಾ ದುರುದುಂಡೀಶಾ ಎಲ್ಲವೂ ನಿನ್ನ ಕೃಪೆ ಎಂದು ಸ್ವಾಮಿಗಳ ಮೇಲೆ ಭಾರ ಹಾಕಿ ನಿತ್ಯವು ಪಾದೋದಕವನ್ನು ಸೇವಿಸುತ್ತ ನನ್ನ ಕಣ್ಣಿನ ಬಾಧೆಯನ್ನು ನಿವಾರಿಸು ತಂದೆ ಎಂದು ಬೇಡಿಕೊಳ್ಳುತ್ತ ಕಣ್ಣಿಗೆ ಧೂಳ ಪಾದೋದಕವನ್ನು

ಲೇಪಿಸಿ ಗದ್ದುಗೆಯ ಬಳಿಯಲ್ಲಿದ್ದ ಪ್ರಸಾದ, ಭಸ್ಮವನ್ನು ಕಣ್ಣಿನ ಮೇಲೆ ಸಿಂಪಡಿಸಿಕೊಳ್ಳುತ್ತ ಬರಲು ಇಂಗಿ ಹೋದ ಕಣ್ಣಿನ ಬಾಧೆಯು ಕಡಿಮೆ ಯಾದದ್ದಲ್ಲದೇ ತೊಂದರೆ ತಾಪಗಳ ಪರಿಹಾರವಾಗಿ ಮೊದಲಿನಂತೆ ನಿಚ್ಚಳ ಸ್ವಚ್ಛವಾಗಿ ಕಾಣುವಂತಾದವು ಅಂದಿನಿಂದ ಚನ್ನಪ್ಪನವರು ತಮ್ಮ ಮನೆ ತನದಲ್ಲಿ ಯಾರಿಗೆ ಏನೇ ತೊಂದರೆ ಬಂದರೂ ಶ್ರೀ ದುರುದುಂಡಿ ಮಹಾಂತೇಶಾ ನೀನೇ ನಿವಾರಿಸಬೇಕೆಂದು ಎಲ್ಲವನ್ನು ಶ್ರೀಗಳ ಮೇಲೆ ಭಾರ ಹಾಕಿ ಭಯ ಭಕ್ತಿಗಳಿಂದಲೂ ಬಲು ವಿಶ್ವಾಸದಿಂದಲೂ ನಡೆದುಕೊಳ್ಳಹತ್ತಿದನು. ಅಲ್ಲದೇ ಯಾವ ಕಾರ್ಯವನ್ನು ಮಾಡುವದಿದ್ದರೂ ಸ್ವಾಮಿಗಳನ್ನು ಕಂಡು ಅವರ ಅಪ್ಪಣೆಯ ಪ್ರಕಾರ ತನ್ನ ಪ್ರಪಂಚದ ಆಗು ಹೋಗುಗಳನ್ನು ಪೂರೈಸಿ ಕೊಳ್ಳುತ್ತ ಜೀವನ ಸಾಗಿಸಿದ್ದನು.

ಆದರೆ ಈಗ ಚನ್ನಪ್ಪನವರ ಮಗ ಮಲ್ಲಪ್ಪನು ಮತ್ತೊಂದು ಮನ ಮಿಡುಕುವಂತಹ ಪ್ರಸಂಗದಲ್ಲಿ ಸಿಲುಕಿದನು. ಇನ್ನೂ ಸಣ್ಣ ವಯಸ್ಸು, ಮದುವೆ ಮುಹೂರ್ತ ಕಾಣಬೇಕಾದ ತಾರುಣ್ಯದ ಹೊಸ್ತಿಲದಲ್ಲಿ ಕಾಲಿಟ್ಟ ತರುಣ ವಯಸ್ಸು. ಪಾಪ ಇಂತಹ ಸುಂದರ ಸ್ವುರದ್ರೂಪಿಯಾದ ಹುಡುಗನಿಗೆ ಬೆನ್ನಿನ ಮೇಲೆ ಬಿಳುಪು ರೋಗ ಹುಟ್ಟಿಕೊಂಡು ಮನೆಯುವರೆಲ್ಲರು ಗಾಭರಿ ಯಾದವರಲ್ಲದೇ ಈತನು ಬಿಳುಪು ರೋಗದವನೆಂದು ಆಗಲೇ ಊರಲ್ಲಿ ಪ್ರತೀತಿ ಉಂಟಾಗಿ ಜೀವನದಲ್ಲಿ ಜಿಗುಪ್ಸೆ ತಾಳುವಂತಹ ಪ್ರಸಂಗ ಬಂದು ಎರಡು ಮೂರು ಸಾರೆ ಆತ್ಮಹತ್ಯೆಗೂ ಪ್ರಯತ್ನಿಸಿದನು. ಕಾರಣವೇನಂದರೆ, ಕನ್ಯಾ ಕೊಡಲು ಬಂದ ಹಲವಾರು ಕನ್ಯಾ ಪಿತೃಗಳು ಮಲ್ಲಪ್ಪನ ಬಿಳುಪು ರೋಗದ ಸುದ್ದಿಯನ್ನು ತಿಳಿದು ನಿರಾಕರಿಸಿ, ಹೀಯಾಳಿಸಿ ಹೋಗುತ್ತಿದ್ದರು. ಬಳಿಕ ಚನ್ನಪ್ಪನು ತನ್ನ ಇಷ್ಟದೈವ ಎನಿಸಿದ ಶ್ರೀ ಮಹಾಂತಸ್ವಾಮಿಗಳ ಸನ್ನಿಧಾನಕ್ಕೆ ಬಂದು ಸಕಲ ವೃತ್ತಾಂತವನ್ನು ನಿವೇದಿಸಿಕೊಂಡು ಅವರ ಪಾದ ಪದ್ಮಗಳನ್ನು ಹಿಡಿದು ಮಗನನ್ನು ಈ ಅಪಮಾನದಾಯಕ ಪ್ರಸಂಗದಿಂದ ಪಾರಾಂತಗಾಣಿಸ ಬೇಕೆಂದು ಬೇಡಿಕೊಳ್ಳಹತ್ತಿದನು. ಆಗ ಅಪ್ಪನವರು ಏನಾದರೂ ಶಿವಾ ಕಲ್ಯಾಣ ಮಾಡುತ್ತಾನೆ, ಚಿಂತಿಸಬಾರದಪ್ಪಾ ಎಂದು ನುಡಿದರು

ಆಗ ಚನ್ನಪ್ಪನು ಅಪ್ಪನವರ ಸಹಜ ವಾಣಿಯನ್ನು ಅರ್ಥ ಮಾಡಿ ಕೊಂಡಿದ್ದವನಾದಕಾರಣದಿಂದ ಮಗನ ರೋಗ ಪರಿಹಾರವಾಯಿತೆಂದು

ತಿಳಿದುಕೊಂಡು ಮಾಗನಾದ ಮಲ್ಲಪ್ಪನಿಗೆ ಅಪ್ಪನವರ ಧೂಳ ಪಾದೋದಕದ ಮಹಿಮೆಯನ್ನು ತಿಳಿಸಿ, ಭಕ್ತಿಯಿಂದ ತೆಗೆದುಕೊಂಡು ಹೋಗಿ ಸ್ನಾನ ಮಾಡಿ ಬಿಳುಪು ಹುಟ್ಟಿಕೊಂಡ ಭಾಗದಲ್ಲಿ ಲೇಪಿಸುತ್ತ ಕೆಲವು ದಿವಸಗಳು ಗತಿಸಲು ಕ್ರಮೇಣ ಬಿಳುಪಿನ ಕಲೆಗಳು ತವಿನ್ನಿಂದ ತಾವೇ ಕಡಿಮೆಯಾಗುತ್ತ ಕೊನೆ ಗೊಮ್ಮೆ ಸಂಪೂರ್ಣ ಮಾಯವಾಗಿ ತರುಣ ಮಲ್ಲಪ್ಪನು ಸುಖ.ಸಂತೋಷ ಗಳನ್ನು ಅನುಭವಿಸಿ ಬಾಳುವಂತಾಯಿತು.

ಮುಂದೆ ಬಿಳುಪು ರೋಗ ಮಾಯವಾಗಿದೆ ಎಂದು ಖಚಿತವಾದ ಬಳಿಕ ಊರವರು ತಮ್ಮ ಚಾಡಿಯ ಮಾತುಗಾರಿಕೆಯನ್ನು ಮರೆತು ತಮ್ಮ ಮೂರ್ಖತನಕ್ಕೆ ಹಳಿದುಕೊಂಡು ಸಹಕಾರದಿಂದ ವರ್ತಿಸುವವರಾದರು. ಅಲ್ಲದೇ ಅಪ್ಪನವರ ಅಮರವಾಣಿಯಂತೆ ಮಲ್ಲಪ್ಪನಿಗೆ ಕನ್ಯಾ ಕೊಡಲು ನಾಲ್ಕಾರು ಕಡೆಗಳಿಂದ ನಾ ಮುಂದೆ, ನೀ ಮುಂದೆ ಎಂದು ಎಡತಾಕಿ ಕನ್ಯಾ ಕೊಟ್ಟು ಅಪ್ಪನವರ ಅಪ್ಪಣೆಯಂತೆ ಮದುವೆಯು ಆಯಿತು. ಮಲ್ಲಪ್ಪನು ಪತ್ನಿಯೊಡಗೂಡಿ ಪುತ್ರಭಾಗ್ಯವನ್ನು ಪಡೆದು ಸುಖಶಾಂತಿ ಸೌಖ್ಯಾನಂದಗಳಿಂದ ಮಹಾಂತಸ್ವಾಮಿಗಳ ಸೇವೆಯಲ್ಲಿ ನಿರೋಗಿಯಾಗಿ ಚಂದದ ಬದುಕು ಕಂಡನು. ಇಂತಹ ಬಿಳುಪಿನ ರೋಗ ಕಳೆದುಕೊಂಡು ಭವ್ಯ ಬಾಳಿನ ಅನುಭವ ಪಡೆದವರು ಹಲವಾರು ಭಕ್ತರು, ತಮ್ಮ ರೋಗ ನಿವಾರಣೆಗೆ ಅಪ್ಪ ಮಹಾಂತ ಸ್ವಾಮಿಗಳ ಮಹಿಮೆಯೇ ಕಾರಣವೆಂದು ಹೇಳುವರು.



## ೪೨ ನೇ ಅಧ್ಯಾಯ

### ಅಪ್ಪನವರು ಬೆತ್ತದಿಂದ ಬಂಡೆಕಲ್ಲು ಸೀಳಿದ್ದು

ಅಪ್ಪನವರು ಭಕ್ತರ ಇಚ್ಛೆಯಂತೆ ಕರೆದಲ್ಲಿ ಲಿಂಗಪೂಜಾ ಅನುಷ್ಠಾನ ಗಳನ್ನು ಜರುಗಿಸಲು ನಿರಾಕರಿಸುತ್ತಿದ್ದಿಲ್ಲ. ತಮಗೆಷ್ಟೇ ತೊಂದರೆ ಇದ್ದರೂ ಭಕ್ತರ ಇಚ್ಛೆಯನ್ನು ಶ್ಲಾಘ್ಯ ಮಾಡುವದೆಂದರೆ ಅಪ್ಪನವರಿಗೆ

ಅಪ್ಪನವರಿಗೆ ಆಗುತ್ತಿದ್ದಿಲ್ಲ. ಒಮ್ಮೆ ನಾಯ್ಕನಕೊಪ್ಪದ ಭಕ್ತರು ಶಿವಯೋಗಿಗಳನ್ನು ಆಹ್ವಾನಿಸಿ ಕರೆದುಕೊಂಡು ಹೋಗಲು ಬಂದರು. ಅಪ್ಪನವರು ಪ್ರತಿ ನುಡಿಯದೇ ಒಪ್ಪಿ ನಾಯ್ಕನಕೊಪ್ಪಕ್ಕೆ ದಯಮಾಡಿಸಿದರು.

ಅದೇ ಊರಿನಲ್ಲಿಯ ಭಕ್ತ ಮಹಾಶಯ ಮಹಾದೇವಪ್ಪನವರೆಂಬುವವರಿಗೆ ಊರ ಮುಂದಿನ ಹೊಲದಲ್ಲಿ ತೋಟ ಮಾಡುವ ಇಚ್ಛೆ. ಆದರೆ ಹೊಲ ಇರುವದು ಸ್ವಲ್ಪ, ಹೀಗಾಗಿ ಮನೆತನದ ತಾಪತ್ರಯಗಳನ್ನು ಈ ಸ್ವಲ್ಪ ಜಮೀನು ತೀರಿಸಲಾರದೆಂಬ ಘನ ಉದ್ದೇಶದಿಂದ ಭಾವಿಯನ್ನು ತೆಗೆಸಲು ಸಾಲ ಮಾಡಿ ಸಾಕಷ್ಟು ತೊಂದರೆಯಲ್ಲಿ ಕಾರ್ಯ ಕೈಕೊಂಡಿದ್ದನು. ಆದರೆ ಅವನ ದುರ್ದೈವಕ್ಕೆ ಎಷ್ಟು ಹಣ ಸೂರೆ ಮಾಡಿದರೂ ಉಪಯೋಗವಾಗಲಿಲ್ಲ. ಹತ್ತು ಹದಿನೈದು ಪೂಟು ಭೂಮಿಯನ್ನು ಅಗೆಸಲು ಭಾವಿಯಲ್ಲಿ ದೊಡ್ಡದೊಂದು ಬಂಡೆಗಲ್ಲು ಹತ್ತಿ ಯಾವ ರೀತಿ ಪ್ರಯತ್ನ ಮಾಡಿದರು ಕಲ್ಲು ಒಡೆಯುದಾಗಿತ್ತು. ವಾರೆರಡು ಸರಿಯುವವರೆಗೆ ಬಂಡೆ ಒಡೆಯುವ ವಡ್ಡರು ಬೇಕಾದಷ್ಟು ಪ್ರಯತ್ನಿಸಿದರು, ಸುರಂಗದ ಮದ್ದಿಟ್ಟು ಹಾರಿಸಿ ನೋಡಿದರು. ಪಂಪರಿಯಾಗಿ ಪರೀಕ್ಷಿಸಿದರು, ಉಳಿ ಛಾಣಗಳು ಹೊಡೆ ಹೊಡೆದು ಮೊಂಡಾದವೇ ವಿನಃ ಕಲ್ಲುಬಂಡೆ ಒಡೆಯಲಿಲ್ಲ, ಭಾವಿಯನ್ನು ತೋಡುವ ಕಾರ್ಯವಾಗಲಿಲ್ಲ.

ಇಂತಿರ್ಪ ಸಮಯದಲ್ಲಿ ತನ್ನ ಊರಲ್ಲಿ ಶ್ರೀ ಮಹಾಂತಜ್ಜನವರು ಪೂಜಾದಿ ಕಾರ್ಯಗಳಿಗೆ ಗೌಡರ ಮನೆಯಲ್ಲಿ ದಯಮಾಡಿಸಿದ್ದಾರೆಂದು ತಿಳಿದ. ಮಹಾದೇವಪ್ಪನಾದರೂ ಅಪ್ಪನವರಲ್ಲಿ ಸಂಬಿಕೆ ವಿಶ್ವಾಸವಿಟ್ಟು ನಡೆದುಕೊಳ್ಳುವ ಭಕ್ತನಾಗಿದ್ದನು.

ಅಂತೇ ಅಪ್ಪನವರು ದಯಮಾಡಿಸಿರುವ ವಿಷಯ ತಿಳಿದೊಡನೆ ಗೌಡರ ಮನೆಗೆ ಹೋಗಿ ಶಿವಯೋಗಿಗಳನ್ನು ಕಂಡು ನಯ ವಿನಯ ವಿನೂತ ಭಾವನೆಗಳಿಂದ ಮಹಾಂತಸ್ವಾಮಿಗಳ ಪಾದಗಳನ್ನು ಪಿಡಿದು, ಬುದ್ಧಿ ಬಡವನನ್ನು ಉದ್ಧಾರ ಮಾಡುವ ಕೃಪೆಯಾಗಬೇಕೆಂದು ಬೇಡಿಕೊಳ್ಳಹತ್ತಿದನು.

ಆಗ ಮಹಾಂತಸ್ವಾಮಿಗಳು ಮಹಾದೇವಪ್ಪನ ದೀನ ಸ್ಥಿತಿ ಕಂಡು ಕನಿಕರದಿಂದ ಸಮಾಧಾನ ಪಡಿಸುತ್ತ ಯಾಕರೆಪ್ಪಾ ಏನಾಗುವದಾಗಬೇಕು ಎಂದು ಮಮತೆ ತುಂಬಿದ ಧ್ವನಿಯಲ್ಲಿ ಕೇಳಿದರು.

ಆಗ ಮಹಾದೇವಪ್ಪನು ಬುದ್ಧಿ ನಮ್ಮ ಹೊಲದಲ್ಲಿ ಭಾವಿ ತೋಡಿಸಿ, ತೋಟ ಮಾಡುವ ಆಶೆಯಿಂದ ಸಾಕಷ್ಟು ಹಣ ಸುರಿದು ಭಾವಿ ಕಡಿಸುತ್ತಿರುವೆನು. ಆದರೆ ಭಾವಿಯು ಅರ್ಧದಲ್ಲಿ ಕಲ್ಲು ಬಂಡೆಯೊಂದು ಬಂದು ಭಾವಿಯನ್ನು ಮುಂದೆ ಅಗೆಸುವ ಕಾರ್ಯ ಸ್ಥಗಿತವಾಗಿದೆ. ಆದಕ್ಕಾಗಿ ತಾವು ನನ್ನ ಹೊಲದವರೆಗೆ ದಯಮಾಡಿಸಿ ತಮ್ಮ ಪಾವನ ಪಾದ ಸ್ಪರ್ಶದಿಂದ ನನ್ನ ಭೂಮಿ ಪಾವನ ಭೂಮಿ ಎನಿಸುವದರಲ್ಲಿ ಸಂದೇಹವಿಲ್ಲವೆಂದು ಪದೇ ಪದೇ ಅಪ್ಪನವರ ಶ್ರೀ ಚರಣಗಳನ್ನು ಪಿಡಿದು ಬೇಡಿಕೊಳ್ಳಹತ್ತಿದನು.

ಆಗ ಸ್ವಾಮಿಗಳು ಮಹಾದೇವಪ್ಪನ ಭಕ್ತಿಯ ಪಾಶದಲ್ಲಿ ಬಂಧಿತರಾಗಿ ತಮ್ಮ ಗುಣಧರ್ಮದಂತೆ ಮುಂದಾಗಿ ಅವನ ಹೊಲದತ್ತ ದಯಮಾಡಿಸಿ ಭಾವಿಯ ಗರ್ಭದಲ್ಲಿ ಹುಗಿದುಕೊಂಡಿರುವ ಕಲ್ಲುಬಂಡೆಯನ್ನು ಕಂಡು ಸಹಜ ಸ್ವಭಾವದಂತೆ ಕೈಯಲ್ಲಿ ಪಿಡಿದ ಬೆತ್ತದಿಂದ ಆ ಕಲ್ಲುಬಂಡೆಯ ಒಂದು ಭಾಗದ ಮೇಲೆ ಗೆರೆ ಎಳೆಯುತ್ತ ಅಂತೂ ಬಲು ದೊಡ್ಡ ಬಂಡೆ ಹತ್ತಿದೆಯಪ್ಪಾ ಎಂದು ಸಹಜ ಉದ್ಗಾರ ತೆಗೆದರು. ಬಳಿಕ ವಾಸ್ತವ್ಯಮಾಡಿದ ಗೌಡರ ಮನೆಗೆ ದಯಮಾಡಿಸಿದರು.

ಆಗ ಮಹಾದೇವಪ್ಪನಿಗೆ ಅಪ್ಪನವರು ಬೆತ್ತ ತಾಕಿಸಿ ಗೆರೆ ಎಳೆದ ಮಹಿಮೆಯು ಅರ್ಥವಾಗಿ ವಡ್ಡರನ್ನು ಕರೆದು ಆ ಗೆರೆಯಂತೆ ಕಲ್ಲು ಸೀಳಲು ತಿಳಿಸಿದನು. ಆಗ ಕ್ಷಣ ಮಾತ್ರದಲ್ಲಿ ಸೀಳಿ ಒಡೆದು ಚೂರು ಚೂರಾಯಿತು. ವಡ್ಡರಂತೂ ಬೆರಗಾಗಿ ಮೂಕರಾಗಿ ನಿಂತರು. ಒಡೆದ ಕಲ್ಲಿನ ತಳದಿಂದ ನೀರಿನ ಸೆಲೆಯು ಪುಟಿ ಪುಟಿದು ಬರುವದಾಯಿತು. ಇನ್ನೂ ಇಪ್ಪತ್ತು ಪೂಟು ತೆಗೆದರೂ ನೀರು ಬರಲಿಕ್ಕಿಲ್ಲವೆಂಬ ಮಹಾದೇವಪ್ಪ ಹಾಗು ವಡ್ಡರ ತರ್ಕ ಗಾಳಿಗೂಡಿತು. ಸ್ವಾಮಿಗಳು ಬೆತ್ತ ತಾಕಿಸಿ ಬಂಡೆಯನ್ನು ಸೀಳಿ ಭಾವಿ ರೂಪಗೊಂಡು ಮಹಾದೇವಪ್ಪನ ಕಷ್ಟಮಯ ಜೀವನ ಸುಖಮಯವಾಯಿತು. ಇದನ್ನರಿತ ನಾಯ್ಕನ ಕೊಪ್ಪದ ಜನತೆ ಹರುಷಗೊಂಡು ಮಹಿಮಾನಿಧಿ ಮಹಾಂತ ಶಿವಯೋಗಿಗಳ ಮಹಿಮೆ ಎಂದು ತಿಳಿದು ಆನಂದಗೊಂಡರು.



# ೪೩ ನೇ ಅಧ್ಯಾಯ

## ಅಪ್ಪನವರ ನಾಮಸ್ಮರಣೆಯಿಂದ ಕಳೆದುಹೋದ ಕುದುರೆ ಸಿಕ್ಕದ್ದು

ಬಾಗೇವಾಡಿ ಎಂಬ ಗ್ರಾಮದಲ್ಲಿ ಶಿವಭಕ್ತ ಸಂಪನ್ನರಾದ ಬಸವಪ್ಪಶೆಟ್ಟಿ ಪಂಚಣ್ಣವರ ಎಂಬ ಭಕ್ತರ ಮನೆ ಉಂಟು. ಈ ಮನೆತನದ ಮಹನೀಯರೆಲ್ಲರು ಮೊದಲಿನಿಂದಲೂ ದುರುದುಂಡೀಶ್ವರನಲ್ಲಿ ಅತೀ ಭಕ್ತಿಯುಳ್ಳವರು. ಜಂಗಮ ಪ್ರೇಮಿಗಳು, ಪರರನ್ನು ಹಿತಾದೃಷ್ಟಿಯಿಂದ ಕಾಣುವವರು, ಧರ್ಮಿಷ್ಟರು ಎಂದು ಹೆಸರು ಗಳಿಸಿದವರು. ಪೂರ್ವಜರ ಪರಂಪರೆಯ ಪ್ರಕಾರ ಬಸವಪ್ಪಶೆಟ್ಟಿಯಾದರೂ ತಮ್ಮ ಧರ್ಮ, ತಮ್ಮ ಮತದ ನೀತಿ ನೇಮಗಳನ್ನು ಕಾಯ್ದುಕೊಂಡಿದ್ದ. ಗುರುಪರಂಪರೆಯ ಅರಭಾವಿ ಮಠಕ್ಕೆ ನಿತ್ಯ ನೇಮ ಉಳ್ಳವನಾಗಿ ಶ್ರದ್ಧಾಭಕ್ತಿಗಳಿಂದ ಸೇವಿಸುತ್ತ ಸಕಲ ಸಂಪತ್ತಿನಿಂದ ಪತ್ನಿ ಪುತ್ರ ಇನ್ನಿತರ ಬಳಗದೊಡನೆ ಆನಂದದಿಂದ ಕಾಲಕಳೆಯುತ್ತಿದ್ದನು.

ಇಂತಿರುವ ಸಮಯದಲ್ಲಿ ಮಾವನ ಊರಿಗೆ ಹೋಗಿ ಬರುವ ಪ್ರಸಂಗವು ಬಸವಪ್ಪಶೆಟ್ಟರ ಪಾಲಿಗೆ ಬಂತು. ಆಗಿನ ಕಾಲದಲ್ಲಿ ಈಗಿನಂತೆ ವಾಹನ ಸೌಕರ್ಯ ಇದ್ದಿಲ್ಲವಾದ ಕಾರಣದಿಂದ ಶೀಘ್ರ ಮರಳಿ ಬರುವ ಉದ್ದೇಶದಿಂದ ಏನು ಮಾಡಲಿ, ಊರಿಗೆ ಹೋಗಿ ಮಾವನವರನ್ನು ಕಂಡು ಬರುವದು ಹೇಗೆ ಎಂದು ಆಲೋಚಿಸಹತ್ತಿದನು. ಬಳಿಕ ಬಾಗೇವಾಡಿ ಗೌಡರು ತಮ್ಮ ಸಂಚಾರಕ್ಕೆಂದು ಕುದುರೆಯನ್ನು ಸಾಕಿರುವದು ಬಸವಶೆಟ್ಟಿಯ ಸ್ಮೃತಿ ಪಟಲದ ಮೇಲೆ ಹೊಳೆದು ಅವನ ಆಲೋಚನೆಗೆ ಒಂದು ಮಾರ್ಗ ಸಿಕ್ಕಂತಾಯಿತು. ಆದರೆ ಕುದುರೆಯನ್ನು ಕೇಳಿದರೆ ಗೌಡರು ಕೊಡುವರೋ ಇಲ್ಲವೋ ಎಂಬ ಸಂಶಯ ಒಂದು ಮನದಲ್ಲಿ ಮೂಡಿ ಬಂದು ಗೌಡರನ್ನು ಕೇಳಲು ಸ್ವಲ್ಪ ಯೋಚಿಸಹತ್ತಿದನು. ಬಳಿಕ ಏನಾದರಾಗಲಿ ಶಿವನೇ ದುರುದುಂಡೀಶ ಮಹಾಂತೇಶಾ ಎಲ್ಲವೂ ನಿನ್ನ ಕರುಣೆಯೆಂದು ಪಾಟೀಲರ ಹತ್ತಿರ ಬಂದನು.

ಪಾಟೀಲರು ಬಸವಪ್ಪಶೆಟ್ಟಿ ಬರಲು ಏನು ಶೆಟ್ಟರು ಯಾಕೋ ಅಪರೂಪಕ್ಕೆ ನಮ್ಮ ಕಡೆಗೆ ಬಂದಿರುವಿರಲ್ಲಾ ಏನು ಕೆಲಸ, ಎಂದು ಆತ್ಮೀಯತೆ

ಯಿಂದ ಮಾತನಾಡಿಸುತ್ತ ಬನ್ನಿ ಮೇಲೆ ಕುಳಿತುಕೊಳ್ಳಿ ಎಂದು ಎದ್ದು ಹೋಗಿ ಸಂಪ್ರದಾಯ ಪ್ರಕಾರ ಪಡಶಾಲೆಯ ಕಟ್ಟೆಯ ತುದಿಗೆ ಕಂಬಳಿ ಹಾಕಿ ಕರೆದು ಕೂಡ್ರಿಸಿದರಲ್ಲದೇ ಮಾತಿಗೆ ಆರಂಭಿಸಿ ಯಾಕೆ ಶೆಟ್ಟರೇ ವಿಶೇಷ ವೇನಾದರೂ ಉಂಟೇ ಎಂದರು.

ಆಗ ಶೆಟ್ಟರು ಕೇಳಲೋ ಬೇಡವೋ ಎಂದು ಮನದಲ್ಲಿ ಶಿವಯೋಗಿಗಳನ್ನು ಧ್ಯಾನಿಸುತ್ತ ಪಾಟೀಲರೆ ನಮ್ಮ ಮಾವನವರು ಶೀಘ್ರ ಬಂದು ಹೋಗುವಂತೆ ಹೇಳಿಕಳಿಸಿದ್ದಾರೆ. ಆದರೆ ದೂರಿನ ದಾರಿ ಮಾವನ ಆಶೆಯಂತೆ ಅಷ್ಟೊಂದು ಶೀಘ್ರ ಊರಿಗೆ ಹೋಗಲು ಹೇಗೆ ಸಾಧ್ಯವೆಂದು.... ಎಂದು ಮಾತನ್ನು ಅರ್ಧಕ್ಕೆ ನಿಲ್ಲಿಸಿ ತಡವರಿಸಹತ್ತಿದನು. ಆಗ ಪಾಟೀಲರು ಆತ್ಮೀಯತೆಯಿಂದ ಶೆಟ್ಟಿಯನ್ನು ಸಮಾಧಾನ ಪಡಿಸುತ್ತ ಅದಕ್ಕೆ ಅಷ್ಟೊಂದು ಚಿಂತೆ ಮಾಡಬೇಕೆ ಶೆಟ್ಟರೇ ಹೇಗೂ ನಮ್ಮ ಕುದುರೆ ಇದೆಯಲ್ಲ ತೆಗೆದುಕೊಂಡು ಹೋಗಿ ನಿಮ್ಮ ಮಾವನ ಊರಲ್ಲಿ ಏನು ಕೆಲಸವೋ ತೀರಿಸಿಕೊಂಡು ಬನ್ನಿ ಯಾರು ಬೇಡ ಅನ್ನುತ್ತಾರೆ ಎಂದು ಸರಳ ಮನಸ್ಸಿನಿಂದ ನುಡಿದರಲ್ಲದೇ ಶೆಟ್ಟರೆ ಕುದುರೆ ಮಾತ್ರ ಹಟಮಾರಿ ನಿಂತಲ್ಲೇ ನಿಲ್ಲುವದಿಲ್ಲ ಪದೇ ಪದೇ ತಪ್ಪಿಸಿಕೊಂಡು ಹೋಗುವ ಬುದ್ಧಿಯುಳ್ಳದ್ದು ಸ್ವಲ್ಪ ಎಚ್ಚರಿಕೆಯಿಂದ ಜೋಪಾನವಾಗಿ ನೋಡಿಕೊಂಡಿರಬೇಕು. ದಾರಿಯಲ್ಲಿ ಎಲ್ಲಿಯಾದರೂ ತಪ್ಪಿಸಿಕೊಂಡೀತು ಎಂದು ಹೇಳಿ ಆಳು ಹನುಮಂತಪ್ಪನನ್ನು ಕರೆದು ಕುದುರೆಗೆ ಜೀನು ಹಾಕಿ ಶೆಟ್ಟರಿಗೆ ಒಪ್ಪಿಸುವಂತೆ ಹೇಳಿದರು. ಅದರಂತೆ ಆಳು ಹನುಮಂತಪ್ಪನು ಕುದುರೆಗೆ ಜೀನು ಬಿಗಿದು ಕುದುರೆಯ ಲಗಾಮು ಬಸವಪ್ಪಶೆಟ್ಟರ ಕೈಗೆ ಕೊಟ್ಟು ಮಾವನ ಊರಿಗೆ ಕಳಿಸಿದನು.

ಬಸವಪ್ಪಶೆಟ್ಟರು ಕುದುರೆಯನ್ನು ತಕ್ಕೊಂಡು ತರಾತುರಿ ಎಂದು ಅಂದೇ ಹೊರಟುಬಿಟ್ಟರು. ಆದರೆ ಮಧ್ಯದಾರಿಗೆ ಬರಲು ಹೊತ್ತು ಮುಳುಗಿ ಕತ್ತಲಾಗಿ ಮುಂದೆ ಹೋಗುವದಕ್ಕೆ ಸಾಧ್ಯವಿಲ್ಲದಾಯಿತು. ಬಳಿಕ ಬಸವಪ್ಪಶೆಟ್ಟಿ ಮುಂದೆ ಹೋಗುವದನ್ನು ಸ್ಥಗಿತಗೊಳಿಸಿ ದಾರಿಯ ಮಗ್ಗಲಲ್ಲಿದ್ದ ಹಳೆಯ ಕಾಲದ ಒಂದು ಹಾಳು ದೇವಾಲಯವನ್ನು ಕಂಡು ಇಳಿದವನಾಗಿ ದೇವಾಲಯದ ತುದಿ ಕಂಬಕ್ಕೆ ಕುದುರೆಯನ್ನು ಕಟ್ಟಿ ತನ್ನ ನಿತ್ಯ ಕರ್ಮ

ಗಳನ್ನು ತೀರಿಸಿಕೊಂಡು ಮಲಗಿ ಬೆಳಗು ಹರಿದ ಮೇಲೆ ಹೋದರಾಯಿತೆಂದು ಉಳಿದುಕೊಂಡನು.

ಆದರೆ ಹಾಳು ದೇವಾಲಯದ ಸುತ್ತಲೂ ಹಸಿರು ಪೈರು ಎದ್ದು ಕಾಣುತ್ತಿತ್ತು. ಅಲ್ಲದೇ ಅಲ್ಲಲ್ಲಿ ಹಳ್ಳಕೊಳ್ಳಗಳ ಬದಿಯಲ್ಲಿ ಹುಲುಸಾದ ಹುಲ್ಲು ಬೆಳೆದು ಕುದುರೆಯ ಕಣ್ಣು ಮನಗಳಿಗೆ ಮತ್ತಷ್ಟು ಆನಂದವಾಯಿತು. ಆಗ ಕೇಳುವದೇನು ಆನಂದದ ಭರದಲ್ಲಿ ಬಿಗಿದು ಕಟ್ಟಿದ ಹಗ್ಗವನ್ನು ತನ್ನ ಶಕ್ತಿ ಸಾಮರ್ಥ್ಯದಿಂದ ಹರಿದು ಹಾಕಿ ತನ್ನ ಮನ ತಿಳಿದತ್ತ ಮೇಯುತ್ತ ಹೊರಟು ಹೋಯಿತು.

ಹೋದ ಕುದುರೆಯು ಹಸಿರು ಪೈರು ತಿಂದು ತೇಗಿ ಬಳಿಕ ಕೊಳ್ಳದ ಬದಿಯಲ್ಲಿ ಬೆಳೆದ ಹುಲ್ಲು ತಿನ್ನುವ ಇಚ್ಛೆಯಿಂದ ಹಾಗೆ ಮುಂದೆ ಸಾಗಿ ಬರು ಬರುತ್ತ ಬಹುದೂರ ಬಸಪ್ಪಶೆಟ್ಟಿಗೆ ಕಾಣದಂತೆ ಹೋಗಿಬಿಟ್ಟಿತು.

ಬಳಿಕ ಶೆಟ್ಟರು ಬೆಳಗಾಯಿತೆಂದು ಎಚ್ಚೆತ್ತು ನೋಡುತ್ತಾರೆ ಕಂಬಕ್ಕೆ ಬಿಗಿದು ಕಟ್ಟಿದ ಕುದುರೆ ಕಾಣದಾಯಿತು, ಹಗ್ಗ ಹರಿದುಕೊಂಡು ಹೋಗಿದೆ ಎಂದು ತಿಳಿಯಿತು. ಆಗ ಬಸವಪ್ಪಶೆಟ್ಟಿಯು ಪಾಲಿಗೆ ಮುಗಿಲೆ ಹರಿದು ಬಿದ್ದಷ್ಟು ಆಘಾತವಾಯಿತು. ಏಕೆಂದರೆ ಊರ ಪೋಲಿಸ ಪಾಟೀಲರ ಕುದುರೆಯದು. ಕುದುರೆಯನ್ನು ಕಳೆದುಕೊಂಡು ಊರಿಗೆ ಹೋದರೆ ಗೌಡರು ಏನೆಂದುಕೊಳ್ಳುವರು ಪರರ ಸೊತ್ತು ಎಂದೆನಿಸಿದ ಅಶ್ವವನ್ನು ತರುವ ಬುದ್ಧಿಗೇಡಿತನ ಮಾಡಬಾರದಿತ್ತೆಂದು ಹಳಹಳಿಸುತ್ತ ಅಜ್ಞಾ ಮಹಾಂತಜ್ಞಾ ಸ್ವಾಮಿ ದುರುದುಂಡೀಶಾ ಏನು ಮಾಡಲಿ ಪರರ ಕುದುರೆ ತಂದು ತಪ್ಪಿಸ್ಥನಾದೆ ಈ ದುರ್ಧರ ಪ್ರಸಂಗದಲ್ಲಿ ನೀನೇ ಪಾರು ಮಾಡಬೇಕೆಂದು ಶ್ರೀ ಅಪ್ಪನವರನ್ನು ಅನನ್ಯ ಭಕ್ತಿಭಾವದಲ್ಲಿ ಸ್ತುತಿಸುತ್ತ ದಿಗ್ಮೂಢನಾಗಿ ಕುಳಿತು ಕೊಂಡಿರಲು ಮತ್ತು ಮನಸ್ಸಿಗೆ ಸಮಾಧಾನ ಎಲ್ಲಿದೆ ಶ್ರೀ ಗುರುವೇ ಮಹಾಂತೇಶಾ, ಪ್ರಭುವೇ ದುರುದುಂಡೀಶಾ, ಕೃಪಾಳು ಕರುಣಾಕರ ಮೂರ್ತಿಯೇ ಭಕ್ತನನ್ನು ರಕ್ಷಿಸುವ ಭಾರ ತಮ್ಮದು ತಂದೇ ಎಂದು ಎದ್ದು ಅಡವಿಯ ನಾಲ್ಕು ದಿಟ್ಟಿನಲ್ಲಿಯೂ ತಿರುಗುತ್ತ ವಾಜಿಯನ್ನು ಶೋಧಿಸಹತ್ತಿದನು. ಸ್ವಲ್ಪ ದೂರ ಹೋಗಿರಲು ಶ್ರೀ ದುರುದುಂಡೀಶ ಮಹಾಂತಜ್ಞನವರು ಕರುಣಾಳು

ಎನ್ನುವಂತೆ ಭಕ್ತನ ಮೇಲೆ ಕರುಣೆ ಹುಟ್ಟಿ ಜಂಗಮ ಮೂರ್ತಿ ದಾರಿಕಾರನಂತೆ ಎದುರಿಗೆ ಬಂದರು.

ಜಂಗಮ ವೇಷದಲ್ಲಿ ಬಂದ ಶಿವಯೋಗಿಗಳು ಅಯ್ಯಾ ಶೆಟ್ಟಿಯೇ ನಿನ್ನ ಕುದುರೆ ಅದೋ ಅಲ್ಲಿ ಮೇಯುತ್ತಿದೆ ನೋಡುಎಂದು ದೂರದಲ್ಲಿ ಮೇಯುತ್ತ ನಿಂತ ಅಶ್ವವನ್ನು ತೋರಿಸಿದರು. ಆಗ ಶೆಟ್ಟಿಯು ಕುದುರೆಯನ್ನು ನೋಡಿ ಆನಂದಗೊಂಡು ಜಂಗಮವೇಶ ಯೋಗೀಂದ್ರರನ್ನು ನೋಡುವ ಆಸೆಯಿಂದ ಹೊರಳಿ ನೋಡಿದಾಗ ಅಲ್ಲಿ ಜಂಗಮ ಮೂರ್ತಿ ಇಲ್ಲದಾಗಿರಲು ಶೆಟ್ಟಿಯು ಅಜ್ಜಾ ಮಹಾಂತಜ್ಜಾ ಇದೆಲ್ಲವೂ ನಿನ್ನ ಮಹಿಮೆ ನಿನ್ನ ನಾಮಸ್ಮರಣೆ ಯಲ್ಲಿಯು ಸಹ ಎಂಥಹ ಅಗಾಧ ಲೀಲೆ ತುಂಬಿದೆಯಲ್ಲಾ ಎಂದು ಸಂತಸದಿಂದ ಕುದುರೆಯನ್ನು ಹೊಡೆದುಕೊಂಡು ಒಯ್ದು ಗೌಡರಿಗೆ ಮುಟ್ಟಿಸಿ ಶ್ರೀ ಮಹಾಂತಸ್ವಾಮಿಗಳ ನೆಚ್ಚಿನ ಭಕ್ತನಾಗಿ ಬಾಳಿ ಸೌಖ್ಯವನ್ನು ಹೊಂದಿದನು.

ಭಕ್ತರ ಹಿತಕ್ಕಾಗಿ ಮಹಾತ್ಮರೆನಿಸಿದ ಮಹಾಂತಜ್ಜನವರು ಬೇರೆ ಬೇರೆ ರೂಪದಲ್ಲಿ, ರೀತಿಯಲ್ಲಿ ಕಾಣಿಸಿಕೊಂಡು ಭಕ್ತರ ಬದುಕಿನ ಭಂಡಾಟವನ್ನು ದೂರೀಕರಿಸುವ ದಿವ್ಯ ಶಕ್ತಿಯುಳ್ಳವರು ದೈವಿ ತೇಜಸ್ಸುಳ್ಳವರು ಎಂದು ಜನತೆಯ ಹೃದ್ಭೂಮಿಯಲ್ಲಿ ಭಕ್ತಿಯ ಬೀಜಗಳು ಹುಟ್ಟಿದವಲ್ಲದೇ ಮೊಳಕೆ ಯೊಡೆದು ಮಹಾ ಮರವೆನಿಸಿದ ಭಕ್ತರ ಬೆಳವಣಿಗೆ ಯಾಗಹತ್ತಿತು. ಬಸವಪ್ಪ ಶೆಟ್ಟಿಯಂತಹ ಅನೇಕ ಭಕ್ತರಿಗೆ ಅನೇಕ ತರದ ಕಷ್ಟ ಕೋಟಲೆಗಳು ಬಂದು ಶ್ರೀ ಶಿವಯೋಗಿಗಳನ್ನು ಸ್ಮರಿಸುವದರಿಂದ ಬಂದ ಕಷ್ಟಗಳು ದೂರಾಗಿ ಮಾನವನ ಸೌಖ್ಯ ಬಾಳಿನ ದಾರಿಗೊಂದು ಮಹಾ ಜ್ಯೋತಿಯಂತೆ ಪವಾಡ ಪ್ರಕಾಶ ಬೀರುವ ಶ್ರೀ ಮಹಾಂತ ಶಿವಯೋಗಿ ವರೇಣ್ಯರು ವಿಚಿತ್ರವೆನಿಸುವ ಹಲವಾರು ಲೀಲೆಗಳನ್ನೆಸಗುವ ಲೀಲಾ ಮೂರ್ತಿಗಳಾಗಿ ಭಕ್ತರ ಉದ್ಧಾರ ಗೈದರು. ಅರಿತ ಜನತೆ ಅಪ್ಪನವರ ಕರುಣಾರಸವನ್ನು ಸಂಜೀವಿನಿಯಂತೆ ಭಕ್ತಿ ವಿಶ್ವಾಸಗಳಿಂದ ಸೇವಿಸಿ ಕೃತಾರ್ಥರಾದರು.



# ೪೪ ನೇ ಅಧ್ಯಾಯ

## ಮಹಾಂತಸ್ವಾಮಿಗಳ ಲಿಂಗಪೂಜಾತತ್ವ

ಲಿಂಗಪೂಜೆ ಏಕಾಂತದಲ್ಲಿ ಗುಪ್ತವಾಗಿ ನಡೆಯಬೇಕೆಂದು ಸ್ವಾಮಿಗಳ ತತ್ವವಾಣಿ. ಪ್ರತಿಯೋರ್ವ ಭಕ್ತರಿಗೂ ಇದನ್ನೇ ತಿಳಿಸುತ್ತಾರೆ. ಅವರ ಅಪ್ಪಣೆಯು ಈ ಸತ್ಯಾಂಶದಲ್ಲಿ ಶರಣ ಸತಿ, ಲಿಂಗ ಪತಿ ಎಂಬ ತತ್ವವಿದೆ. ಲಿಂಗಾಂಗ ಸಾಮರಸ್ಯದ ಬಗ್ಗೆ ಅಪ್ಪನವರು ಅಮರವಾಣಿಯಿಂದ ಹೇಳ ಹತ್ತಿದ್ದರೆ ಆಶ್ಚರ್ಯವೆನಿಸುವದು. ಅವರ ವಚನ ಸಕಲಶಾಸ್ತ್ರಗಳ ಸಾರ, ಸರ್ವಸ್ವವೆನಿಸುವದು. ಅಪ್ಪನವರ ಅಮರವಾಣಿಯಿಂದ ಬರುವ ಸಕಲ ವಿಷಯದ ಬಗ್ಗೆ ನಾವು ನೀವೆಲ್ಲ ಚರ್ಚೆ ಮಾಡಿದರೆ ಕೊನೆಗೆ ಹೊರಡುವ ನಿರ್ಧಾರದ ನುಡಿಯೆಂದರೆ ಯಾವದನ್ನು ಕೇಳಿದರೆ ಇನ್ನೇನನ್ನೂ ಕೇಳ ಬೇಕಾಗಿಲ್ಲವೋ ಯಾವದನ್ನು ತಿಳಿದುಕೊಂಡರೆ ಇನ್ನೇನನ್ನೂ ತಿಳಿದುಕೊಳ ಬೇಕಾಗಿಲ್ಲವೋ ಅದನ್ನೇ ಮಹಾಂತಸ್ವಾಮಿಗಳು ಹೇಳುವರು, ತಿಳಿಸಿ ಕೊಡುವರು.

ನಾನು ಮಹಾಂತಸ್ವಾಮಿಗಳ (೧೦೮) ನಾಮಾವಳಿ ಎಂಬ ಸಣ್ಣ ಹೊತ್ತಿಗೆ ತಯಾರಿಸಿ ಒಯ್ದು ಮುಂದಿಟ್ಟು ನಮಸ್ಕಾರ ಮಾಡಿ ಸುಮ್ಮನೇ ಕುಳಿತಿರಲು ಸ್ವಂತ ಅಪ್ಪನವರು ಕರಡು ಹೊತ್ತಿಗೆಯನ್ನು ಕೈಗೆತ್ತಿಕೊಂಡು ನೂರೆಂಟು ನಾಮಾವಳಿಯ ಭಾಗವನ್ನು ಸಂಪೂರ್ಣ ಸರಳ ರೀತಿಯಲ್ಲಿ ಓದಿ ಆನಂದದಿಂದ ಆಶೀರ್ವದಿಸಿದ್ದಲ್ಲದೇ ಒಂದೇ ಉಸಿರಿನಲ್ಲಿ ನಮಗೆ ಸುಮ್ಮನೇ ಯಾವ ಹೆಚ್ಚಳದ ಪ್ರಸಂಗ ತರಬೇಡಿರಪ್ಪಾ ಎಂದರು.

ಹೂಂ ದೊಡ್ಡವರು, ಜ್ಞಾನಿಗಳು ಹೇಳುವದೇ ಹೀಗೆ ನಿಜವಾದ ತ್ಯಾಗ ಗುಣಧರ್ಮ ಹೊಂದಿದ ಪೂಜ್ಯರು ತಮ್ಮ ಹೊಗಳಿಕೆಯನ್ನು ಮೆಚ್ಚುವದಿಲ್ಲವ. ಆದರೂ ಸತ್ಯ ಸಂಗತಿಯನ್ನು ಬರೆಯುವದು ಬರಹಗಾರನ ಧರ್ಮ ಎನ್ನು ವಂತೆ ಏನೇನೋ ನೆವ ಹೇಳಿ ಉಳಿದುಕೊಂಡು ಆಶೀರ್ವಾದ ಪಡೆದುಕೊಂಡು ಬಂದವನಾಗಿದ್ದೆ. ನಾನಂದು ಅಲ್ಲಿಯೇ ಉಳಿದುಕೊಂಡಾಗ ಹಲವಾರು

ಭಕ್ತರ ಅಪೇಕ್ಷೆಯು ಮೇರೆಗೆ ಆಧ್ಯಾತ್ಮ ಸಾಧನೆಯು ಬಗ್ಗೆ ಅಪ್ಪನವರ ಅಮರ ವಾಣಿಯನ್ನು ಕೇಳುವ ಪುಣ್ಯ ಲಭಿಸಿತು.

## ಅಪ್ಪನವರ ಅಮರವಾಣಿ

ವೀರಶೈವ ಧರ್ಮವನ್ನು ತಮ್ಮ ಸದಾಚಾರ, ಸದುದ್ದೇಶ, ಸದ್ವಿಚಾರ ಗಳಿಂದಲೂ ನೈತಿಕ ನಿರ್ಮಲ ಶೀಲಚಾರಿತ್ರ್ಯದಿಂದಲೂ ಶಿವಾನುಭವ ಸಾಧನೆಯು ತಳಹದಿಯಲ್ಲಿ ತಾವು ಪಡೆದ ಅನುಭವ ಸಿದ್ಧಿಯಿಂದಲೂ ನಿತ್ಯ ನೂತನ ಧರ್ಮ ಜಾಗ್ರತೆಗೆ ಕುಂದಿಲ್ಲದಂತೆ ಲಿಂಗಪೂಜೆ, ಶಿವಯೋಗ ಬಲ ಸಾಧನೆ, ಗೈದ ಅಪ್ಪನವರ ಈ ಶ್ರೇಷ್ಠ ಮಾದರಿ ಆಧ್ಯಾತ್ಮ ಜೀವನದ ದಾರಿದೀಪ.

ಮಹಾಂತಸ್ವಾಮಿಗಳ ಆಧ್ಯಾತ್ಮಿಕ ತಳಪಾಯ ಬಳ್ಳೇ ಗಟ್ಟಿ ಯಾಗಿ ಸಾಗಿತ್ತು. ಅವರ ತತ್ವದಲ್ಲಿ ಸ್ವಾರ್ಥದ ಸುಳಿವಿಲ್ಲ. ಆಚಾರಹಿತ ಜೀವನದ ತಳಪಾಯ ಹಾಕಿದ ಅಪ್ಪನವರು ಶ್ರದ್ಧಾಭಾವದಲ್ಲಿ ಸಮರಸ ಜೀವನಕ್ಕೆ ಮೆರುಗು ಕೊಟ್ಟ ಮಹಾಪುರುಷರು, ಮಹಾತ್ಮರು ಅವರ ಸಂಕಲ್ಪ ಫಲಭರಿತ ಮರವಾಯಿತು. ಸಾಧನೆಯು ಸುಗಂಧ ಪುಷ್ಪವಾಯಿತು. ನಿರ್ಮಲ ಜ್ಯೋತಿಯಾಯಿತು. ಆದರ್ಶ ಜೀವನದ ದಾರಿ ತೋರಿ ಮಾನವ ಉದ್ಧಾರಕಾರ್ಯಕ್ಕೆ ಸರಳ ಮಾರ್ಗವಾಯಿತು. ದೇವರು ಎಲ್ಲಿ ಬೇಕಲ್ಲಿ ನಮ್ಮ ನಮ್ಮ ಭಕ್ತಿ ಭಾವದಲ್ಲಿ ಇರುವದರಿಂದಲೇ ಜಗದ ಈ ವ್ಯಾಪಾರ ಅವನ ಇಚ್ಛೆಯಂತೆ ಸಾಂಗವಾಗಿದೆ ಸರಳವಾಗಿದೆ ಎಂಬ ಸದಿಚ್ಛೆ ಅಪ್ಪನವರಲ್ಲಿ ಅಂಕುರಿಸಿ ಬೇರು ಬಿಟ್ಟು ಮಹಾಮರವಾಯಿತು. ಲಿಂಗರೂಪದಲ್ಲಿ ಶಿವನನ್ನು ಕಾಣುವ ಸಾಧನೆಯಲ್ಲಿ ಅಪ್ಪನವರು ಹಗಲಿ ನಿಸ್ಸೀಮರಾದರೂ ಭಕ್ತ ಬಳಗ ದವರಿಗೆ ಇದೇ ತತ್ವವನ್ನು ಪದೇ ಪದೇ ಬಿತ್ತರಿಸಿ ಶಿವನನ್ನು ನಂಬಿರಿ ಶಿವನ ಇಚ್ಛೆಯಂತೆ ಮೆಚ್ಚುಗೆ ಪಡೆದು ಮಾನವರಾಗಿ ಶಂಕರನ ವರ ಪುತ್ರರೆನಿಸುವ ತೆರದಿ ಬಾಳಿರಿ ಎಂಬ ಹಿತ ತತ್ವದಲ್ಲಿ ಎಂತಹ ಅಗಾಧ ಲೀಲೆ ತುಂಬಿದೆಯೋ ಏನೋ.

## ವಚನ

ನಂಬಿ ಕರೆದೊಡೆ ಓ ಎನ್ನನೇ ಶಿವನು
ನಂಬುಗೆಯಲಿ ಅರ್ಚಿಸಿದೊಡೆ
ಚಂದ್ರಧರ ಚಲುವ ಶೇಖರ ಬಾರದಿರನೆನಯ್ಯಾ
ಬಿಂಬ ಪ್ರತಿಬಿಂಬ ಆತನೇ ಕಾಣಾ ಲಿಂಗರೂಪಿ ಹರನು

ಎಂದು ಮಹಾಂತಸ್ವಾಮಿಗಳು ನಂಬಿಗೆ, ವಿಶ್ವಾಸಗಳನ್ನು ಕಳೆದುಕೊಂಡು ಎಷ್ಟು ಅರ್ಚಿಸಿ ಪೂಜಿಸಿ ಪತ್ರಿ ಪುಷ್ಪಾದಿಗಳ ಸುರಿದು,ದೀಪ ಧೂಪಾದಿಗಳನು ಬೆಳಗಿದರೂ ಪ್ರಯೋಜನವಿಲ್ಲ ಎಲ್ಲವೂ ವ್ಯರ್ಥ ಎನ್ನುತ್ತಿದ್ದರು. ಶ್ರದ್ಧಾ.ನಿಷ್ಠೆ, ಅವಧಾನ ಅನುಭಾವ ಆನಂದಗಳುಳ್ಳವನೇ ನಿಜ ಭಕ್ತ, ಅವನೇ ಮುಕ್ತ, ಅವನೇ ಶರಣ, ಅವನೇ ಆದರ್ಶ ಲಿಂಗವಂತನು. ಆದರ್ಶ ಸೇವಾ ಧರ್ಮಿ ಯಾದ ಭಕ್ತನು ಅಹಿಂಸಾತ್ಮಕ ತತ್ವ ಸಂಪನ್ನ ಎನಿಸಿ ಹಲವಾರು ಭವಿಗಳ ಅಜ್ಞಾನದ ಕತ್ತಲೆಯನ್ನು ಕಳೆಯಬಲ್ಲನು.

ತನು ಶುಚಿ, ಮನ ಶುಚಿ, ಭಾವ ಬುದ್ಧಿ ಮೊದಲ್ಗೊಂಡು ಶುಚಿಯಾಗ ಬೇಕು. ಶಿವಚಿಂತನೆ ಶಿವಾಜ್ಞಾನ, ಶಿವಧ್ಯಾನದಲ್ಲಿರಬೇಕು. ಶಿವಚಿಂತನೆ ಶಿವಧ್ಯಾನದಿಂದ ಪ್ರಪಂಚದ ಕಷ್ಟ ಪರಂಪರೆಗಳು ದೂರಾಗಿ ಅಜ್ಞಾನದ ಮುಸುಕು ಮಾಯೆ ತಾ ಹರಿದು ಜ್ಞಾನದ ಬೆಳಕು ಕಾಣುವಂತಾಗುವದು. ಜೀವನದಲ್ಲಿ ಬಸವಣ್ಣನ ವಚನಾಮೃತದಂತೆ ಪ್ರತಿಯೋರ್ವ ಮಾನವ ಪ್ರಾಣಿಯು ನಡೆಯಲು ಮುನ್ನುಗ್ಗಬೇಕು.

## ಬಸವ ವಚನಾಮೃತ

ವಚನದಲ್ಲಿ ನಾಮಾಮೃತ ತುಂಬಿ
ನಯನದಲ್ಲಿ ನಿಮ್ಮ ಮೂರುತಿ ತುಂಬಿ
ಮನದಲ್ಲಿ ನಿಮ್ಮ ನೆನಹು ತುಂಬಿ
ಕಿವಿಯಲ್ಲಿ ನಿಮ್ಮ ಕೀರೂತಿ ತುಂಬಿ
ನಿಮ್ಮ ಚರಣ ಕಮಲದಲ್ಲಿ ದೇಹವೇ ತುಂಬಿ ಕೂಡಲ
ಸಂಗಮದೇವಾ

ಅಣ್ಣ ಬಸವಣ್ಣನ ಅಮರವಾಣಿಯಂತೆ ಇಂದು ಮಹಾಂತಸ್ವಾಮಿಗಳು ಅಮರ ಸಂದೇಶ ಬೀರುವವರಾಗಿದ್ದಾರೆ.

ಸತ್ಯ ಸದಾಚಾರ ಸದ್ಭಕ್ತಿಯಿಂದ ನಡೆದರೆ ಈ ಲೋಕವೇ ದೇವ ಲೋಕವಾಗುವದು ಎಂದು ಹೆಮ್ಮೆಯಿಂದ ಬಸವಣ್ಣ ಹೇಳಿರುವಂತೆ ಮಾನವನು ಸತ್ಯ ಮಾರ್ಗದತ್ತ ನಡೆದು ಬದುಕಿನ ನಿಜ ಗುರಿಯನ್ನು ಮುಟ್ಟಬೇಕು. ಹಾಗೆಂದು ನುಡಿದ ಬಸವೇಶಾ ನಡೆದು ತೋರಿಸಿದಾ.

ದೇವಲೋಕ ಮರ್ತ್ಯಲೋಕವೆಂಬುದು ಬೇರಿಲ್ಲ ಕಾಣಿರೋ
ಸತ್ಯನುಡಿವುದೇ ದೇವಲೋಕ ಮಿಥ್ಯವ ನುಡಿವುದೇ
ಮರ್ತ್ಯಲೋಕ ಆಚಾರವೇ ಸ್ವರ್ಗ, ಅನಾಚಾರವೇ ನರಕ
ಕೂಡಲ ಸಂಗಮದೇವಾ ನೀವೆ ಪ್ರಮಾಣ.

ಬಸವಣ್ಣನ ಮಾರ್ಮಿಕ ಮಾತಿನಂತೆ ಭೂಲೋಕ ದೇವಲೋಕವಾಗಬೇಕು. ನಮ್ಮ ಇರುವು ಆಚಾರದಿಂದ ಸ್ವರ್ಗ ಪಡೆಯಬೇಕು. ಅನಾಚಾರದಿಂದ ವರ್ತಿಸಿ ನರಕಯಾತನೆಗೆ ಗುರಿಯಾಗಬಾರದು. ಬಸವಣ್ಣನ ನುಡಿಯಂತೆ ನಡೆದು ನಿಜತ್ವದ ಬೆಳಕು ಕಾಣಿರಯ್ಯಾ ಎಂದಿತು ಅಪ್ಪನವರ ಅಮರವಾಣಿ.

ಪ್ರಪಂಚದಲ್ಲಿದ್ದು ಶರಣ ಸಂಗದಲ್ಲಿದ್ದು, ಲಿಂಗ ಜಂಗಮ ಪ್ರೇಮಿಯಾಗಿ ಶ್ರದ್ಧಾ ಭಕ್ತಿಯಿಂದ ಸಾಧನ ಮಾಡಬೇಕು. ಸಿರಿಯು ಬಂದಿತೆಂದು ಅಹಂಕಾರಿಯಾಗಬೇಡಾ, ಕರ್ತವ್ಯ ಮೂಢನಾಗಿ ಹೀನ ಆಚರಣೆಯಲ್ಲಿ ಬಾಳಬೇಡ. ಭೂತದಯಾಗಿಪರನಾಗಿರು ಭವಿತವ್ಯ ಗೆದೆಯುವ ನಿಜ ಮಾನವನಾಗಿರು, ದಯಾ ಧರ್ಮ ಬುದ್ಧಿ ಜಾಗ್ರತವಾಗಿರು. ಅಹಂಕಾರದಿಂದ ಕ್ರೋಧದ ಉತ್ಪತ್ತಿಯಾಗುವದು. ಮನೆಯ ಕಿಚ್ಚು ಮನೆಯನ್ನೆ ಸುಡುವಂತೆ ಆಸೆ, ಕ್ರೋಧ, ಕ್ರೂರತನ, ಕುಭಾಷೆ ಕುಹಕತನಗಳು ಹುಟ್ಟಿ ಸುಡುವ ಬೆಂಕಿಯಾಗಬಹುದು. ಇವೆಲ್ಲ ಹಿಂಗಿ ಭವಪಾಶದ ಬಿಡುಗಡೆ ಹೊಂದಿ ನಿಜತ್ವದ ನೆಲೆ ತಿಳಿದು ನೂಡುವವನಾಗು, ಆಶಾರಹಿತ ಮಾನವನಾಗು.

ಮಾಡಿ ಮಾಡಿ ಕೆಟ್ಟರೋ ಮನವಿಲ್ಲದೇ
ನೀಡಿ ನೀಡಿ ಕೆಟ್ಟರೋ ನಿಜವಿಲ್ಲದೇ
ಮಾಡುವ ನೀಡುವ ನಿಜಗುಣವುಳ್ಳವರೇ ಕೂಡಿಕೊಂಬ
ನಮ್ಮ ಕೂಡಲ ಸಂಗಮದೇವ.

ಬಸವಣ್ಣನ ವಚನದಂತೆ ನುಡಿಯನ್ನು ಅಲಿಸಿ ಪಾಲಿಸಿ ವಿಶಾಲ ಮನದ ಭಕ್ತರಾದರೆ ನಾವು ಈ ವಚನದೊಡನೆ ನಿಮಗೆ ತಿಳಿಸಿ ಹೇಳಿದ್ದು ಸಾರ್ಥಕ ಎಂದಿತು ಅಪ್ಪನವರ ಅಮರವಾಣಿ.

ಸಾಧಕನು ಮೃದು ಭಾಷಿಯಾಗಬೇಕು, ವಿನಯವುಳ್ಳವನಾಗಬೇಕು. ಮೃದು ವಚನಗಳೇ ಜಪ, ತಪ, ವಿನಯ ಸದಾಚಾರಗಳೇ ಶಿವನೊಲುಮೆ.ಯು ಸಾಧನ ತನ್ನ ಸಾಧನೆಯಿಂದ ಸಿದ್ಧಿ ದೊರೆಯಿತೆಂದು ಮಾನವನು ಅಹಂಕಾರಿಯಾಗಕೂಡದೆಂದು ಅಪ್ಪನವರು ಬಾಲ ಬಾಲಿಕೆಯರೊಡನೆ ಶಿವಾನುಭವಗೋಷ್ಠಿಯಲ್ಲಿ ಕೂಡಿ ತಮ್ಮ ಅಮರವಾಣಿಯಿಂದ ಭಕ್ತ ಬಳಗ ವನ್ನು ಉದ್ಧರಿಸುವ ಪ್ರಸಂಗಗಳು ಎಡಬಿಡದೇ ಮುರಗೋಡ ಮಠದಲ್ಲಿ ಸಾಗಿರುತ್ತವೆ. ನಾನಿದ್ದ ಪ್ರಸಂಗದಲ್ಲಿ ಇದೆಲ್ಲವನ್ನೂ ಕಂಡು ಕೇಳಿ ಆನಂದ ಆಶ್ಚರ್ಯಗಳು ಏಕ ಕಾಲಕ್ಕೆ ಉದ್ಭವಿಸಿ ಮುರಗೋಡ ಮಹಾಂತಸ್ವಾಮಿಗಳ ಆ ಸನ್ನಿಧಾನವನ್ನು ಬಿಟ್ಟೇಳದಷ್ಟು ಮೂಕೂರ್ತ ಮಾಡಿತು ಮನಸ್ಸು.



## ೪೫ ನೇ ಅಧ್ಯಾಯ

### ಶ್ರೀ ಮಹಾಂತಸ್ವಾಮಿಗಳ ಕೊನೆಯ ದಿನಗಳು

ಜ್ಯೋತಿಯಂದದಿ ಬೆಳಗಿದ ಶ್ರೀಗುರು ಮಹಾಂತ ಶಿವಯೋಗಿಗಳು ದಿವ್ಯ ಮಂಗಲತಾನವಾದ ಲಿಂಗಧ್ಯಾನದಲ್ಲಿ ಬೆರೆಯ ಬೇಕೆಂದು ಆಸೆಪಟ್ಟರೋ ಅಥವಾ ಹರನಾಜ್ಞೆಯಂತೆ ಅಪ್ಪನವರ ಲಿಂಗಾನಂದ ಜೀವನಕ್ಕೆ ಸ್ವಲ್ಪ ವಿಶ್ರಾಂತಿ ದೊರೆಯಲೆಂದು ಗುರು ದುರುದುಂಡೀಶ ಕರೆಯಬಂದನೋ

ಅಂತೂ ಹತ್ತೊಂಭತ್ತು ನೂರಾ ಎಪ್ಪತ್ತೆರಡರ ಫಾಲ್ಗುಣ ಶುಕ್ಲಪಕ್ಷ ಏಕಾದಶಿ ಯಂದು ಅಪ್ಪನವರು ಬೆಳಗಿನ ಲಿಂಗಪೂಜೆ, ಸಹಸ್ರಗಣ ಪಾರಾಯಣಗಳನ್ನು ಮುಗಿಸಿ, ಭಕ್ತ ಬಳಗವನ್ನು ಕರೆದು, ನಸುನಗೆಯ ಚಿಮ್ಮಿ ವಸುಮತೀಶನ ಆಜ್ಞೆಯಾಗಿದೆರಪ್ಪಾ. ನಾವಿನ್ನು ಲಿಂಗಾನಂದದ ನಿಜೈಕ್ಯರಾಗಬಯಸಿದ್ದೇವೆ ದುರುದುಂಡೀಶನ ಆಜ್ಞೆಯನ್ನು ಮೀರಿ ಇರುವದೆಂತು ಸಾಧ್ಯ ಎಂದು ಹೇಳುತ್ತ, ಅಂದು ಸಕಲ ಭಕ್ತ ಸೇವಾ ಬಳಗದೊಡನೆ ಹಲವಾರು ಪ್ರಮುಖ ಶಿಸ್ಸೀಮ ಭಕ್ತರನ್ನು ಕರೆದು ತಮ್ಮ ಕೊನೆಯ ಗುರಿಯನ್ನರುಹಿ ಮಧ್ಯಾಹ್ನದ ಲಿಂಗಪೂಜೆಯಲ್ಲಿ ನಿರತರಾಗಿ ಅತ್ಯಂತ ವೈಭವ ಪೂರ್ಣವಾಗಿ ತಮ್ಮ ಲಿಂಗ ಪೂಜೇ ಸಹಸ್ರಗಣ ಪಾರಾಯಣವನ್ನು ಸಮಾಪ್ತಿಗೊಳಿಸಿ ತಮ್ಮ ಕೊನೆ ಉಸುರಿನ ಇಚ್ಛೆಯಂತೆ ಚರಮೂರ್ತಿಗಳಾದ ಬೈಲಹೊಂಗಲ ಭಾಗದಲ್ಲಿರುವ ಬೈಲವಾಡ ಶ್ರೀ ನೀಲಕಂಠರನ್ನು ಉತ್ತರಾಧಿಕಾರಿಗಳೆಂದು ಶೀವರ್ಮಾನಿಸಿ, ಶುಭಯೋಗ ಕೂಡಿದಂದು ಪಟ್ಟಾಧಿಕಾರ ಕಾರ್ಯವನ್ನು ಹಾವೂರ ಶ್ರೀ ಶಿದ್ಧಲಿಂಗಸ್ವಾಮಿಗಳ ಆಶೀರ್ವಾದದಲ್ಲಿ ಮುಗಿಸುವದಾಗಬೇಕೆಂದು ಹೇಳಿ ಮೂರನೇ ಲಿಂಗಪೂಜೆಗಾಗಿ ಕುಳಿತವರು ರಾತ್ರಿ ಎಂಟು ಘಂಟೆ ಹದಿನೈದು ನಿಮಿಷಕ್ಕೆ ಲಿಂಗೈಕ್ಯರಾಗಿದ್ದಾರೆ. ಮುರುಗೋಡದ ಪುಣ್ಯದರಾಶಿ ಇನ್ನಿಲ್ಲ ಪಾಯಿತು. ಪತಿತೋದ್ಧಾರ ಪರಶಿವ ಮೂರ್ತಿ ಮರೆಯಾಯಿತು.

ಮಂಗಲ ಮೂರ್ತಿ ಮಹಾಂತಸ್ವಾಮಿಗಳು ಲಿಂಗೈಕ್ಯರಾದರೆಂಬ ಸುದ್ಧಿ ಯನ್ನು ಗಾಳಿ ದಿಕ್ಕುದಿಕ್ಕಿಗೆ ಹೊತ್ತು ಒಯ್ಯಿತು. ನಲಿವು ಗೆಲವು ಮಾಯ ವಾಗಿ ಮುರುಗೋಡ ಜನತೆ ಶೋಕ ಸಾಗರದಲ್ಲಿ ತತ್ತರಿಸಿ ಹೋಯಿತು. ಎತ್ತನಿಂದ ಬಂತು ಈ ವಿಪತ್ತು ನಮಗೆಂದು ಅತ್ತು ಕರೆದರು. ಅಪ್ಪನವರ ಅವಸಾನದ ಸುದ್ದಿಯಿಂದ ಹಲವಾರು ಗುರುಮಠಗಳು ಹಾಗೂ ಚರಮೂರ್ತಿ ಪುಂಗವರು ತತ್ತರಿಸಿ ಬಿಸಿಉಸಿರು ಹಾಕಿದರು. ಕಾಲನ ಬಸುರಿನಲ್ಲಿ ಇದೆಂಥ ಮಾಯೆ ಅಡಗಿದೆಯಲ್ಲಾ ಎಂದು ನೂರೆರಡು ಮೀರಿದ ಮಹಾಂತಸ್ವಾಮಿಗಳ ಆಕಸ್ಮಿಕ ಶಿವೈಕ್ಯದ ಸುದ್ಧಿ ಲಕ್ಷಾವಧಿ ಜನರನ್ನು ಶೋಕ ಸಂತಪ್ತರನ್ನಾಗಿ ಮಾಡಿತು.

ಅಪ್ಪನವರ ಕೊನೆಯ ದರ್ಶನವಾದರೂ ಲಭಿಸಲೆಂದು ದಿಕ್ಕು ದಿಕ್ಕು ಗಳಿಂದ ನೂರಾರು ಬಸ್ಸುಗಳು ಮತ್ತರದಿ ಓಡಿ ಬರಹತ್ತಿದವು. ಹತ್ತಾರು

ಸಾವಿರಕ್ಕೂ ಮಿಕ್ಕಿದ ಜನತೆಯುನ್ನು ಹೊತ್ತು ಮತ್ತೇ ಇನ್ನೂರಕ್ಕೂ ಮಿಕ್ಕಿದ ಕಾರುಗಳು ಹೊತ್ತುತಂದವು. ಪ್ರಮುಖ ಮುಖಂಡರನೇಕರನ್ನು ಕರೆತಂದ ಸೀಮೆಯ ಹೋರಿ ಗಾಡಿಗಳಂತೂ ಲೆಖ್ಖವಿಲ್ಲ. ಲಕ್ಷ ಜನತೆಯು ತಾನ ವಾಯಿತು ಮುರುಗೋಡ.

ಹಲವಾರು ಮಠಾಧಿಕಾರಿ ಅಪ್ಪನವರು, ಚರಮೂರ್ತಿ ಯತಿಪುಂಗವರು ಆಗಮಿಸಿ ಮುಖ್ಯವಾಗಿ ಧಾರವಾಡ ಮೃತ್ಯುಂಜಯ ಮಠದಪ್ಪಗಳು, ಹುಬ್ಬಳ್ಳಿ ಮೂರೂಸಾವಿರ ಮಠದಪ್ಪಗಳು, ಹಾವನೂರ ಶಿದ್ಧಲಿಂಗಸ್ವಾಮಿ ಗಳು ಇನ್ನಿತರ ಯೋಗಿವರೇಣ್ಯರು ಆಗಮಿಸಿ, ವೀರ ವಿರತಿಯಾಗಿ ಯೋಗಿ ಶಿವಯೋಗಿ, ಲಿಂಗಪ್ರೇಮಿ ಮಹಾಂತಸ್ವಾಮಿಗಳನ್ನು ಕಂಡು ದುಃಖದುಸಿರು ಬಿಟ್ಟರು. ಭೋಗ ದೂರಮಾಡಿ ತ್ಯಾಗಿ ಎನಿಸಿದ ಯೋಗಿ ಇನ್ನಿಲ್ಲವಾದರಲ್ಲ ರಾಗರಹಿತ ಚರಿತಾತ್ಮ ಶಿವಯೋಗಿ ನಮ್ಮನ್ನಗಲಿದರಲ್ಲಾ ಮೂರು ಮಲಗಳ ಕಳೆದು ಆರಿ ಅರಿಗಳನ್ನು ತೂರಿ ಮೆರೆದ ಮಹಾ ಯತಿವರ ನಮಗಿಲ್ಲ ವಾಯಿತಲ್ಲಾ ಎಂದು ಪರಿಪರಿಯಾಗಿ ಚಿಂತಿಸಿದರು. ಅಪ್ಪನವರ ಅಸಾ ಧಾರಣ ವ್ಯಕ್ತಿತ್ವವನ್ನು ಗುರುತಿಸಿದ ಹಲವಾರು ಮಠದಪ್ಪಗಳು ಚರ ಮೂರ್ತಿಗಳು ಯೋಗಿ ಶಿವಯೋಗಿಗಳೇ ವ್ಯಸನದ ಬಿಸಿಉಸಿರು ಬಿಡುತ್ತಿರಲು ಸಾಮಾನ್ಯ ಭಕ್ತ ಬಳಗದ ಗತಿ ಏನಾಗಿರಬೇಕು ಅಪ್ಪನವರ ಅಗಲಿಕೆಯಿಂದ.

ಶ್ರೀಗುರು ಮಹಾಂತಸ್ವಾಮಿಗಳ ಪಾದ ಸೇವಿಸಿ, ಪೂಜಿಸಿ ಪುನೀತರಾದ ಹಲವಾರು ಬಳಗದವರು ಗುರುಮಠದ ಚರಮೂರ್ತಿಗಳನೇಕರು ಬಿದ್ದು ಬೇಡುತಿಹರು ಎದ್ದೇಳು ಶಿವಯೋಗಿ ಎಂದೆನುತ.

ಯೋಗಿಯೇ ಶಿವಯೋಗಿಯೇ ಮಹಾಂತಯ್ಯನೇ ಸ್ವಾಮಿ ಮಹೇಶ ನವತಾರಿಯೇ ಸಾಗಿ ಬಂದಿಹೆವು ನಿನ್ನ ಕೃಪಾಶೀರ್ವಾದಕೆಂದು. ಹೀಗೆ ಹಲವು ಬಗೆಯಿಂದ ಶಿವಯೋಗೇಶನನ್ನು ನೆನೆದು ಉಪಾಯಗಾಣದೇ ಮನುಜ ಲೋಕದ ಋಣವು ತೀರಲು ಹರನಾಜ್ಞೆ ಇಂತಿರಲು ಆರೇನು ಮಾಡುವದೆಂಬ ಸತ್ಯನುಡಿಗೆ ಸಾಕ್ಷಿಯಾಗಿ ಅನಘುರಾತ್ಮದ ಜಡ ವಿಭಾಗಡ ತನುವು ಸಾಗಿ ಮರೆಯಾಯಿತು ಸತ್ಯ ಶಿವನ ಸಾಯುಜ್ಯ ಪಟ್ಟದ ಕಡೆಗೆ.

ಅಮರ ಜ್ಯೋತಿಯಾಗಿ ಬೆಳಗಿ ಅಮರ ಪದ ಪಟ್ಟವನ್ನು ಪಡೆದ ದಿವ್ಯ ದೇವಾತ್ಮನ ದಿವ್ಯ ಚರಿತೆ ಈ ಲೋಕದಲ್ಲಿ ಅಮರವಾಯಿತೆಂದು ವೀರಶೈವಾಚಾರ ಪದ್ಧತಿಯಂತೆ ಪುಷ್ಪ ಪಂಗಾಗಳಿಂದ ಸಂಭ್ರಮದ ಸಕಲ ಬಿರುದು ಬಾವಲಿಗಳಿಂದ ಹೊಗಳಿಸಿ ಹತ್ತೆಂಟು ಸಾವಿರ ಜನಸಮೂಹದಲ್ಲಿ ಎಲ್ಲರ ಕಣ್ಮನಗಳಿಗೆ ದಿವ್ಯ ಚರಿತಾತ್ಮರನ್ನು ಗುರುತಿಸುವ ಪುಣ್ಯತಾನವೆನಿಸಿದ ನಿರ್ಣಿತ ಸ್ಥಳಕ್ಕೆ ಅಂದರೆ ಶೂನ್ಯ ಸಂಪದಕ್ಕೆ ಮೊದಲೇ ಸಿದ್ಧಗೊಳಿಸಿದಲ್ಲಿ ತಂದಿದ್ದಾರೆ ಅಪ್ಪನವರ ಪಾರ್ಥಿವ ಶರೀರವನ್ನು. ದುಃಖತಪ್ತ ಭಕ್ತಸಾಗರದ ಮಧ್ಯ ಅಪ್ಪನವರ ಅಮರ ಆತ್ಮ ಚಿರಶಾಂತಿಯ ತಾನದಲ್ಲಿ ಅಮರವಾಯಿತು.



## ೪೬ ನೇ ಅಧ್ಯಾಯ

### ಶ್ರೀ ನೀಲಕಂಠದೇವರಿಗೆ ಪಟ್ಟಾಧಿಕಾರ

ಕಳೆದವೀಗ ವರುಷ ಒಂಭತ್ತು ತಿಂಗಳು ಪರಮ ಗುರು ಚರಲಿಂಗ ರೂಪದಲ್ಲಿ ಧರೆಯನ್ನೆಲ್ಲ ಸುತ್ತಿ ಕನ್ನಡನಾಡ ಕಣ್ಮಣಿಯಾಗಿ ಶರಣ ತತ್ವ ಶಕ್ತಿಗೆಲ್ಲ ಚೇತನದ ಬೆಳಕನ್ನಿತ್ತ ಕಾಲದಲ್ಲಿ ಸೇವಾಭಾಗ್ಯ ಹೊಂದಿದ ಚರರ ಬಳಗದಲ್ಲಿ ಶಿವಯೋಗಿಗಳ ನೆಚ್ಚಿನ ಹೆಚ್ಚಿನ ಮರಿಯಾಗಿ ಸೇವೆ ಸಲ್ಲಿಸಿದ ಬೈಲವಾಡ ಹಿರಿಯ ಮಠದ ನೀಲಕಂಠರ ಸತ್ವಗುಣ ಶಾಂತಕಳೆಯನ್ನು ಗುರುತಿಸಿ ಶಿವಯೋಗ ಸಾಧನೆಗೆ, ಲಿಂಗನಿಷ್ಠೆಗೆ ಮಹಾಂತಸ್ವಾಮಿಗಳ ಪರಂಪರೆ ಕಾಯ್ದುಕೊಳ್ಳುವ ಶಕ್ತಿಶಾಲಿ ಶಿವತತ್ವ ಸಮೃದ್ಧವಾಗಿರುವದನ್ನು ಅರಿತು ಉತ್ತರಾಧಿಕಾರಿಯನ್ನಾಗಿ ಮುರಗೋಡ ಮಹಾಂತೇಶ ಮಠದ ಮರಿದೇವರೆಂದು ತೀರ್ಮಾನಿಸಿದರು.

ನೀಲಕಂಠರು ಮರಿದೇವರಾದರು. ಲೀಲಾಜಾಲವಾಗಿ ಶಿವಯೋಗ ಮಂದಿರದಲ್ಲಿ ಧರ್ಮಾಚಾರ ಪದ್ಧತಿಯಂತೆ ಸಂಸ್ಕೃತ ಇನ್ನಿತರ ಅಭ್ಯಾಸದಲ್ಲಿ ಬಲಿಷ್ಠರಾಗಿ ಕಾಶೀಪುರದಲ್ಲಿ ಹೆಚ್ಚಿನ ಶಿಕ್ಷಣ ಹೊಂದಿ ನಿಸ್ಸೀಮರಾದರು.

ಭಕ್ತರ ಇಚ್ಛೆಯಂತೆ ಗುರು ಕಾರುಣ್ಯದ ನೆರಳಿನಲ್ಲಿ ಶಿವಯೋಗ ಪಿಡಿಯಲು ಒಪ್ಪಿ, ಗುರುಗಳಂತೆ ಲಿಂಗಾನಂದ ಹೊಂದ ಬಯಸಿ ಚಿರ ವಿನೂತನ ಮಠದ ಪಟ್ಟದ ಅಧಿಕಾರಕ್ಕೆ ಒಪ್ಪಿಕೊಂಡರು.

ಮೊದಲೇ ಮಹಾಂತಪ್ಪಗಳು ತಿಳಿಸಿದಂತೆ ಅತೀ ಸಂಭ್ರಮದ ಶೋಭೆಯಲ್ಲಿ ಪರಮಪೂಜ್ಯ ಹಾವ್ನೂರ ಶ್ರೀಗಳಾದ ಶಿದ್ಧಲಿಂಗಸ್ವಾಮಿಗಳಿಂದ ಹತ್ತೊಂಭತ್ತನೂರಾ ಎಪ್ಪತ್ತೆರಡು ಆಗಷ್ಟ ಎಂಟರಂದು ಶ್ರೀ ನೀಲಕಂಠ ಜಂಗಮ ಚರಮೂರ್ತಿಗಳಿಗೆ ಮುರುಗೋಡ ಮಹಾಂತ ಸ್ವಾಮಿಗಳ ಉತ್ತರಾಧಿಕಾರ ಪಟ್ಟವಾಯಿತು. ಮಹಾಂತಸ್ವಾಮಿಗಳ ದಿವ್ಯ ಜ್ಯೋತಿಯ ಬೆಳಕಿಂದು ಅವರ ಪ್ರತಿ ಛಾಯಾ ದೀಪವಾದ ಶ್ರೀ ನೀಲಕಂಠ ಸ್ವಾಮಿಗಳಿಂದ ಬೆಳಗಲೆಂದು ಆಶಿಸೋಣ.



# ೪೭ ನೇ ಅಧ್ಯಾಯ

## ಮುರುಗೋಡದ

## ಶ್ರೀಮನ್ನಿರಂಜನ ಪ್ರಣವಸ್ವರೂಪಿ ಮಹಾಂತಶಿವಯೋಗಿಗಳವರ ನೂರೆಂಟು ನಾಮಾವಳಿಗಳು

—: ಕಂದ :—

ಹರುಷದಿಂ ವರ ಮುರುಗೋಡದ
ಗುರು ಮಹಾಂತೇಶರ ನೂರೆಂಟು ನಾಮಂಗಳ್
ನರ ತಾ ಪಠಿಸಲ್ ಧರೆಯೋಳ್
ದುರಿತ ಸಂಕಷ್ಟವಳಿದು ಸುಖಸಂಪದ ಮಪ್ಪುದು

ಶಿವತತ್ವ ನೆಲೆ ತಿಳಿದ ಶುಭ ವರವೇ
ಶಿವನಪ್ಪಣೆಯಂತೆ ಧರೆಗೆ ವರವಾಗಿ ಮಹಾಂತೇಶಾ ||೧||

ಹರ ರೂಪಿ ಜಂಗಮರ ಪುಣ್ಯ ಗರ್ಭದಲಿ
ಧರೆ ಪಾಲಿಪುದಕ್ಕೆ ಅವತಾರವೆತ್ತಿ ನೀಂ ಮಹಾಂತೇಶಾ ||೨||

ರಾಗ ರಹಿತ ಯೋಗ ನಿರತ ಶಿವಯೋಗಿ
ಭೋಗ ದೂರ ತ್ಯಾಗ ಚರಿತ ಜನವಂದಿತ ಮಹಾಂತೇಶಾ ||೩||

ಇಂದುಧರನ ಭಾರವೆಲ್ಲ ನಿಮ್ಮದಾಯಿತಯ್ಯ
ಕುಂದು ಬಾರದಂತೆ ಪೊರೆವ ತಂದೆ ನೀವು ಮಹಾಂತೇಶಾ ||೪||

ಕರುಣ ನೋಟ ಹರನ ಸಾಟಿ ನೀನೆಯಪ್ಪಾ
ವರ ವೀರಶೈವ ಧರ್ಮಬಾಟ ಸಗ್ಗ ಸಾಟ ಮಹಾಂತೇಶಾ ||೫||

ಭಕ್ತಗಾಗಿ ಭಾವಶುದ್ಧಿ ನೀಡ ಬಂದಿರೈ
ಯುಕ್ತವಾದ ಸಲಹೆ ಇತ್ತು ತಂದೆ ಮಹಾಂತೇಶಾ ||೬||

ಆತ್ಮ ಬಲವ ಕಳೆದುಕೊಂಡು ಭವಕೆ ಬಂದೆ
ಆತ್ಮ ಬಲವ ನೀಡಿ ಕಾಯ್ವ ತಂದೆ ನೀವು ಮಹಾಂತೇಶಾ ||೭||

ನಿಮ್ಮ ರೂಪವನ್ನು ನಾನು ಅರಿಯದಾದೆ
ನಿಮ್ಮ ಪಾದ ನಂಬಿ ನಾನು ಉಳಿಯಬೇಕು ಮಹಾಂತೇಶಾ ||೮||

ಜೀವ ಭಾವ ಎಲ್ಲ ನಿಮ್ಮ ಚರಣದಲ್ಲಿ
ದೇವ ಮೂರ್ತಿ ನೀವೆ ಎಂದು ಭಾವ ಇರಿಸು ಮಹಾಂತೇಶಾ ||೯||

ನಿಮ್ಮ ಪಿತರು ವೀರಸಂಗಸ್ವಾಮಿ ಎಂದು
ನಿಮ್ಮ ಮಾತೆ ರಾಚವ್ವ ತಾಯಿ ಎಂದು ಮಹಾಂತೇಶಾ ||೧೦||

ಬಂಧು ಎಂದು ಮಡಿಮೋಳ ಭಗಿನಿ ಸಹಿತ
ಒಂದು ಗೂಡಿ ಪುಣ್ಯದುದರದಲ್ಲಿ ತಂದೆ ಮಹಾಂತೇಶಾ ||೧೧||

ವರುಷನೆಂಟು ಬಾಲಲೀಲೆ ತೋರುತಾ
ಹರುಷದಿಂದ ಕಳೆದೆಯಪ್ಪ ಯೋಗಿಪುಂಗ ಮಹಾಂತೇಶಾ ||೧೨||

ಬಾಲ್ಯದ ಲೀಲೆಯನು ತೋರಿ ಬೇವಿನ ಮರದ
ಮೂಲಗುಣ ಕಹಿ ಕಳೆದೆಯಪ್ಪ ಮಹಾಂತೇಶಾ ||೧೩||

ನಿರ್ಮಲ ಮನದಿ ನಿಜಗುಣರ ಕೈವಲ್ಯ
ನೇಮ ನಿಷ್ಠೆಯಲಿ ಅಂಕುರಿಸಲಾಗ ಮಹಾಂತೇಶಾ ||೧೪||

ಮಾಹೇಶ್ವರ ದೀಕ್ಷಾ ವಿಧಿಯಾಗೆ ಅಪ್ಪ
ಮಹೇಶನವತಾರ ಮಹಾಂತದೇವರೆನಿಸಿ ಮಹಾಂತೇಶಾ ||೧೫||

ಮೆಯು ಹತ್ತೊಂಭತ್ತರಂದು ಯಮ್ಮಯ್ಯ
ಪ್ರಾಯದ್ವಯ ಕಾಲದಲಿ ಪಟ್ಟಾಧಿಕಾರಿಯಾಗೆ
ಮಹಾಂತೇಶಾ ||೧೬||

ಲಿಂಗ ನಿಷ್ಠೆಯಲಿ ವೈರಾಗ್ಯ ವೃತ್ತಿಯಲಿ
ಭಂಗವಿಲ್ಲದ ರೀತಿಯಲಿ ಮುಂದಾದೆಯಪ್ಪಾ ಮಹಾಂತೇಶಾ ||೧೭||

ಅಮರಕೋಶ ಮಾನ್ಯವಾಗೆ ಜಂಗಮೇಶಾ
ಅಮಿತರಲ್ಲಿ ಕಂಠಪಾಠ ತಳಹದಿಯಾಗೆ ಮಹಾಂತೇಶಾ ||೧೮||

ತಂದೆಯೇ ಗುರುವು ಮಾತೆಯೇ ಮಾರ್ಗದಾತೆ
ಒಂದುಗೂಡಿ ಆಚಾರಕ್ಕೆ ಅನುವು ಮಹಾಂತೇಶಾ ||೧೯||

ಕಾಲಧರ್ಮವ ಮೀರಿ ದಾಯಾದಿ ಮಾತ್ಸರ್ಯ
ಮೂಲ ಮಠದಾಸ್ತಿಯಲಿ ಇಬ್ಭಾಗ ಬಯಸಿ ಮಹಾಂತೇಶಾ ||೨೦||

ವೈರಾಗ್ಯ ಮುನ್ನುಗಿ ತಪೋಬಲದಾಸೆ ಮಾಡಿ
ಅರುವಿನಲಿ ಮೈದೂರಿ ಸ್ಥಾನ ಬಿಟ್ಟರೈ ಮಹಾಂತೇಶಾ ||೨೧||

ಸರಿಕರೆಲ್ಲರ ಇರಿದಾಟ ಹಿರಿಕಿರಿದೆಂಬ ಭೇದ
ಸರಿಸರಿದು ಬರುತಿರಲು ಆಸೆ ಅಳಿದು ಮಹಾಂತೇಶಾ ||೨೨||

ಮೂಲಸ್ಥಾನ ಮರೆತವರು ಮುದಕವಿಯಲ್ಲಿ
ಬಲಯುತ ಯೋಗ ಸಾಧನೆಯಲ್ಲಿ ಮಹಾಂತದೇವರಾಗಿ
ಮಹಾಂತೇಶಾ ||೨೩||

ಮುದಕವಿಯ ಮಾರ್ಗದಲಿ ಕುದುರೆಯ ಮೇಲೇರಿ
ಮುದ್ದು ಶಿವಲಿಂಗಯ್ಯನೊಡನೆ ನಡೆಲಾಗ ಮಹಾಂತೇಶಾ ||೨೪||

ಎರಿ ತೇಜಿಯನೇರಿ ಸಾಗಿರೆ ಮಬ್ಬುಗತ್ತಲೆ
ತೂರಿ ಆವರಿಸಿ ಭಯವು ತಾ ಮುಂದಾಗಿ ಮಹಾಂತೇಶಾ ||೨೫||

ಯಾರಿಲ್ಲದಾ ಇರುಳು ಹೆಬ್ಬುಲಿಯ ಘನ
ಘೋರ ಅರ್ಭಟ ಬೆಟ್ಟವನೇ ಬೇಧಿಸಿತು ಮಹಾಂತೇಶಾ ||೨೬||

ಚಿಟ್ಟನೇ ಚೀರಿದನು ಮುದ್ದು ಶಿವಲಿಂಗಯ್ಯ
ಬಿಟ್ಟಗಲದಂತೆ ಅಪ್ಪಿ ತಾ ನಿಮ್ಮನ್ನು ಮಹಾಂತೇಶಾ ||೨೭||

ಧೈರ್ಯವನೇ ಪೇಳುತ್ತ ಶಿವಲಿಂಗಯ್ಯಗೆ
ಕ್ರೌರ್ಯವನೇ ಮರೆಯಿಸಿದಿ ಹುಲಿರಾಯಗೆ ಮಹಾಂತೇಶಾ ||೨೮||

ಮುಂಗಾಲು ಮಣಿಸುತ್ತ ತಲೆ ಬಾಗಿ ನಮಿಸುತ್ತ
ಭಂಗ ತಾರದೆ ಮರೆಯಾದ ಹುಲಿರಾಯ ಮಹಾಂತೇಶಾ ||೨೯||

ಅಂದಿನಾ ಸವಿ ಘಟನೆ ಚಂದದಲಿ ತಿಳಿಯುವದು
ಇಂದಿನಾ ಲಿಂಗಯ್ಯನವರ ತೊಂಭತ್ತು ವಯದಲ್ಲಿ
ಮಹಾಂತೇಶಾ ||೩೦||

ಕಳೆದು ಆರೆಂಟು ವರುಷ ಮುದಕವಿಯಲ್ಲಿ
ಇಳೆಯೊಡೆಯ ಪೇಳಿದನು ಕನಸಲ್ಲಿ ಮಹಾಂತೇಶಾ ||೩೧||

ದುರುದುಂಡ ಪ್ರೀತಿಯಲಿ ಸಂಸ್ಕೃತವದು ತಿಳಿಯಲೆಂದು
ಅರಭಾವಿ ಮಠದರಸು ಶಿವಲಿಂಗಸ್ವಾಮಿಗಳಲಿ ಮಹಾಂತೇಶಾ ||೩೨||

ಗುರುದೊರೆಯ ಮೊರೆ ಹೊಕ್ಕು ಮನದಾಸೆಯಂತೆ
ಅರುವಿನಾ ಕಣ್ಣಾಗಿ ಗುರುಚರಣ ಸೇವೆಯಲಿ ನೀಂ
ಮಹಾಂತೇಶಾ ||೩೩||

ಮನವಮುಟ್ಟಿ ದುಡಿಯುತ್ತ ಗುರುಕೃಪೆಗೆ
ಮಾನ ಸಿಧಿ ಎನಿಸಿ ಮಹಿಮಾಶಾಲಿಯಾದೆಯಪ್ಪಾ
ಮಹಾಂತೇಶಾ ||೩೪||

ಜಂಗಮೇಶ ಯೋಗಿಪುಂಗ ಶಿವಲಿಂಗ ಸ್ವಾಮಿಗಳು
ಲಿಂಗೈಕ್ಯ ಪೂರ್ವದಲ್ಲಿ ಪಾವನಾಂಗ ಮಹಾಂತೇಶಾ ||೩೫||

ಮಠದ ಕಾರಭಾರವೆಲ್ಲ ನಿಮ್ಮ ಭಾರವೆಂದು
ಕೊಟ್ಟರಾಗ ಶಿಷ್ಯವರ ನಿಷ್ಠಾಮೂರ್ತಿ ನೀಂ ಮಹಾಂತೇಶಾ ||೩೬||

ಬಿದ್ದ ಭಾರವೆಲ್ಲ ಶುದ್ಧ ಮನದಿ ಗೆಲಿಯುತ
ಶಿದ್ಧಲಿಂಗರ ಶಿಷ್ಯ ವರವೆನಿಸಿ ನೀಂ ಮಹಾಂತೇಶಾ ||೩೭||

ಜಂಗಮೇಶ ಯೋಗಿ ವರ ಗುರುಮೂರ್ತಿ ಶಿದ್ಧಲಿಂಗರು
ಲಿಂಗ ಸಂಗ ಪಿಡಿವ ಪೂರ್ವದಲ್ಲಿ ಪುಣ್ಯಮೂರ್ತಿ
ಮಹಾಂತೇಶಾ ||೩೮||

ಅಧಿಕಾರ ವಹಿಸಲೆಂದು ಪೇಳಲಾಗ ಗುರು
ಶಿದ್ಧಲಿಂಗ ಸೇವೆಯೊಂದೆ ಸಾಕು ಎಂದೇ ಮಹಾಂತೇಶಾ ||೩೯||

ನಿಷ್ಠೆ ನೇಮದಲಿ ಗುರುಸೇವೆ ಉಳಿಯಲೆಂದು
ಇಷ್ಟ ಪಟ್ಟು ಅಂಗಲಾಚಿದಿಯಪ್ಪ ತಂದೆ ಮಹಾಂತೇಶಾ ||೪೦||

ಕಾಲ ಮೂಲ ಮುಂದಾಗಿ ಯೋಗಿ ಶಿದ್ಧಲಿಂಗ ದೇವರು
ಕಾಲ ಮೂಲ ಪುರುಷ ಶಿವನ ಸನ್ನಿಧಾನಕೆ ತೆರಳಿ
ಮಹಾಂತೇಶಾ ||೪೧||

ಹೇಳತೀರದಷ್ಟು ಆಘಾತ ದುಃಖ ಅನುಭವ
ಮೇಳಲಿಲ್ಲದ ರೀತಿಯಲಿ ಅಪರಿಸಿತಲ್ಲ ತಂದೆ ಮಹಾಂತೇಶಾ ||೪೨||

ಬರಿದಾದ ಮಠದಲ್ಲಿ ಹಿರಿಯ ಪಟ್ಟದ ಕಾರ್ಯ
ಗುರಿ ಮುಟ್ಟಲೆಂದು ಭಕ್ತ ವೃಂದವೆಲ್ಲ ಮಹಾಂತೇಶಾ ||೪೩||

ಒಮ್ಮತದ ಜಯಧ್ವನಿ ಗಗನವೇ ಭೇದಿಸಿ
ಸಮ್ಮತಿಯ ಬಯಸಿದರು ಯಮ್ಮಯ್ಯ ನಿಮ್ಮಲ್ಲಿ
ಮಹಾಂತೇಶಾ ||೪೪||

ಆದರೂ ಗುರು ಕಾರ್ಯ ಮನಮುಟ್ಟಿ ಮಾಡಿದಿರಿ
ಭೇದ ಭಾವ ಅಳಿದು ಸೇವಾ ಭಾವದಿಂ ನೀಂ ಮಹಾಂತೇಶಾ ||೪೫||

ಯರಗಟ್ಟಿ ದೇಸಾಯಿಣಿ ತಾಯಿ ಗಟ್ಟಿ ಹಿಡಿದರು
ಪರಮ ಭಕ್ತಿಯಲಿ ಸಾಷ್ಟಾಂಗವೆರಗಿ ಮಹಾಂತೇಶಾ ||೪೬||

ಒಂದಿನದ ಒಪ್ಪತ್ತು ಹಾಕಿದಾ ಸಾಷ್ಟಾಂಗ
ಮುಂದುವರೆಯಲಾಗ ಭಕ್ತ ಪಾಶದಲಿ ನಿಂ ಮಹಾಂತೇಶಾ ||೪೭||

ಸೆರೆಯಾಗಿ ಸುತ್ತೆಲ್ಲ ಬಯಕೆ ಹೊತ್ತ ಭಕ್ತರಿಗೆಲ್ಲ
ಗುರು ಕಾರುಣ್ಯ ನಿಧಿಯಾಗಿ ಪಟ್ಟಾಧಿಕಾರ ಒಪ್ಪಿಗೆ
ಮಹಾಂತೇಶಾ ||೪೮||

ಸತ್ಯ ಶಿವನ ಪಥವ ಪಿಡಿದು ಪುಣ್ಯ ಮೂರ್ತಿ
ನಿತ್ಯ ದಾಸೋಹ ಕಾರ್ಯದಲಿ ಮಹಾಂತೇಶಾ ||೪೯||

ಗೆದ್ದೆಯಪ್ಪ ಭಕ್ತರಳವ ನಿಷ್ಠೆಯಿಂದ
ಬಿದ್ದ ಜಿದ್ದು ಮಾಯವಾಗಿ ಶಾಂತ ಬೀಡು ಮಹಾಂತೇಶಾ ||೫೦||

ರಬಕವಿಯ ವ್ಯಾಜ್ಯ ತಾ ಬಯಲಾಗಿ
ಶುಭಕಾರ್ಯ ನಿರ್ವಿಘ್ನದಿಂ ಸಾಗಿತ್ತೈ ಮಹಾಂತೇಶಾ ||೫೧||

ಬಿಟ್ಟು ಬಿಡದೇ ಸಂಚಾರ ಕಾರ್ಯದಿಂ ಶಾಖಾ
ಮಠಗಳ ಉತ್ತೀರ್ಣತೆಯ ಹೊಣೆ ಹೊತ್ತು ನಿಂ
ಮಹಾಂತೇಶಾ ||೫೨||

ಆಗಲಾಗಲೇ ಮರಿ ದೇವರಾಶೆ ತಾ ಉದ್ಭವಿಸಿ
ಯೋಗಿ ಪುಂಗವ ಶೋಧನೆಯು ಸಾಗಿತ್ತೈ ತಂದೆ
ಮಹಾಂತೇಶಾ ||೫೩||

ಚನ್ನಬಸವ ಶಾಸ್ತ್ರಿಗಳ ಚಿರ ಪರಿಚಯದ ವಟು
ಆನಂದ ಮೂರ್ತಿ ಶಿವಾನಂದ ಸ್ವಾಮಿಗಳಿಗೆ ಮಹಾಂತೇಶಾ ||೫೪||

ಅರಭಾವಿ ಮಠದ ಅಧಿಕಾರ ವಹಿಸಿ ಕೊಟ್ಟವರು
ಆರಿಲ್ಲದ ಹಳ್ಳದಾ ಗದ್ದುಗೆಯ ಬಳಿಯಲ್ಲಿ ನಿಂ ಮಹಾಂತೇಶಾ ||೫೫||

ಸುತ್ತೆಲ್ಲ ಭಕ್ತವೃಂದದ ಪರಿಚಯುವ ಮಾಡುತಲಿ
ಮತ್ತಿತರ ಆಶೆ ಆಕಾಂಕ್ಷೆಗಳ ಅಳಿದು ನಿಂ ಮಹಾಂತೇಶಾ ||೫೬||

ದುರದುಂಡೇಶ್ವರರು ಅನುಷ್ಠಾನ ಗೈದ ಸ್ಥಾನಕ್ಕೆ
ಗುರು ಕೃಪಾ ಬಲಿದ ಅಪೇಕ್ಷೆಗಾಗಿ ನಿಂ ಮಹಾಂತೇಶಾ ||೫೭||

ಶಿವಾನಂದ ಮರಿ ದೇವರಿಗೆ ಅರಭಾವಿ ಮಠದಲ್ಲಿ
ಶಿವಾನುಭವ ಗೋಷ್ಠಿಯಲಿ ಬಿಟ್ಟು ನಿಂ ಮಹಾಂತೇಶಾ ||೫೮||

ಗದ್ದುಗೆಯ ಬಳಿಯಲ್ಲಿ ಜಪತಪ, ಯೋಗಾನುಷ್ಠಾನ
ಎದ್ದೇಳುವ ಮುನ್ನ ಸಾಗಿತ್ತೈ ಎಡೆ ಬಿಡದೆ ಮಹಾಂತೇಶಾ ||೫೯||

ಅಲ್ಲಿಯೂ ಬಿಡದೇ ಭಕ್ತ ಸಮೂಹವದು ಮುನ್ನುಗ್ಗಿ
ಎಲ್ಲರೂ ಒಡಗೂಡಿ ಸಾಗಿ ಬಂದು ಪೇಳಿದರೈ ಮಹಾಂತೇಶಾ ||೬೦||

ಮುರುಗೋಡ ಮಠಕ್ಕೆಂದು ಅಪ್ಪಯ್ಯ ನಿಮ್ಮಯ
ಗುರುಕೃಪಾ ದೃಷ್ಟಿ ಬೇಕೆಂದು ವತ್ತ್ರಾಯ ಮಹಾಂತೇಶಾ ||೬೧||

ಭಕ್ತರಾಶಿಯು ಮೀರದೇ ಮುರುಗೋಡ ಕರಿತವರು
ಯುಕ್ತವಾದ ಕಾರ್ಯ ಸಾಧನೆಗೆಂದು ನಿಂ ಮಹಾಂತೇಶಾ ||೬೨||

ಅನ್ಯರಿಂದ ಆಳಿಗಾಲ ಕಂಡಂಥ ಶ್ರಾವಣ
ಪುಣ್ಯಾತ್ಮ ತಮ್ಮಿಂದ ಮುರುಗೋಡ ಮಠದಲ್ಲಿ ಮಹಾಂತೇಶಾ ||೬೩||

ಹಿತ ವಚನ ಹಿತ ಬೋಧೆ ಅತಿಯಾಗಿ
ಸ್ತುತಿ ನಿಂದೆ ಮರೆಯುವ ಮತಿ ನೀಡಿದಾತ ನಿಂ ಮಹಾಂತೇಶಾ ||೬೪||

ಪ್ರತಿ ವರುಷ ಅತೀ ರಮ್ಯ ಶ್ರಾವಣವು
ಕಥೆಯಾಗಿ ಶ್ರವಣದ ಪುಣ್ಯವು ನಿಮ್ಮಿಂದ ಮಹಾಂತೇಶಾ ||೬೫||

ಕಷ್ಟವನು ಲೆಕ್ಕಿಸದ ಸಂತುಷ್ಟ ನನ್ನಪ್ಪ
ಎಷ್ಟೊಂದು ತೊಂದರೆ ತಾತಯ್ಯ ಹೇಳಪ್ಪ ಮಹಾಂತೇಶಾ ||೬೬||

ಅರ್ಥದ ಆಸೆಯು ಪಾರ್ನಟ್ಟೆ ಗುರುಪಾದ ಮುಂದಾಗಿ
ವ್ಯರ್ಥದಲಿ ವ್ಯಾಜ್ಯವು ತಮ್ಮೊಡನೆ ಸಾಗಿತ್ತೈ ಮಹಾಂತೇಶಾ ||೬೭||

ಹರನಿಂದ ಋಣ ಮುಟ್ಟೆ ಚಿರಶಾಂತಿ
ಮುರಿದವು ಕೈ ಕಾಲು ಗುರುಪಾದಗೆ ಮಹಾಂತೇಶಾ ||೬೮||

ಗತಿಗೆಟ್ಟು ಹರಣವು ಹಾರಿತು
ಮತ್ತೆ ಕೊಟ್ಟೆ ಮಹಾದೇವ ನೀನಾದಿ ಮಹಾಂತೇಶಾ ||೬೯||

ಮಿಥ್ಯದ ಉಸಿರನ್ನು ಸತ್ಯ ಸಾಕ್ಷಿಯಲ್ಲಿ
ನಿತ್ಯ ಖಂಡಿಸಿದ ಉತ್ತಮ ಗುರುಮೂರ್ತಿ ಮಹಾಂತೇಶಾ ||೭೦||

ಹತ್ತಂಗಡಿ ಮುನಿಸುಫ ತರ ತರದಿ ಪೇಳಿ
ಹಿತವಾಗುದೆನ್ನುತ್ತ ಹುಸಿ ನುಡಿಯು ಬೋಧಿಸಲು
ಮಹಾಂತೇಶಾ ||೭೧||

ನ್ಯಾಯದ ಗಳಿಕೆ ಸ್ಥಿರವೆಂದು ಉಸುರುತ್ತ
ದಯ ಧರ್ಮ ಶಿವನಿಷ್ಠೆ ಎಂದವರು ಮಹಾಂತೇಶಾ ||೭೨||

ಹರತತ್ವ ನೆಲೆ ತಿಳಿದ ಶುಭಕೀರ್ತಿ
ವಿರುಪಾಕ್ಷ ಬೆಂಬಳಗಿ ಶಹಾಪೂರ ಮಹಾಂತೇಶಾ ||೭೩||

ಹೊತ್ತಿಗೆ ಅಚ್ಚಾಗಿ ವೆಚ್ಚಕೆ
ಇತ್ತರು ದುರುದುಂಡ ಪರಿಚಯ ಮಹಾಂತೇಶಾ ||೭೪||

ಪಾವನ ಭಕ್ತಿಯ ಕಾಣಿಕೆ ಇದು ಎಂದು
ಶಿವಲೀಲೆಯಂಥ ಪುಣ್ಯ ಪುರಾಣ ಸಿದ್ಧವಾಗೆ ಮಹಾಂತೇಶಾ ||೭೫||

ಧರ್ಮ ವೈರಾಗ್ಯ ಸಂಪತ್ತು ಮುನ್ನುಗ್ಗಿ
ಧಾರ್ಮಿಕ ಕಾರ್ಯವು ಎಡ ಬಿಡದೇ ನಡೆದಿರಲು
ಮಹಾಂತೇಶಾ ||೭೬||

ಉಸುಕಿನ ಬೆನಕಪ್ಪ ಉದರದಿ
ನಸುಕಿನ ಶಿವಪೂಜೆ ಸಾಗಿತ್ತು ಮಹಾಂತೇಶಾ ||೭೭||

ಹರನಾಜ್ಞೆ ಇದು ಎಂದು ತ್ವರಿತದಲಿ
ಮುರುಗೋಡ ವಾಸ ಸಿರಿ ಕರುಣಾಳು ಮಹಾಂತೇಶಾ ||೭೮||

ಪಾಮರ ಭೂಮಿಯು ಪಾವನಗೊಂಡಿತು
ನೇಮದಲಿ ಹೊಸ ಕಳೆಯು ಹೊಸ ರೂಪ ಮಹಾಂತೇಶಾ ||೭೯||

ಅಚ್ಚರಿಯು ನಿನ್ನ ಲೀಲೆ ಲೀಲಾತ್ಮ
ಅಜ್ಜಪ್ಪ ನಿರ್ಮ್ಮಿತ್ಯೆ ಶಿವನಿಷ್ಠೆ ಮಹಾಂತೇಶಾ ||೮೦||

ಹರಗುರು ಚರ ಮೂರ್ತಿ ಸಕಲರು
ಖರಮಾಡಿಕೊಂಡರು ಸ್ನೇಹದಿ ಮಹಾಂತೇಶಾ ||೮೧||

ಹಟ್ಟಿಯೊಳಗಿ ಮೂಕಪ್ಪ ಅಜ್ಜಪ್ಪನವರು
ದಿಟ ಪುರುಷ ನಿಮ್ಮನ್ನು ಅರಿತವರು ಮಹಾಂತೇಶಾ ||೮೨||

ನಿಮ್ಮಯ ಪಾದಕ್ಕೆ ಸಾತವ್ವ ತಾಯಿ ತಾ
ಒಮ್ಮದಿ ಬಾಗುತ್ತ ಬೇಡಿದಳು ಮಹಾಂತೇಶಾ ||೮೩||

ದೀರ್ಘಸುಮಂಗಲೆ ಎನ್ನುತ್ತ ಗದ್ದೆಯಪ್ಪ
ದುರ್ಗವು ಕಾಯಿಲೆಯು ಕಾಲನಿಂದ ನೀಂ ಮಹಾಂತೇಶಾ ||೮೪||

ಹುಸಿಯಲ್ಲ ನಿಮ್ಮೊಚನ ದಿಟವಾಯ್ತು
ವಿಷುಕಾಡ್ಡ ಬಾಳಪ್ಪ ಮನೆಯಲ್ಲಿ ತಾ ಮಹಾಂತೇಶಾ ||೮೫||

ಸಾತವ್ವ ಮುತ್ತೈದೆ ಸಾವಿತ್ರಿ
ಪತಿ ಮೊದಲೆ ಲಿಂಗೈಕ್ಯಳಾದಳಲ್ಲಿ ಮಹಾಂತೇಶಾ ||೮೬||

ಮಠಕಾಗಿ ಕಾಂಕ್ರೀಟ್ ಹಾಕಲೆಂದರು ಭಕ್ತರು
ತಟ್ಟನೆ ಮಳೆರಾಯ ಕಂಡನಲ್ಲಿ ಮೋಡದಲಿ ಮಹಾಂತೇಶಾ ||೮೭||

ಆರ್ಭಟ ದಾಟದಲಿ ತುಂಬಿ ನಿಂತಿರಲು
ಇಬ್ಬಗೆಯ ಸಂಕಟವು ಭಕ್ತರಿಗೆ ಮಹಾಂತೇಶಾ ||೮೮||

ಲಿಂಗ ಪೂಜೆಯನು ತೀರಿಸಿ ಮುಖವ ಮೇಲೆತ್ತಿ
ಭಂಗವ ತಾರದೆ ಸುಖ್ಯವಿರಲೆಂದೆಯಪ್ಪ ಮಹಾಂತೇಶಾ ||೮೯||

ಹೆದರಿದನು ನಿಮ್ಮಯ ತೇಜಕ್ಕೆ ಮಳೆರಾಯ
ಬೆದರಿದನು ಮಠಬಿಟ್ಟು ವೈಲಾಚೆ ಹೋಗುತ್ತ
ಮಹಾಂತೇಶಾ ||೯೦||

ಸುತ್ತೆಲ್ಲ ಗುಡು ಗುಡಿಸಿ ಜಡಿ ಮಳೆಯು
ಇತ್ತೆಲ್ಲ ಕಾಂಕ್ರೀಟು ಮುಕ್ತಾಯ ಕಾಣಾ ಮಹಾಂತೇಶಾ ||೯೧||

ಮತ್ತೊಮ್ಮೆ ಸ್ನೇಹಕ್ಕೆ ಸಹಾಯದಿ ಬಂದು
ಇತ್ತನಲ್ಲಿ ತಾ ನೀರನ್ನು ಕಾಂಕ್ರೀಟಿಗೆ ಮಹಾಂತೇಶಾ ||೯೨||

ಯಡೆಯೂರ ಶ್ರೀ ಕ್ಷೇತ್ರ ದರ್ಶನಕೆ ಸಾಗಿದವರು
ಒಡೆಯ ಸಿದ್ಧಲಿಂಗ ದೇವರ ಬಳಿಯಲ್ಲಿ ನಿಂ ಮಹಾಂತೇಶಾ ||೯೩||

ಲಿಂಗ ಪೂಜೆಯಲ್ಲಿ ತೃಪ್ತರಾಗೆ ಸ್ವಾಗತವೆಂದು
ತುಂಬ ಹೂವು ಸುರಿದಾಗ ಶಿವಯೋಗಿ ನಿಮ್ಮಡಿಗೆ
ಮಹಾಂತೇಶಾ ||೯೪||

ಒಡೆಯ ಶಿದ್ಧಲಿಂಗನನ್ನು ಕಂಡು ಬಂದ ಸ್ವಾಮಿ
ಅಡಿ ಪಿಡಿದ ಶಿದ್ದಸುತನ ಸೇವೆಯನ್ನು ಸ್ವೀಕರಿಸು
ಮಹಾಂತೇಶಾ ||೯೫||

ಯೋಗ ನಿಷ್ಠೆಯಲ್ಲಿ ಧರ್ಮ ಜಾಗೃತಿಯಲ್ಲಿ
ಭೋಗ ದೂರ ಮಾಡಿ ತ್ಯಾಗಿಎನಿಸಿದಂಥ ಮಹಾಂತೇಶ ||೯೬||

ಮೂರು ಕಾಲ ಲಿಂಗಪೂಜೆಯಲ್ಲಿ ನೀನು
ಆರು ಮೂರು ಇರಿದಂಥ ಹರನ ರೂಪಿ ಮಹಾಂತೇಶಾ ||೯೭||

ಮೂಲ ಗುರಿಯು ಮರೆಯುದಂತೆ ನಿಂ
ಕಾಲ ಕಾಲದಲ್ಲಿ ಧರ್ಮ ಬೋಧೆ ಇತ್ತೆಯಪ್ಪ ಮಹಾಂತೇಶಾ ||೯೮||

ಲಿಂಗಲೋಲರಾಗಿ ಶರಣ ಸತಿ ಲಿಂಗ ಪತಿ
ಎಂಬ ತತ್ವದಲಿ ಏಕಾಂತ ಲಿಂಗ ಪೂಜೆ ಮಹಾಂತೇಶಾ ||೯೯||

ಲಿಂಗ ಐಕ್ಯ ಪೂರ್ವದಲ್ಲಿ ಶಿವಾನಂದ ದೇವರಿಗೆ
ಮುಂದಾಗಿ ಮುರುಗೋಡ ಮಠದ ಅಧಿಕಾರ ಮಹಾಂತೇಶಾ ||೧೦೦||

ಶಿವನ ಆಜ್ಞೆಯಂತೆ ಕರ್ತವ್ಯ ಮುಗಿಸಿದಂತೆ
ಶಿವ ಸಾಯುಜ್ಯ ಪಠ ಮುಂದಾಯಿತಲ್ಲ ತಂದೆ ಮಹಾಂತೇಶಾ||೧೦೧||

ಮೂಡಿ ಬಾ ತಂದೆ ಮತ್ತೊಮ್ಮೆ ಧರ್ಮ ಪಾಲಕಾ
ಬೇಡಿ ಕೊಳ್ಳುವ ಭಕ್ತ ತಿಂಥಿಣಿಯ ರಕ್ಷಕ ಮಹಾಂತೇಶಾ ||೧೦೨||

ಭಕ್ತರೆಲ್ಲ ನಿಮ್ಮ ಬರುವ ನಿರೀಕ್ಷೆಯಲ್ಲಿ
ಮುಕ್ತ ಮನದಿ ಬೇಡುತಿಹರು ಶಿವನಲ್ಲಿ ಮಹಾಂತೇಶಾ ||೧೦೩||

ಭಕ್ತ ಪಾಲನೆ ಶ್ರೀಲಿಂಗ ಪ್ರೇಮಿಯೇ (ಲೋಲನೆ)
ಮುಕ್ತಿ ಪಥವ ಕರುಣಿಸಲು ಬೆಳಗು ಬಾ ಭೂಮಿಯು
ಮಹಾಂತೇಶಾ ||೧೦೪||

ಜಯ ಜಯವೆಂದು ಜಯಸ್ತುತಿಯಲ್ಲಿ
ಭಯ ಭಕ್ತಿಯಿಂದ ವೀರ ಅರಿಸಿ ಬರೆಯುತಿಹ
ಮಹಾಂತೇಶಾ ||೧೦೫||

ಜಯ ಜಯತು ಯೋಗಿ ಶಿವಯೋಗಿ
ಜಯ ಜಯತು ಗುರು ಶರಣ ಕರುಣ ಮಹಾಂತೇಶಾ ||೧೦೬||

ಜಯ ಜಯತು ಭಕ್ತ ಪಾಲನ ಸ್ವಾಮಿಯೇ
ಜಯ ಜಯತು ಭಕ್ತ ಕರುಣ ಮಹಾಂತೇಶಾ ||೧೦೭||

ಜಯವೆಂದು ಜಯಕಾರ ಹೇಳುವ ವೀರನಾಸೆಯ
ಜಯ ಧ್ವನಿಗೆ ಓಗೊಟ್ಟು ಬಾರಯ್ಯ ಬಾ ತಂದೆ
ಮಹಾಂತೇಶಾ ||೧೦೮||

ಓಂ ಶಾಂತಿ ಶಾಂತಿ ಶಾಂತಿಃ

ಫಲಶ

ಇಂತು ನೂರೆಂಟು ಶುಭ ನಾಮಂಗಳ್
ಪಠಿತ ನರ ತಾ ಧರೆಯೊಳ್
ಶುಭ ಸತ್ಕೀರ್ತಿ ಪಡೆಯುವರ್
ನಿಶ್ಚಲವಿದು. ನಿಶ್ಚಲವಿದು. ನಿಶ್ಚಲವಿದು.
ಶಿವ್ವಸುತ ವೀರನ ಭಕ್ತಶ್ರದ್ಧಾವಚನವಿದು



# ವಚನ ಪದ್ಯಗಳು

## ಕರುಣಾಳು ಮುರುಗೋಡ ಈಶಾ

ಕರುಣಾಳು ಮುರುಗೋಡವಾಸಾ । ಶಿವಯೋಗೀಶಾ ॥ ಪ ॥
ಪೊರೆಯೋ ಹೇ ಮಹಾಂತೇಶಾ ।
ಕರುಣಾಳು ಮುರುಗೋಡವಾಸ ಸಿರಿಯೇ । ತವುಗಾರು ಸರಿಯೇ
॥ ಅ. ಪ ॥

ಬಾಂಧಳದ ಕರುಣೆ ಅಂಗ ಲಿಂಗದಲ್ಲಿ ಪ್ರೇಮವ ತೋರಿ ।
ಚಂದ್ರ ಸೂರ್ಯರ ಪ್ರಭೆಯು ಓಂಕಾರದಲ್ಲಿ ಸೇರಿ ।
ಅಂತರಂಗ ಶುದ್ಧಿಗೆಲ್ಲ ನೀ ಚೇತನದ ಬೆಳಕು ಬೀರಿ ।
ಲಿಂಗ ಸಂಗದಲ್ಲಿ ಆತ್ಮದರವು ಕಾ ಸೂರಿ । ೧
॥ ಅ. ಪ ॥

ನಿಮ್ಮ ರೂಪವನ್ನು ನಾನು ತಿಳಿದು ನಡೆಯ ಬೇಕಯ್ಯಾ ।
ನಿಮ್ಮ ಪದವ ನಂಬಿ ನಾನು ಉಳಿಯ ಬೇಕಯ್ಯಾ ।
ಒಮ್ಮನದಿ ಜೀವ ಭಾವ ನಿಮ್ಮ ಪಾದ ಕಾಣಲಯ್ಯಾ ।
ಹಮ್ಮು ಹರಿದು ಬಾಳುವಂತೆ ಬೋಧೆ ನೀಡಯ್ಯಾ । ೨
॥ ಅ. ಪ ॥

ತಪ್ಪು ಮಗುವು ಮಾಡಿತೆಂದು ಕ್ಷಮಿಸಿ ಅಪ್ಪಿಕೊಂಡು
ಅಪ್ಪ ನೀವು ಸಲುಹಿರೆಂದು ಬಿದ್ದು ಬೇಡಿಕೊಂಡೆ
ಒಪ್ಪುವಂತೆ ನಡೆಸು ಮುಂದೆ ಮತ್ತೆ ಅಪ್ಪಿಕೊಂಡು
ಸೊಪ್ಪು ಹಾಕದಂತೆ ಭಕ್ತಿ ಎಂಬ ಆಳದಲ್ಲಿ ಹಿಡಿದಿಟ್ಟುಕೊಂಡು ೩
॥ ಅ. ಪ ॥

ಕೋಪ ತಾಪಗಳು ಬಾರದಂತೆ ಎಚ್ಚರಿಸು ತಂದೆ
ಪಾಪ ಕಾರ್ಯಕ್ಕಂಜಿ ನಡೆವ ಮಾನವನಾಗಿ ಮಾಡು ತಂದೆ
ಶಾಪ ಶಕ್ತಿಯಲ್ಲಿ ಇರುವ ನಿಮ್ಮ ಭೀತಿ ಇಂದೇ
ತಾಪದರುವು ಸದಾ ಎಚ್ಚರಿಸುತಿರಲಿ ಎಂದು ಭಯ ಹುಟ್ಟಿಸೆಂದೇ ೪
|| ಅ. ಪ ||

ಸತ್ಯ ಸನ್ಮಾರ್ಗ ತೋರಿ ನಿತ್ಯ ನಿರ್ಮಲಗೊಳಿಸಯ್ಯಾ
ಮಿಥ್ಯಾಪವಾದ ಭ್ರಷ್ಟಾಚಾರ ಜೀವನ ನಾಶವಾಗಲಯ್ಯಾ
ನಿತ್ಯ ನೇಮ ಶಿವಾಚಾರ ಷಟಸ್ಥಲಗಳು ಬೆಳಗಲಯ್ಯಾ
ಸತ್ಯ ಕೀರ್ತಿ ನಿರ್ಮಲ ಮೂರ್ತಿ ನಿಮ್ಮ ನೆನಹು ನನಗಿರಲಯ್ಯಾ ೫
|| ಅ. ಪ ||

ಪದ್ಯರೂಪಿ ವಚನರೂಪಿ ನಾಮ ಸಂಕೀರ್ತನೆ
ಸಿದ್ಧ ಹಸ್ತ ನಿಮ್ಮ ರೂಪ ಶಿವನ ರೂಪ ಎಂಬ ಸಾಧನೆ
ಪದ್ಯದಲ್ಲಿ ಕಂಡು ವಚನದಲ್ಲಿ ನುಡಿದು ಭಜಿಪೆನು
ಗದ್ಯದಲ್ಲಿ ತಿಳಿದಂತೆ ಕೇಳಿದಂತೆ ನುಡಿವೆನು ೬
|| ಅ. ಪ ||



# ೪೮ ನೇ ಅಧ್ಯಾಯ

## ವಚನ ರೂಪದಲ್ಲಿ ಮಹಾಂತಸ್ವಾಮಿಗಳ ಚರಿತ್ರೆಯು

ಸಾಲಹಳ್ಳಿ ಸೀಮೆಯಲ್ಲಿ ಜನ್ಮವೆತ್ತ ತಾತಾ
ಸಾಲದಾದ ಕರ್ಮಭಾರ ಕಳೆಯ ಬಂದ ವೀರಶೈವ ಪಿತಾ
ಶೀಲವತಿ ರಾಚವ್ವ ತಾಯಿಯ ಉದರದಿ ಪುಟ್ಟಿದಾತಾ
ಸಲೇ ವೀರಸಂಗಯ್ಯ ಸ್ವಾಮಿಯವರು ಅಪ್ಪ ನಿಮ್ಮ ಜನ್ಮದಾತಾ ೧
|| ಅ. ಪ. ||

ವರುಷ ಎಂಟನು ತುಂಟತನದಿ ಕಳೆದೆಯಾ
ಹರುಷದಿಂದ ಪಿತೃವಾಕ್ಯ ಪಾಲಿಸುತ್ತ ಬೆಳೆದೆಯಾ
ಸರಿಕರೊಡನೆ ಸತ್ಯದುಸುರಿನಲ್ಲಿ ಸ್ಥಿರವೆಂದು ನಡೆದೆಯಾ
ಅರಿಸಿ ಬಂದ ಭಾಗ್ಯವನ್ನು ಪಡೆದು ನೀ ಯೋಗಿಯಾವೆಯಾ ೨
|| ಅ. ಪ. ||

ಬಾಲ ಲೀಲೆಯಲ್ಲಿ ಬೇವಿನ ತೊಪ್ಪಲವು ಸಿಹಿಯಾಯಿತು
ಬಲ್ಲವರೆಲ್ಲ ಬೆರಗಾಗಿ ಮಹೇಶನವತಾರ ಎನ್ನುವದಾಯಿತು
ಕಾಲ ಧರ್ಮದಲ್ಲಿ ಮೂಲ ಧರ್ಮ ತಿಳಿದು ಸಾಗುವದಾಯಿತು
ಎಲ್ಲ ಆಸ್ತಿ ಪಾಸ್ತಿ ಮಠದ ಅಧಿಕಾರ ಸರಿಕರಿಗೆ ಬಿಡುವದಾಯಿತು ೩
|| ಅ. ಪ. ||

ಕಾಲ ಕಾಲಕ್ಕೆ ತೇಜಿಯನ್ನೇರಿ ಸಂಚಾರ ಸುರುವಾಯಿತು
ಬಾಲ ಶಿವಲಿಂಗಯ್ಯ ನಿಮ್ಮ ಸೇವೆಗೆಂದು ಬಂದುದಾಯಿತು
ಹುಲಿರಾಯ ಬೆನ್ನಟ್ಟಿ ಬಂದು ಅಡ್ಡೈಸಿ ನಿಲ್ಲುದಾಯಿತು
ನಿಲ್ಲಯ್ಯ ವ್ಯಾಘ್ರನೆ ಆಗ್ರಹ ಬೇಡ ಹೋಗೆಂದು ಪೇಳಲಾಯಿತು ೪
|| ಅ. ಪ. ||

ಗುಡುಗುತ್ತ ಬಂದ ಹುಲಿರಾಯನಂ ಕಂಡು
ಗಡಗಡನೆ ನಡುಗುತ್ತ ಶಿವಲಿಂಗಯ್ಯ ನಿಮ್ಮನಪ್ಪಿಕೊಂಡು

ಬಿಡದೇ ಚಿಟ್ಟನೆ ಚೀರಿದನು ಕೆಂಡದುಂಡಿಯಲಿ ಬಂದು
ಬಿಡಿಸುವ ವ್ಯಾಘ್ರರಾಯನ ಕಣ್ಣ ಕಂಡು ತಾ ಬೆವರ್‌ಗೊಂಡು ೫

|| ಅ. ಪ. ||

ಆರಿಲ್ಲದ ಇರುಳು ಹೆಬ್ಬುಲಿಯು ಘನ
ಘೋರ ಅರ್ಭಾಟ ಭೇಸಿಕಿತು ಅರಣ್ಯವನೆ
ಧೈರ್ಯವನೆ ಪೇಳುತ್ತ ಬೆದರದಿರು ಶಿವಲಿಂಗಯ್ಯನೆ
ಅರುವಿನಾ ದೃಷ್ಟಿಯಲ್ಲಿ ನೋಡಲಾಗ ಮರೆತು ಹುಲಿರಾಯ
ಕ್ರೌರ್ಯವನು ೬

|| ಅ. ಪ. ||

ಮುಂಗಾಲು ಮಣಿಸಿ ತಾ ತಲೆಬಾಗಿ ನಮಿಸಿ
ಭಂಗ ತಾರದೆ ಮರೆಯಾದ ಹುಲಿರಾಯ ಬೆಟ್ಟ ಭೇದಿಸಿ
ಲಿಂಗಯ್ಯನೊಡಗೂಡಿ ಸಂಚಾರ ಸಮಾಪ್ತಿಗೊಳಿಸಿ
ಜಂಗಮೇಶ ನೀ ಹೊರಟ ಸತ್ಕಾರ್ಯ ಯಶಸ್ವಿಯಾಗಿಸಿ ೭

|| ಅ. ಪ. ||

ಸರಿಕರ ಇರಿದಾಟಕ್ಕೆ ಸರ್ವವನು ತ್ಯಜಿಸಿದೆಯಪ್ಪಾ
ಅರಿತು ಇರವ ಮುದಕವಿಯ ಕುರಿತು ನನ್ನಪ್ಪಾ
ಹರಿದು ಸಂಸಾರ ಜಂಜಡವ ವೈರಾಗ್ಯದಿಂ ಹೊರಟೆಯಪ್ಪಾ
ಬೆರೆತು ಶಿವಯೋಗ ಸಾಧನೆಯಲ್ಲಿ ಸಾಫಲ್ಯ ಪಡೆದೆಯಪ್ಪಾ ೮

|| ಅ. ಪ. ||

ಕಳೆದು ಆರೆಂಟು ಮಾಸ ಮುದಕವಿಯಲ್ಲಿ
ಇಳೆಯೊಡೆಯ ಪೇಳಿದನು ಮುಂದಾಗಿ ಕನಸಿನಲಿ
ಬೆಳೆಯಬೇಕಯ್ಯಾ ಸಂಸ್ಕೃತಜ್ಞಾನ ಅರಭಾವಿ ಮಠದಲ್ಲಿ
ಏಳೇಳು ಎದ್ದೇಳು ವೀರಶೈವ ಘನ ಮಠ ಕೀರ್ತಿ ಬೆಳಗಲಿ ೯

|| ಅ. ಪ. ||

ಯೋಗಿಯಾಗಲೆಂದು ಶಿವಪೇಳಿ ಲಿಂಗದಲಿ ಬೆರೆಯುತ್ತ
ಭೋಗ ದೂರ ರಾಗ ರಹಿತ ಶಿವರೂಪ ಕಾಣುತ್ತ

ರಾಗದ್ವೇಷವಳಿದು ಶಿವಯೋಗ ಸಿದ್ಧಿ ಪಡೆಯುತ್ತ
ತ್ಯಾಗ ಜೀವಿಯಾಗಿ ದಾಸೋಹ ಧರ್ಮನೇ ಅರಿಯುತ್ತ ೧೦
|| ಅ. ಪ. ||

ಮಹಾಯೋಗಿ ಅರಭಾವಿ ಮಠದಲ್ಲಿ ಬೆಳೆಯ ಹೋಟಿಯಾ
ಮಹೇಶ ಅವತಾರಿ ಶಿವಯೋಗ ಸಾಧಿಸಿ ಪಿಡಿದೆಯಾ
ಮಹಾತ್ಮ ಶಿವಲಿಂಗ ಸ್ವಾಮಿಗಳನು ನೀ ಪಡೆದುಕೊಂಡೆಯಾ
ಮಹಿಮಾಶಾಲಿ ಎನಿಸಿ ಕಾರುಭಾರ ವಹಿಸಿ ನಡೆದೆಯಾ ೧೧
|| ಅ. ಪ. ||

ಲಿಂಗರೂಪವನ್ನು ಅರಿತು ಭಂಗ ಬಾರದಂತೆ ಸಾಗಿ
ಜಂಗಮಾರ್ಯ ಗುರುಗಳೀರ್ವರಲ್ಲಿ ನಡೆದೆಯಪ್ಪ ಬಾಗಿ
ಲಿಂಗ ಸಂಗದಲ್ಲಿ ಶಿವಲಿಂಗಸ್ವಾಮಿಗಳು ಪೋಗಿ
ತುಂಬಿ ಬಾರದಂಥ ಹಾನಿಯಂದು ಗುರು ಸಿದ್ಧಲಿಂಗಯೋಗಿ ೧೨
|| ಅ. ಪ. ||

ಗುರುಗಳಾಸೆಯಂತೆ ಅಧಿಕಾರ ವಹಿಸಲೆಂದು ಪೇಳಿಸಿ
ಹರನರೂಪವೆಂಬ ಗುರು ಸಿದ್ಧಲಿಂಗರನ್ನು ಅಧಿಕಾರದಲ್ಲಿರಿಸಿ
ಭಾರವೆಲ್ಲ ತಮ್ಮದೆಂದು ಅರಭಾವಿ ಮಠದ ಮೇಲ್ವಿಚಾರಕರೆನಿಸಿ
ಸರ್ವ ರೀತಿಯಿಂದ ಶ್ರಮಿಸಿ ಮಠದ ಉತ್ತೀರ್ಣತೆಯ ಬಯಸಿ ೧೩
|| ಅ. ಪ. ||

ಕಳೆದವೀಗ ಹತ್ತೆಂಟು ವರುಷ ಹರುಷದಲ್ಲಿ
ಬೆಳೆದು ಬಂತು ವೈರಾಗ್ಯ ಶಿವಯೋಗ ಸಾಧನೆಯಲ್ಲಿ
ಇಳೆಯಲ್ಲಿ ಗುರು ವಿರಕ್ತರ ಸತ್ಸಂಗ ದೃಷ್ಟಿ ಕೋನದಲ್ಲಿ
ಬೆಳೆದುನಿಂತ ನಿಜವೈರಾಗ್ಯ ಮೂರ್ತಿ ಅರಭಾವಿ ಮಠದಲ್ಲಿ ೧೪
|| ಅ. ಪ. ||

ಲಿಂಗ ಐಕ್ಯ ಪೂರ್ವದಲ್ಲಿ ಸ್ವಾಮಿ ಸಿದ್ಧಲಿಂಗರು
ತುಂಗ ಜಂಗಮಾರ್ಯ ನಿಮಗೆ ವೈರಾಗ್ಯದಾಸೆ ಮೂಡಿತೆಂದು

ಅಂಗ ಲಿಂಗ ಸಂಗದಲ್ಲಿ ಶಿವನ ನಿಜರೂಪ ಕಂಡರು
ಎಂದೆಂದೂ ಭಂಗ ಬಾರದಿರಲೆಂದೆ ಅಧಿಕಾರ ವಹಿಸ ಹೇಳಿದರು ೧೫
|| ಅ. ಪ. ||

ಗುರುವಿನಾಜ್ಞೆಯನ್ನು ಮನ್ನಿಸಿ ಅಧಿಕಾರದಾಸೆ ಮಾತ್ರ ತ್ಯಜಿಸಿ
ಗುರುಸೇವೆಯೊಂದೇ ಸಾಕು ಎಂದೆ ಶಿವಯೋಗ ಬಯಸಿ
ಆರರಿಯ ತೂರಿ ತಿರುವಿನಲಿ ಯೋಗಬಲ ಅಮರತ್ವ ಸಾಧಿಸಿ
ಗುರು ಸಿದ್ಧಲಿಂಗರು ಲಿಂಗ ಐಕ್ಯರಾಗೆ ಷಟಸ್ಥಲ ಬೋಧಿಸಿ ೧೬
|| ಅ. ಪ. ||

ಮರೆಯಾದ ಗುರುವಿಗಾಗಿ ಸೆರೆಯಾದೆ ವ್ಯಸನದಲ್ಲಿ
ಹರನ ಆಟವೆಂದು ಉಸುರುಗರೆದೆ ದುಃಖದಲ್ಲಿ
ಗುರುಗಳಾಸೆಯಂತೆ ಅಧಿಕಾರ ಪಿಡಿಯಲೆಂದು ಆಸೆ ಭಕ್ತರಲ್ಲಿ
ಸೆರೆಯಾಗುವದು ಅಸಾಧ್ಯವೆಂದೆಯಪ್ಪ ಅಧಿಕಾರ ಮೋಹದಲ್ಲಿ ೧೭
|| ಅ. ಪ. ||

ಸಿಟ್ಟು ಸೆಡವು ಮರೆತ ಅಪ್ಪಯ್ಯ ನಿಷ್ಠುರದಿ ಹೇಳಿದರು
ಗಟ್ಟಿ ಮನದ ಭಕ್ತಬಳಗವೆಲ್ಲ ಒಟ್ಟಾಗಿ ಕೂಡಿದರು
ಸಿಟ್ಟು ಸಿಟ್ಟನಿಂದ ಬಂದು ಮತ್ತೆ ಜಗದ್ಗುರುಗಳವರು
ಒಟ್ಟಾರೆ ಯರಗಟ್ಟಿ ದೇಸಾಯಿಣಿ ಸಾಷ್ಟಾಂಗ ಹಾಕಿದರು ೧೮
|| ಅ ಪ. ||

ಅಮಿತ ಕರುಣೆಯಮ್ಮಯ್ಯ ಅಪ್ಪಯ್ಯ ಒಪ್ಪುತಲಿ
ಅಮರ ಗುಣ ಶ್ರೇಷ್ಠತೆಯ ಪ್ರಭೆ ತಾ ಚಿಮ್ಮುತಲಿ
ನೇಮ ಪೂರ್ಣ ಪಟ್ಟಾಧಿಕಾರ ಸಾಂಗವಾಗುತಲಿ
ಸ್ವಾಮಿ ಎನಿಸಿ ಅರಭಾವಿ ಪುಣ್ಯತಾನ ಶ್ರೇಷ್ಠತೆಯಲಿ ೧೯
|| ಅ. ಪ. ||

ಉರುಳಿದವು ಹಲವಾರು ವರುಷ ಮಾಸಗಳು
ಕೊರಳ ಮಾಲೆಯಂದದಿ ಭಕ್ತರೆಡೆಗೆ ಸಂಚಾರ ಕಾರ್ಯಗಳು

ಮರುಳ ಮನುಜರ ದುರಿತ ಕಷ್ಟ ಪರಂಪರೆಗಳು
ಪರಿಯಲೆಂದಾಶಿಸಿ ಯಡ ಬಿಡದೆ ಬಂದು ತಾಪ ತಾಪತ್ರಯಗಳು ೨೦
|| ಅ. ಪ. ||

ಮಠದ ಉತ್ತರಾಧಿಕಾರಿ ಶೋಧನೆಯಲ್ಲಿ ಪರಿತಪಿಸುತ್ತ
ಪಟ್ಟ ಬಾಧ್ಯಸ್ಥ ಸ್ವಾಮಿ ಮರಿದೇವರನ್ನು ಹುಡುಕುತ್ತ
ಇಟ್ಟ ಗುರಿಯಂತೆ ಚನ್ನ ಬಸವಶಾಸ್ತ್ರಿಗಳ ಪರಿಚಯದತ್ತ
ವಟುವರ್ಯ ಶಿವಾನಂದರೇ ನಮ್ಮ ಮರಿದೇವರೆನ್ನುತ್ತ ೨೧
|| ಅ. ಪ. ||

ಕುರುಬೆಟ್ಟ ದೇಸಾಯಿ ಶ್ವೇತ ವರ್ಣ ವಾಜಿಯ ತಂದು
ಶರವೇಗ ಮತಿ ಈ ತೇಜಿ ಅಪ್ಪ ನಿಮ್ಮ ಪಾದಕೆ ಅರ್ಪಿತವೆಂದು
ಮುರುಘ ಶ್ರೀ ಜಯದೇವ ಗುರು ಚರಪುಂಗ ತಿಂಥಣಿಯಂದು
ಸವಾರ ಲಾಯದಲ್ಲಿ ಪೊಕ್ಕು ಅಶ್ವ ಕಂಡು ಉತ್ತಮವೆಂದು ೨೨
|| ಅ. ಪ. ||

ದುರ್ಗದ ಮಠಕ್ಕೆ ಈ ಹಯವು ಸೇರಲೆಂದು ಆಶಿಸಿ
ದುರ್ಗಮವಾದ ಮೋಹದಲ್ಲಿ ಇಚ್ಛೆ ಪಟ್ಟು ಬಯಸೀ
ಜಗದ್ಗುರ ರಥಿಕರ ಬಯಕೆಯನ್ನು ಇಡೇರಿಸಿ
ಸದ್ಗುರು ಸಂತೋಷದಲ್ಲಿ ಹಸಾದವೆಂದು ಹಯವ ಅರ್ಪಿಸೆ ೨೩
|| ಅ. ಪ. ||

ಬಗ್ಗಲಾರದ ಹಯವು ಹಾದಿಯಲ್ಲಿ ರಥಿಕನನ್ನು ತೂರಿ
ಸಗ್ಗ ಸಾಟಿ ಎನಿಸಿದಂಥ ಅರಭಾವಿ ತಾನದತ್ತ ಸಾರಿ
ತ್ಯಾಗಿ ಯೋಗಿರಾಜ ಮರಳಿ ಗುರು ಕೃಪೆ ದೋರಿ
ಯೋಗಿಪುಂಗ ಕೊಪ್ಪಳದ ಮಠಿವರಗೆ ಮುಟ್ಟಿಸಿದರಿ ೨೪
|| ಅ. ಪ ||

ಈಗ ಅರುವಿನಲಿ ಗುರುದೇವ ಅರವತ್ತು ದಾಟುತ್ತ
ಸಾಗಿ ಶಿವಾನಂದ ಮರದೇವರಿಗೆ ಅಧಿಕಾರ ಕೊಡುತ್ತ

ಬೋಗ ದೂರವಾಗಲೆಂದು ಹಳ್ಳದ ಗದ್ದುಗೆಯತ್ತ
ಯೋಗಸಾಧನೆ ಲಿಂಗಾನಂದ ಮೂಲಗುರು ಎಂದೆನುತ  ೨೫
|| ಅ. ಪ. ||

ಶಾಂತ ಮೂರ್ತಿ ಮಠದ ಅಧಿಕಾರವೆಲ್ಲ ಮರೆತು
ಲಿಂಗ ಸಂಗದಲ್ಲಿ ದುರುದುಂಡೀಶನನ್ನು ಅರಿತು
ಭಂಗ ಬಾರದಂತಿರೆ ಭಕ್ತ ಬಳಗ ಅಪ್ಪ ನಿಮ್ಮ ಕರಿತು
ಬಂದು ಬೇಡಿತು ಮುರುಗೋಡ ನಿಮ್ಮ ತಾನವಾಗಲೆನುತ  ೨೬
|| ಅ. ಪ. ||

ಇಲ್ಲಿಯು ಎಲ್ಲೆಲ್ಲಿಯು ದುರದುಂಡೀ ಶಿವಯೋಗಿಯು
ಅಲ್ಲಿಯು ಆತನೇ ಯಮ್ಮಯ್ಯ ದುರದುಂಡೀ ಶಿವಯೋಗಿಯು
ಎಲ್ಲಿ ನೋಡಿದಲ್ಲಿ ದುರದುಂಡೀ ಈಶ ವಾಸವಾಗಿಯು
ಇಲ್ಲಿಯು ಇರುವನಲ್ಲ ನಮ್ಮ ಮೂಲ ಗುರು ಇನ್ನೇಕೆ ಸಂಶಯು  ೨೭
|| ಅ. ಪ. ||

ಭಕ್ತರೆಲ್ಲರ ಮತ್ತಾಸೆ ಬಲವಾಗಿ ಗುರು ಕರುಣೆಯಿಂದ
ಮುಕ್ತ ಮನದಿ ಕನಸಿನಲಿ ಪೇಳೀ ಮುರುಗೋಡಕ್ಕೆ ಬಂದೆ
ಯುಕ್ತವಾದ ಗುರು ಸಲಹೆಯಂತೆ ಶಾಖಾಮಠದಲಿಂದು
ಸಕ್ತ ಜಂಗಮ ಮೂರುತಿ ಯೋಗಸಾಧನೆ ಗೈಯಲೆಂದು  ೨೮
|| ಅ. ಪ. ||

ತೊಟ್ಟ ದೀಕ್ಷೆ ಗಟ್ಟಿ ಉಳಿಯುವಂತೆ ನಡೆದೆಯಾ
ಕೊಟ್ಟ ಕಾಲ ಕೂಡಿ ಬಂದು ಅಧಿಕಾರ ಬಿಟ್ಟು ಕೊಟ್ಟೆಯಾ
ಎಟ್ಟ ಕಾಲ ಪುರುಷ ಬಂದನೆಂದು ಸ್ಥಾನ ಬಿಟ್ಟೆಯಾ
ಗಟ್ಟಿ ಮನದ ಭಕ್ತರಾಸೆಯಂತೆ ಮುರುಗೋಡವಾಸಗೈದೆಯಾ  ೨೯
|| ಅ. ಪ. ||

ಅಂಬಾದ ಅನುಭವ ಮಂಟಪ ಚಂದದ ಕರ್ತೃಗದ್ದುಗೆ
ವಂದಾಡ ಮುಂದಾಳು ಎಲ್ಲರು ಭಕ್ತರಾಗೆ

ಮಂದಾರ ಸಿರಿಗೂಡಿ ನಿತ್ಯ ದಾಸೋಹವಾಗೆ
ನಿಂದ್ಯ ನಿತ್ಯ ಗಾಳಿಗೂಡಿ ಅತಿಥಿ ಸತ್ಕಾರವಾಗೆ ೩೦
|| ಅ. ಪ. ||

ಲಿಂಗಪೂಜೆ ವೈಯಾಂತು ಪಲಿದು ಬಾತು
ಸಂತಸದ ಶಿವಯೋಗ ಸಾಧನೆ ಬಲಿತು ನಿಂತು
ಸಂತೆಯಂಪದಿ ಭಕ್ತ ಬಳಗ ಕೂಡಿ ಸತ್ಕಾರ್ಯವಾತು
ಅಂದ ಚಂದದಲ್ಲಿ ವಂದ್ಯರಾಗುತ್ತ ಮುರುಗೋಡದಲ್ಲಿ ನೆಲೆನಿಂತು ೩೧
|| ಅ. ಪ. ||

ಭಕ್ತ ಬಳಗವನ್ನೆ ಉದ್ಧರಿಸ ಬಂದ ಮಹೇಶಾ
ಮುಕ್ತಿ ಪಥವ ಕರುಣಿಸು ಮಹಾಂತರ ಅವತಾರಿ ಇಶಾ
ಭಕ್ತಗೊಲಿದು ಷಟಸ್ಥಲ ಬೋಧೆಗೈದೆ ಮಹಾಂತೇಶಾ
ಸಕ್ತ ಕಾಯಿಲೆಗಳನು ಗೆದೆವ ಮುರುಗೋಡ ಯೋಗೇಶಾ ೩೨
|| ಅ. ಪ. ||

ಮಠಕಂದು ಮೇಲ್ಮುದ್ದಿ ಹಾಕಲೆಂದು ಬಂದರು ಭಕ್ತರು
ಪಟ್ಟುಗೂಡಿ ಅಷ್ಟೆಲ್ಲ ಉಸುಕು ಸಿಮೆಂಟು ಸಿದ್ಧಗೊಳಿಸಿದರು
ಇಟ್ಟ ಸಿಮೆಂಟಿನಾ ಮುದ್ದಿ ಚದುರಿಹೋಗಲೆಂದು ವರುಣ ದೇವರು
ಎಟ್ಟೆತನದಿ ಗುಡುಗು ಗುಡಿಸಿ ಸಿಡಿಲು ಕೋಲ್ಮಿಂಚು ಚಿಮ್ಮಿದರು ೩೩
|| ಅ. ಪ. ||

ಶಿವ ಪೂಜೆಯಿಂದ ಬಂದ ಶಿವಯೋಗಿ ದೃಷ್ಟಿ ತಾಕಿಸಿ ಮಳೆರಾಯಗೇ
ಶಿವ ಕಾರ್ಯ ಕೆಡಿಸುವದು ತರವಲ್ಲ ನಿಮಗೆ ಇಳೆಯೊಳಗೆ
ಭೂಮಿಯಲ್ಲಿ ಮಳೆರಾಯ ನಿಮ್ಮ ಸೆಣಸಾಟ ಸತ್ಯವಾಗೇ
ಭವತಾಪದಿಂದ ಬೆಂದೊಡಲಿಗೆ ಸಹಾಯ ಅವಶ್ಯವಾಗೆ ೩೪
|| ಅ. ಪ. ||

ಬೆದರಿದನು ಮಳೆರಾಯ ಮಠಬಿಟ್ಟು ವೈಲಾಚೆ ಪೋಗುತ್ತ
ಚದುರಿದನು ಹಳ್ಳ ಕೊಳ್ಳ ಭೋರ್ಗರೆದು ತುಂಬಿ ಹರಿಸುತ್ತ

ಸಿದ್ಧಯೋಗಿಯ ಕಣ್ಣ ದೃಷ್ಟಿಯಿಂದ ಸ್ನೇಹ ಬಯಸುತ್ತ
ಸಿದ್ಧನಾಗಿ ಸುರಿದನು ವೇಲ್ಲವುದ್ದಿ ಘಟ್ಟಿಗೊಳ್ಳಲ್ಲೆಂದು ಇತ್ತ ೩೫
|| ಅ. ಪ. ||

ಗುರುಪಾದ ಪಾರ್ನಟ್ಟಿ ಹಣದ ಆಶೆಯಿಂದ
ಗುರುವೇ ನಿಮ್ಮನ್ನು ವಂಚಿಸಿ ಪಾರಾದೆನೆಂದಾ
ಮುರಿದವು ಕೈಕಾಲು ಇನ್ನೇನು ನಾನು ಗತಿಗೆಟ್ಟೆನೆಂದಾ
ಹರನ ರೂಪಿ ಗುರುವೆ ಇನ್ನೆಂದು ಹಣದಾಸೆ ಮಾಡೆನೆಂದಾ ೩೬
|| ಅ. ಪ ||

ವಂಚಿಸಿದ ಗುರುಪಾದ ಮುರಿದ ಕೈಕಾಲು ಎಳೆಯುತ್ತ
ಸಂಚು ನನ್ನದು ಅತಿಯಾಯ್ತು ತಂದೇ ಕಾಪಾಡುಎನ್ನುತ್ತ
ವಂಚಿಸಿದ ಅಪರಾಧಕ್ಕೆ ಸಾಕಯ್ಯ ತಕ್ಕ ಶ್ಯಾಸ್ತಿಯಾಯಿತು
ಜಂಗಮಯೋಗಿಯ ಪಾದಪಿಡಿದು ಪುಣ್ಯಾವಸಾನ ಹೊಂದಿತು ೩೭
|| ಅ. ಪ ||

ಭಕ್ತೆ ಸಾತವ್ವ ಶಿವಯೋಗಿ ಪಾದಕ್ಕೆ ಸಾಷ್ಟಾಂಗ ಹಾಕುತಲಿ
ಮುಕ್ತಮನದಿ ಬೇಡಿದಳು ಮಾಂಗಲ್ಯ ನನ್ನದು ಕಾಯುಲಿ
ಯುಕ್ತವಾದ ಸಲಹೆಯಿಂದ ದೀರ್ಘ ಸುಮಂಗಲೆ ಎನ್ನುತಲಿ
ಶಕ್ತನಾದ ಕಾಲಂ ಗೆದ್ದೆಯಪ್ಪ ಭಕ್ತಳ ಪತಿಯಿಂದ ಅಲ್ಲಿ ೩೮
|| ಅ. ಪ. ||

ಭಸಿತ ಲೇಪನಕೆ ಮಹಾರೋಗ ಮಾಯವಾಗೆ
ವಸುಧಿಗೀಶ ಹರನ ಕರುಣೆಯಲಿ ಪಾದೋದಕವಾಗೆ
ಏಸುರೋಗಗಳಿಂದ ಏಸು ವ್ಯಾಧಿಗಳಿಂದಲೋ ಮುಕ್ತರಾಗೆ
ಈಶ ಮಹಾಂತೇಶ ಕರಣ ಪ್ರಸಾದ ದೊರೆಯೇ ಭವಭವದೂರಾಗೆ ೩೯
|| ಅ. ಪ. ||

ಮುರುಗೋಡ ಮಠದಲ್ಲಿ ದಾಸೋಹ ನಡೆದಿತ್ತು ನೋಡಯ್ಯಾ
ಅಮೃತಹಸ್ತ ಸೋಂಕಿ ದೊರೆತ ಪ್ರಸಾದ ಆರೋಗ್ಯವಯ್ಯಾ

ಅರುವಿನ ಜನ್ಮ ಪಾವನ ಗೊಳಿಸಿದ ನನ್ನಯ್ಯ ಮಹಾಂತಯ್ಯಾ
ಆರರಿಗಳನ್ನು ತೂರಾಡಿದಾತ ಅನುಪಮ ಮೂರುತಿ ಅಪ್ಪಯ್ಯ ೪೦
॥ ಅ. ಪ. ॥

ಉಬ್ಬರದ ರೋಗದಲಿ ಭಕ್ತ ಬಾಳಪ್ಪ ಬಳಲುತಿರಲು
ಅಬ್ಬರಿಸ ಕಾಡುತಿಹ ಗುರುಬಸವರ ಕಿಡ್ನಿರೋಗ ಅಳಿದಿರಲು
ಇಬ್ಬರಂತೆ ಬಸೆಟ್ಟೆಪ್ಪನ ಪಾರ್ಸಿ ಬೇನೆ ಕಳೆದಿರಲು
ಇಬ್ಬಗೆಯ ದೀವೌಷಧ ಬಸಿತ ನುಡಿ ಮಂತ್ರ ನಿಮ್ಮಲಿರಲು ೪೧
॥ ಅ. ಪ. ॥

ಉದರದಲಿ ಉಸುಕಿನ ಬೆನಕನ ಬಚ್ಚಿಟ್ಟ ಹೊಟ್ಟೆಪ್ಪಾ
ಬೆವರದಲೆ ನಸುಕಿನ ಲಿಂಗಪೂಜೆ ಸಾಗಿತ್ತು ನೋಡಪ್ಪಾ
ಸದಾರ್ರ ಸರ್ಜನ್ ಜೀರಗಿ ಆಶ್ಚರ್ಯಗೊಂಡನಂತಪ್ಪಾ
ಇದು ಇಲ್ಲಿ ಈ ಕಲಿ ಕಾಲದಲ್ಲಿ ಅಚ್ಚರಿಯಲ್ಲದೇ ಇನ್ನೇನಪ್ಪಾ ೪೨
॥ ಅ. ಪ. ॥

ಭಾವ ನಿಮ್ಮಲ್ಲಿ ಜೀವ ನಿಮ್ಮಲ್ಲಿ ಜೀವ ಭಾವ ಎಲ್ಲ ನಿಮ್ಮಲ್ಲಿ
ನೀವೇ ಹರನ ರೂಪಿ ನೀವೇ ಗುರು ರೂಪಿ ಚರಮೂರ್ತಿ ಎಲ್ಲಾ
ಭಾವ ಭಕುತಿಗಿಂದು ಕಾಮಿತಾರ್ಥ ಸಿದ್ಧಿಯಾಗುವದಲ್ಲಾ
ಯಾವ ಅಡ್ಡಿ ಆತಂಕ ಇಲ್ಲದಂತೆ ನಿಮ್ಮೀ ಚರಿತೆ ಸಾಗಬೇಕಲ್ಲಾ ೪೩
॥ ಅ. ಪ. ॥

ಸ್ವಾಮಿ ಜಂಗಮಾರ್ಯ ಸಾಲಹಳ್ಳಿ ಹಿರಿಯ ಮಠದೊಡೆಯಾ
ಸ್ವಾಮಿ ಶಿವಯೋಗಿಯೇ ಯಮ್ಮಯ್ಯ ಅರಭಾವಿ ಅನುಭಾವಿಯೇ
ನೇಮ ಪೂರ್ಣ ಲಿಂಗಪೂಜಾ ನಿಧಿಯಾಗಿ ಹಳ್ಳದಾ ಗದ್ದುಗೆಯು
ಸೋಮ ಪ್ರಭೆಯಂತೆ ಲಿಂಗಾನಂದ ಹೊಂದಿ ಮುರುಗೋಡದಲ್ಲಿಯು ೪೪
॥ ಅ. ಪ. ॥

ಲೋಕೋದ್ಧಾರ ಗೈಯಬಂದ ಶಿವಪ್ರೇಮಿ ಶಿವಯೋಗಿಯೇ
ನಾಕಲೋಕಕಂತೂ ಕಡಿಮೆಯಲ್ಲ ಮುರುಗೋಡ ಠಾಣ ಮಹಿಮೆಯು

ಜೀಕಿದರು ಸಂತಸದ ಜೋಕಾಲಿ ಭಕ್ತರೆಲ್ಲ ನಿಮ್ಮೊದಾನವಾಗಿಯೇ
ಸಾಕು ಈ ಲೋಕದಾಟ ದುರುದುಂಡೀಶ ಕರೆಬಂದನೆಂದು ಹೊರಟೆಯಾ ೪೫
|| ಅ. ಪ ||

ನೂರೊಂದು ಕಳೆಯುತ್ತ ಲಿಂಗನಿಷ್ಠೆ ಯೋಗನಿಷ್ಠೆ ಬೆಳೆಸಿದಿರಾ
ಮೂರು ಕಾಲ ಲಿಂಗಪೂಜೆಯಿಂದ ಆರರಿ ತೂರಿ ಮೆರೆದಿರಾ
ಚರಿತೆಯ ಚಿರ ನೆನಹು ಉಳಿಸಿ ಲಿಂಗದಲ್ಲಿ ಮರೆಯಾದಿರಾ
ವೀರಶೈವ ಚರಮ ಗೀತೆ ಹಾಡಿ ದುರುದುಂಡೀಶನಾಜ್ಞೆಯಂತೆ
ಹೊರಟಿರಾ ೪೬
|| ಅ. ಪ. ||

ವೀರಶೈವ ಮತಕೆಂದು ತುಂಬಿ ಬಾರದಂಥ ಹಾನಿ ಮಾಡಿ
ವೀರ ವಿರತಿ ಭಕ್ತ ಬಳಗವನೆಲ್ಲ ಮರೆತು ದೂರ ಮಾಡಿ
ಕರುನಾಡ ವೀರಶೈವ ಮತಿಯರಿಗೆ ಷಟ್‌ಸ್ಥಲ ಬೋಧೆ ನೀಡಿ
ಹರ, ಗುರು, ಚರಮೂರ್ತಿ ದುರುದುಂಡೀಶ ಕರೆಯೆ ಓಗೊಟ್ಟು ಓಡಿ ೪೭
|| ಅ. ಪ. ||

ಹೊರಟು ಹತ್ತೊಂಭತ್ತನೂರ ಎಪ್ಪತ್ತೆರಡರ ಫಾಲ್ಗುಣದಲ್ಲಿ
ವೀರ ಷಟ್‌ಸ್ಥಲ ಪದವಿ ಹೊಂದಿ ಲಿಂಗದೇಹಿಯಾದ ಪರಿನೋಡಿಲ್ಲಿ
ಪಾರಮಾರ್ಥಿಕ ವಿಭವದೈಸಿರಿಯ ಸೂರೆ ಮಾಡಿ ಮೆರೆದರಲ್ಲಾ
ಮಾರ ಮರ್ದನ ದುರುದುಂಡೀಶನ ಪದವ ಹೊಂದುವಾಸೆಯಲ್ಲಿ ೪೮
|| ಅ. ಪ. ||

ಎಂದಿನಂತೆ ಇಂದು ಬೆಳಗು ಲಿಂಗ ಪೂಜಾನಂದ ಹೊಂದಿ
ಕಂದುಗೊರಳ ಕರೆಯನಾಲಿಸಿ ಮುಂತಾಗಿ ತಿಳಿಸೆಂದು
ಮಂದಿ ಅನೇಕರಿಗೆ ಪೇಳೆ ಇಂದು ಮುರುಗೋಡ ಋಣ ತೀರಿತೆಂದು
ಕಂದುಕೊರಳ ದುರುದುಂಡೀಶನ ಸಾನಿಧ್ಯ ನಮಗಾಯಿತೆಂದು ೪೯
|| ಅ. ಪ. ||

ಮತ್ತೆ ಎರಡು ಕಾಲದ ಲಿಂಗಪೂಜಾನಂದ ಹೊಂದಿದರು
ಇತ್ತ ಸಿದ್ಧರಾಗೆ ಶಿವಸಾಯುಜ್ಯ ಲಿಂಗ ಐಕ್ಯವೆಂದರು
ಮತ್ತೆ ದುರದುಂಡ ಪ್ರೀತ ಮಹಾಂತರು ಮಧ್ಯಾಹ್ನ ಪೂಜೆ ತೀರಿಸಿದರು
ಅತ್ತ ರಾತ್ರಿ ಎಂಟುಗಂಟೆ ಹದಿನೈದು ನಿಮಿಷಕ್ಕೆ ಲಿಂಗದೊಳಗಾದರು ೫೦
|| ಅ. ಪ. ||

ದಿಕ್ಕುಗಾಣದೇ ದೆಶಗೆಟ್ಟರೈ ಭಕ್ತ ಒಳಗವೆಲ್ಲಾ
ದಿಕ್ಕು ದಿಕ್ಕಿಗೆ ತಂತಿ ವರ್ತಮಾನ ಪತ್ರದಾಳನು ಬಿಟ್ಟರಲ್ಲಾ
ಸಿಕ್ಕ ಗಾಡಿಗಳೆಲ್ಲ ತುಂಬಿ ಸುತ್ತನಿಂದ ಬಂದು ಸೇರಿದರಲ್ಲಾ
ಅಕ್ಕಸಗೊಂಡು ಬೆಕ್ಕಸದಿಂದ ಅತ್ತು ಕರೆಯುತ್ತಿದ್ದರಲ್ಲಾ ೫೧
|| ಅ. ಪ. ||

ಧಾರವಾಡ ಮೃತ್ಯುಂಜಯ ಮಠದಪ್ಪ ಮಹಾಂತರು
ಬೇರೆ ಏನು ಕಾಣದೆ ಕೋರಿ ತಮ್ಮಯ ಸೇವೆಗೈಯುತಲವರು
ದಾರಿ ನೋಡುತಲಿಹರು ಭವ ಭಯಹಾರಿ ಮುರುಗೋಡೇಶರೇ
ಸೇರಿಕೊಂಡು ಲಿಂಗಪೂಜೆಗೈಯಲು ಏಳಿರೈ ಮಹಾಂತೇಶರೆ ೫೨
|| ಅ. ಪ. ||

ಅಪ್ಪನೇ ಮಹಾಂತಪ್ಪನೇ ನಿನ್ನ ವೀರ ವಿರತಿಗೆ ಸಂತಸಗೊಂಡವರು
ಅಪ್ಪ ದುರ್ಗದ ಯತಿವರೇಣ್ಯ ಸ್ವಾಮಿಗಳು ಈಗ ಬಂದಿಹರು
ಅಪ್ಪ ಮೂರು ಸಾವಿರದಪ್ಪಗಳು ಇತ್ತ ಬಂದಿಹರು ಏಳಿರಿ
ತೃಪ್ತಿಯಿಂದ ಅಪ್ಪಗಳೆಲ್ಲರ ಸ್ವಾಗತಕೆ ಸಜ್ಜಾಗಿ ೫೩
|| ಅ. ಪ. ||

ವರುಷಾರು ತಿಂಗಳು ಬರಿದಾದ ಮಠಕಾಗಿ ಮಹಾಂತೇಶರು
ಹರಿಸಿನಲಿ ಪೇಳಿದರು ಕನಸಿನಲಿ ಶಿವಯೋಗಿ ಮಹಾಂತಜ್ಜರು
ಚರ ಮೂರ್ತಿ ಬೈಲವಾಡ ನೀಲಕಂಠರು ಗುರುಪಟ್ಟ ಬಾಧ್ಯಸ್ಥರು
ಹಾರೈಕೆಯಂತೆ ಹಾವ್ನೂರ ಶ್ರೀಗಳು ವರದ ಹಸ್ತವಿಟ್ಟು ಪಟ್ಟಗಟ್ಟಿದರು ೫೪
|| ಅ. ಪ. ||

ಹತ್ತೊಂಭತ್ತುನೂರಾ ಎಪ್ಪತ್ತೆರಡರ ಆಗಷ್ಟ ಎಂಟರಂದು
ಸೋತ್ತನಿತ್ತರು ಗುರು ಪರಂಪರೆಯು ಪಟ್ಟ ಬರಿದಾಗದಿರಲೆಂದು
ಮುತ್ತಿನಂಥ ಸುಗುಣ ಶೀಲ ನೀಲಕಂಠರು ನೂತನ ಪಟ್ಟಾಧಿಕಾರಿಗಳೆಂದು
ಇತ್ತ ಜಯಧ್ವನಿ ಮೊಳಗೆ ಜಯ ಶಿವಯೋಗಿ ಮಹಾಂತಜ್ಜ ಎಂದು ೫೫
|| ಅ. ಪ. ||



## ನೀಡು ಮಂಗಲವ ಶ್ರೀ ನೀಲಕಂಠರಿಗೆ

ಮಂಗಲವ ಪಾಡುವೆ ಮಹಾಂತಜ್ಜ ವಲಿದು ಬಾ ಗುರು ನೀಲಕಂಠರಿಗೆ
ಮಂಗಲಾಂಗನೇ ಬೇಡುವೆನು ತೀಡು ಶಿವತತ್ವ ಗುರು ನೀಲಕಂಠರಿಗೆ
ಜಂಗಮಾರ್ಯಸ್ವಾಮಿ ಮಾಡು ಷಟ್ಸ್ಥಲ ಉಪದೇಶ ಗುರು ನೀಲಕಂಠಗೆ
ಲಿಂಗಪ್ರೇಮಿ ವೀರನಾಸೆಯಂತೆ ಉಸುರುಸುರಿನಲಿ ಸ್ಥಿರವಾಗು ಗುರು ನೀಲಕಂಠಗೆ
ಗುರು ಚರಮೂರ್ತಿ ಶಿವಯೋಗಿ ಷಟ್ಸ್ಥಲ ಧರ್ಮನೀತಿ ಅರುಹು ಯನಗೆ
ಸಿರಬಾಗಿ ಐದು ಮೇಲೊಂದು ಸಾರೆ ಬೇಡುವೆ ಷಟ್ಸ್ಥಲದಂತೆ ತಮಗೆ ೫೬



## ಶ್ರೀಮುರುಗೋಡ ಮಹಾಂತರಡಿ ಪಿಡಿದು ಸಾಗು

ಶಿವಯೋಗ ಸಾಧನೆಯಲ್ಲಿ ಲಿಂಗಪೂಜೆ ಬಲಿತು
ಭವ ಬಂಧನಗಳು ದೂರಾಗುವವು ಸತ್ಯತೆಯು ಒಲಿದು
ಶಿವಯೋಗ ಸಾಧನೆಯು ಮುಂಬೆಳಗು ತಾ ಒಳ ಹೊರಗು
ಮುರುಗೋಡ ಮಹಾಂತರಡಿ ಪಿಡಿದು ಸಾಗು ೧

ಶಿವಪೂಜೆ ಶತವರುಷ ಭಕ್ತರಿಗೆಲ್ಲ ಹರುಷ
ಶಿವ ಮಹಾದೇವ ಮಹೇಶನೊಲುಮೆ ಬಲು ಸರಸ
ಭವ ಭವ ಮೌಢ್ಯತೆಯು ನಾಶದಲ್ಲಿ ಈ ಮೆರಗು
ಮುರುಗೋಡ ಮಹಾಂತರಡಿ ಪಿಡಿದು ಸಾಗು ೨

ವೈರಾಗ್ಯ ಸದ್ಗುಣದ ದಿವ್ಯ ದೇಹಧಾರಿ
ವಿರಾಗಿ ವಸ್ತ್ರ ಕಲಾಪುರುಷ ಕೈವಲ್ಯ ವಿಹಾರಿ
ಕರುಣಿ ಶಿವಯೋಗಿಯು ಯೋಗ ಸಿದ್ಧಿಗೆ ತಲೆಬಾಗು
ಮುರುಗೋಡ ಮಹಾಂತರಡಿ ಪಿಡಿದು ಸಾಗು ೩

ಶರಣು ಶರಣಯ್ಯ ಹೇ ಸ್ವಾಮಿ ನಿಮ್ಮಡಿಗೆ
ಶರಣು ಶರಣೆಂಬೆ ಹೇ ಗುರುವೇ ನಿಮ್ಮಡಿಗೆ
ಶರಣೆಂಬೆ ವೀರ ಭಜಿಸಿ ಪಾಡಿದಂಥ ಮಹಾಂತ ದೇವರಡಿಗೆ
ಮುರುಗೋಡ ಮಹಾಂತರಡಿ ಪಿಡಿದು ಸಾಗು ೪

ಜಯ ಮಂಗಲವು ತುಂಗ ಜಂಗಮರಡಿಗೆ
ಜಯ ಮಂಗಲವು ಶಿವಯೋಗಿ ಸನ್ನುತರಿಂಗೆ
ಜಯ ಮಂಗಲವು ವೀರ ಪಾಡಿದ ಶಿವಯೋಗಿ ಸಾಮ್ರಾಟಗೆ
ಮುರುಗೋಡ ಮಹಾಂತರಡಿ ಪಿಡಿದು ಸಾಗು ೫



## — ಮುರುಗೋಡವಾಸ ಸಿರಿ —

ಶಿವಶರಣ ಮಣಿ | ಚಿರ ಮುಕ್ತಿ ಘನಾ |
ಸುಪ್ರಭಾತ ಕಿರಣ | ಶಂಕರ ವರ ಕರುಣಾ |
ಮಾಯಾರಿ ಮಲ ರಹಿತ | ಶುಭಕಾರಿ ನೀ ಭಕ್ತ ಪಿತಾ |
ಮೈಯೇರಿ ಶಿವ ಮತಾ | ಮೊದಕಾರಿ ಪಾಲನ ಘನಯುತಾ |
ದುರುದುಂಡೀ ಮಹೇಶನವತಾರಿ | ಮುರುಗೋಡ ವಾಸ ಸಿರಿ |
ಶುಭಕೋರಿ ಮುಂದ ಬೀರಿ | ಹರಿಸಿದಿರಿ ಶಿವತತ್ವ ಝರಿ |
ಆರರಿಯ ತೂರಿದವರು | ನೂರೊಂದು ಕಳೆದವರು |
ಶಿವಯೋಗ ಸಾಧಿಸಿ | ಹರತತ್ವ ತಿಳಿಸಿ | ಶುಭ ಕೀರ್ತಿ ಗಳಿಸಿ |
ಶಿವಯೋಗಿ ಮಹಾಂತದೇವರು ಮುರುಗೋಡ ಪುಣ್ಯ ಕೀರ್ತಿಯಾದಿರಿ||



## — ಸಮಾಪ್ತ —

ಜನತಾ ಪ್ರಿಂಟಿಂಗ್ ಪ್ರೆಸ್, ಗದಗ.